



ನವಕರ್ನಾಟಕ ಪ್ರಕಾಶನದ ಮಹತ್ವದ ಕೃತಿಯಾದ 'ವಿಜ್ಞಾನದ ಹೆದ್ದಾರಿಯಲ್ಲಿ ಮಹಾತಿರುವುಗಳು' ಬೆಂಗಳೂರಿನ ಗಾಂಧಿಭವನದಲ್ಲಿ 03-09-2017ರಂದು ಲೋಕಾರ್ಪಣೆ ಗೊಂಡಿತು. ಡಾ॥ ಟಿ. ಆರ್. ಅನಂತರಾಮು ಅವರ ಸಂಪಾದಕತ್ವದ ಈ ಕೃತಿಯನ್ನು ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆಯ ಅಧ್ಯಕ್ಷರಾದ ಡಾ॥ ಎ. ಎಸ್. ಕಿರಣ್ ಕುಮಾರ್ ಬಿಡುಗಡೆ ಮಾಡಿದರು. ಕೃತಿ ಪರಿಚಯವನ್ನು ಖ್ಯಾತ ಕಥೆಗಾರರಾದ ಶ್ರೀ ವಸುಧೇಂದ್ರ ಮಾಡಿದರು. ಡಾ॥ ಟಿ. ಆರ್. ಅನಂತರಾಮು ಪ್ರಾಸ್ತಾವಿಕ ನುಡಿಗಳನ್ನಾಡಿದರು ಮತ್ತು ಡಾ॥ ನಾ. ಸೋಮೇಶ್ವರ ಲೇಖಕರ ಪರವಾಗಿ ಮಾತನಾಡಿದರು. ಕೃತಿಯ ಎಲ್ಲ ಲೇಖಕರೂ ಉಪಸ್ಥಿತರಿದ್ದರು. ಹೆಚ್ಚಿನ ಸಂಖ್ಯೆಯಲ್ಲಿ ಆಸಕ್ತರು ಭಾಗವಹಿಸಿದ್ದರು.






# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು


ಭಗವದ್ಗೀತೆ : ಒಂದು ಅವಲೋಕನ – ೧೩. ಪ್ರಕೃತಿಯ ಗುಣಗಳು ಮತ್ತು ಪುರುಷೋತ್ತಮನ ಸರ್ವವ್ಯಾಪಿತ್ವ — ಜಿ. ರಾಮಕೃಷ್ಣ ... ೦೯

ನಿಲ್ಲದ ನೀರಾದ ಗೌರಿ — ನೂರ್ ಶ್ರೀಧರ್ ... ೧೫

ಚಿರ ನೆನಪಿಗೆ ಸರಿದ 'ಸೋದರಿತ್ವ'ದ ಪ್ರತಿಪಾದಕಿ – ಕೇಟ್ ಮಿಲೆಟ್ — ಡಾ|| ಎನ್. ಗಾಯತ್ರಿ ... ೩೨

ಅವ್ವ — ಮೂಲ ರಷ್ಯನ್ ಕಥೆ : ಯೂರಿ ಬನಾಟ್ಸ್ಕಿ, ಟಿ. ವಿ. ಮಾಗಳದ ... ೨೩

ಬೆಳದಿಂಗಳ ರಾತ್ರಿಯಲ್ಲಿ — ಮೂಲ : ಮಾಪಸ, ಕನ್ನಡಕ್ಕೆ : ಬಿ. ಕೆ. ಹನುಮಂತಯ್ಯ ... ೩೩

ಕಾವ್ಯಲೋಕ : ೧೧, ೨೨, ೨೪, ೨೬, ೩೧, ೪೭, ೪೮, ೫೨

ಅಂಬೇಡ್ಕರ್ ಮತ್ತು ಗಾಂಧಿ — ಎಸ್. ಮಾಲತಿ ... ೧೯

'ಅಸಮ್ಮತಿಯ ಅಭಿವ್ಯಕ್ತಿ' ಅನಿವಾರ್ಯವಾದಾಗ — ಡಾ|| ಗ್ಲ್ಯಾಡ್‌ಸನ್ ಜತ್ತನ್ನ ... ೩೭

ಖಾಸಗೀ ಹಕ್ಕು ಮೂಲಭೂತ ಹಕ್ಕುಗಳಲ್ಲೇ ಅಂತರ್ಗತ – ಸರ್ವೋಚ್ಚ ನ್ಯಾಯಾಲಯ — ಕೆ. ಎಸ್. ಪಾರ್ಥಸಾರಥಿ ... ೨೯

ಡೇರಾಗಳ ರಾಜಕೀಯ ಆರ್ಥಿಕತೆ — ಸತ್ಯಾನಂದ ಎಂ. ... ೪೧

ತೊಟ್ಟಿಲಿನಿಂದ ಚಟ್ಟದವರೆಗೆ — ರೇಣುಕಾಗಿರಿ ಬಾರಿಕಾಯಿ ... ೩೫

ಕಲಬುರ್ಗಿ : ಸಂಶೋಧನೆಯನ್ನು ಅರಸುತ್ತಾ... — ಝುಬೈರ್ ... ೩೯

ತ್ರಿವಳಿ ತಲಾಕ್ ಇನ್ನಿಲ್ಲ – ಸುಪ್ರೀಮ್‌ನ ಐತಿಹಾಸಿಕ ತೀರ್ಪು — ಎಂ. ಅಬ್ದುಲ್ ರೆಹಮಾನ್ ಪಾಷ ... ೪೩

ದಕ್ಕಿಯೂ ದಕ್ಕದ ೩೭೧ – ಜೆ ಮೀಸಲಾತಿ — ವೆಂಕಟೇಶ ಕೆ. ಜನಾದ್ರಿ ... ೨೮

ಮ್ಯಾನ್ಮಾರ್ : ರೋಹಿಂಗ್ಯಾಗಳ ಹತ್ಯಾಕಾಂಡ, ನಿರಾಶ್ರಿತರ ಸಮಸ್ಯೆ — ಸಿ. ಆರ್. ಕೃಷ್ಣರಾವ್ ... ೫೯

ಧರ್ಮಗಳ ಧರ್ಮವಾದ 'ಮಾನವ ಧರ್ಮ' ಮನುಕುಲದ ಸಂಜೀವಿನಿ — ಜ. ಹೊ. ನಾರಾಯಣಸ್ವಾಮಿ ... ೪೯

ಹೊಸ ಭಾಷ್ಯ ಬರೆದಿರುವ ಸಿನಿಮಾ – ಒಂದು ಮೊಟ್ಟೆಯ ಕಥೆ — ಶಾಂತಾ ನಾಗರಾಜ್ ... ೫೪

ಹಗಲು ವೇಷಗಾರರ ಚಿತ್ರಕಲೆ — ಡಾ|| ಸಂತೋಷಕುಮಾರ ಕುಲಕರ್ಣಿ ... ೬೧

ಸ್ವತಂತ್ರ ಭಾರತ – ಆರ್ಥಿಕ ಪ್ರಗತಿಯ ಹಾದಿ — ಶಂಕರನಾರಾಯಣ ... ೫೭

ನಾನು ಓದಿದ ಪುಸ್ತಕ : ತೂಲಹಳ್ಳಿ ಅವರ ಸಂಶೋಧನೆ — ಡಾ|| ರಹಮತ್ ತರೀಕೆರೆ ... ೫೧

ವಿಶ್ವವೀಕ್ಷಣೆ : ಡೋಕ್ಲಾಮದಿಂದ ಕ್ಸಿಯಾಮೆನ್‌ವರೆಗೆ — ಸೀಯಾರ್ಕೆ ... ೫೩

ನಭಾವಲೋಕನ : ಶುಕ್ರ–ಮಂಗಳ ಸಮಾಗಮ — ಡಾ|| ಬಿ. ಎಸ್. ಶೈಲಜಾ ... ೧೮

ಹೊಸ ಓದು : ಕಲ್ಲೇಶ್ ಕುಂಬಾರ್, ಸಿ. ಎಸ್. ಭೀಮರಾಯ, ಎನ್. ಆಶಾ ೫೬

ಸಾದರ ಸ್ವೀಕಾರ ... ೧೪



**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ, ವಿ. ಗೋಪಾಲ್, ಗೋಪಿ ಹಿರೇಬೆಟ್ಟು, ಜಿ. ಎಂ. ಬೊಮ್ಮನಳ್ಳಿ, ಸುರೇಶ ವಗ್ಗಾ, ರಂಗನಾಥ್ ಸಿದ್ದಾಪುರ

**ಮುಖಪುಟದಲ್ಲಿ :** ಗೌರಿ ಲಂಕೇಶ್

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಗುರುಗ್ರಾಮದ ರೇಯನ್ ಇಂಟರ್‌ನ್ಯಾಷನಲ್ ಪಬ್ಲಿಕ್ ಶಾಲೆಯ ಏಳು ವರ್ಷದ ಬಾಲಕನ ಮೇಲೆ ನಡೆದ ಲೈಂಗಿಕ ದೌರ್ಜನ್ಯ ಮತ್ತು ಬರ್ಬರ ಹತ್ಯೆ ಇತ್ತೀಚೆಗೆ ಜರುಗಿದ ಪ್ರಕರಣ. ಇದರ ಹಿಂದೆಯೇ ಮತ್ತೊಂದು ಪ್ರಕರಣ ದೆಹಲಿಯ ಪ್ರತಿಷ್ಠಿತ ಶಾಲೆಯೊಂದರಲ್ಲಿ ಜರುಗಿತು. ಇಂಥ ದೌರ್ಜನ್ಯಗಳು ಪದೇ ಪದೇ ಒಂದೇ ರೀತಿಯಲ್ಲಿ ಸಂಭವಿಸುತ್ತಿರುವುದೀಗ ಕಳವಳಕಾರಿ ಹಾಗೂ ಇಡೀ ದೇಶದ ಗಮನವನ್ನೇ ಸೆಳೆದಿದೆ. ಹೆಚ್ಚಾಗಿ ಇಂಥ ಘಟನೆಗಳೆಲ್ಲವೂ ಪ್ರತಿಷ್ಠಿತ, ಅಂತರರಾಷ್ಟ್ರೀಯ ಮಟ್ಟದ್ದು ಎಂದು ಕರೆದುಕೊಳ್ಳುವ, ಶ್ರೀಮಂತರ ಮಕ್ಕಳು ಇರುವ ಶಾಲೆಗಳಲ್ಲೇ ಸಂಭವಿಸುತ್ತಿವೆ. ಬೋಧಕೇತರ ಸಿಬ್ಬಂದಿಯೇ ಅಪರಾಧ ಎಸಗಿದವರಾಗಿರುತ್ತಾರೆ. ಇದು ಹಲವು ಅನುಮಾನಗಳಿಗೆ ಎಡೆಕೊಟ್ಟಿದೆ. ಇಂಥ ಶಾಲೆಗಳಲ್ಲಿ ಮಕ್ಕಳ ಸುರಕ್ಷತೆಗೆ ಗಮನ ಕೊಡದಿರುವುದು ಅಕ್ಷಮ್ಯ. ಪ್ರಕರಣಗಳು ಸಂಭವಿಸಿದಾಗಲೇ ಶಾಲೆಗಳ ಆಡಳಿತ, ಸರಕಾರದ ಇಲಾಖೆಗಳು ಎಚ್ಚೆತ್ತುಕೊಳ್ಳುವುದು. ಮಕ್ಕಳ ಸುರಕ್ಷತೆಯ ಪ್ರಶ್ನೆ ಹೈಕೋರ್ಟು ಹಾಗೂ ಸುಪ್ರೀಮ್ ಕೋರ್ಟ್‌ಗಳ ಗಮನಕ್ಕೂ ಬಂದಿದೆ. ಅವು ಸರಕಾರವನ್ನು, ಶಾಲೆಗಳ ಆಡಳಿತವನ್ನು ತರಾಟೆಗೆ ತೆಗೆದುಕೊಂಡಿವೆ. ಪ್ರಕರಣಗಳು ಜರುಗಿದ ಕೆಲದಿನಗಳಾದ ಮೇಲೆ ಈ ಶಾಲೆಗಳು ಏನೂ ದುರ್ಘಟನೆ ನಡೆದಿಲ್ಲವೇನೋ ಎಂಬಂತೆ ಮತ್ತೆ ತಲೆ ಎತ್ತುತ್ತವೆ. ಶಿಕ್ಷಣದ ವ್ಯಾಪಾರೀಕರಣ, ಎಗ್ಗಿಲ್ಲದ ಪೈಪೋಟಿ, ಶಿಕ್ಷಕ ಹಾಗೂ ಇತರ ಸಿಬ್ಬಂದಿಯ ನೇಮಕಾತಿಯಲ್ಲಿನ ದೋಷ, ಮುಖ್ಯವಾಗಿ ಸುರಕ್ಷತೆಯ ನಿರ್ಲಕ್ಷ್ಯ ಇವೆಲ್ಲ ಕಾರಣಗಳು ಎಂದು ಊಹಿಸಬಹುದು. ಮಕ್ಕಳು ದೌರ್ಜನ್ಯಗಳಿಗೆ ಬಲಿಯಾಗುತ್ತಿರುವುದು ನಾಗರಿಕ ಸಮಾಜ ತಲೆತಗ್ಗಿಸುವಂಥದ್ದು. ಹಾಗಿರುವಾಗ ಸರಕಾರ ಈಗಲಾದರೂ ಎಚ್ಚೆತ್ತು ಸೂಕ್ತ ಕ್ರಮ ಕೈಗೊಳ್ಳುವುದು ಅಗತ್ಯ. ಹೆಚ್ಚಾಗಿ ಇಂಥ ಶಾಲೆಗಳು ಪ್ರಭಾವೀ ವ್ಯಕ್ತಿಗಳು ಹಾಗೂ ಆಡಳಿತಕ್ಕೆ ಹತ್ತಿರ ಇರುವಂಥವರಿಗೇ ಸೇರಿದ್ದಾಗಿರುತ್ತವೆ. ಮಕ್ಕಳನ್ನು ಶಾಲೆಗೆ ಕಳಿಸುವ ಪೋಷಕರು ಸುರಕ್ಷತೆಗೆ ಶಾಲಾ ಆಡಳಿತವನ್ನೇ ಅವಲಂಬಿಸಿರುತ್ತಾರೆ. ಹಾಗಾಗಿ ಈ ಬಾಬತ್ತು ಶಾಲೆಗಳ ಹೊಣೆ. ಸರಕಾರ ಕಿಂಚಿತ್ತೂ ತಡ ಮಾಡದೆ ಶಾಲಾ ಆಡಳಿತಗಳ ಮೇಲೆ ಸುರಕ್ಷತಾ ಕ್ರಮಗಳನ್ನು ಅನುಸರಿಸುವಂತೆ ಕ್ರಮ ಕೈಗೊಳ್ಳುವುದು ಅತ್ಯಗತ್ಯ.

✴ ✴ ✴

ಭಿನ್ನಮತವನ್ನು ಸಹಿಸದವರು ಹಿಂಸಾಚಾರಕ್ಕೆ ಇಳಿದು ದಮನಗೊಳಿಸುವ ಕೃತ್ಯದಲ್ಲಿ ತೊಡಗುವುದು ಹಿಂದಿನಿಂದ ಬಂದದ್ದು. ಇಂಥ ಕೃತ್ಯಗಳನ್ನು ಜರುಗಿಸುವವರೂ ಕೂಡ ಧಾರ್ಮಿಕ ಮೂಢನಂಬಿಕೆಯ ಜನ. ಶತಮಾನಗಳ ಕಾಲದಿಂದ ಇದು ನಡೆದುಕೊಂಡು ಬಂದಿದೆ. ಸಾಕ್ರಟೀಸ್, ಗೆಲಿಲಿ ಗೆಲಿಲಿಯೋ ಮುಂತಾದವರು ಅದಕ್ಕೆ ಸಾಕ್ಷಿ. ಮೂಲಭೂತವಾದಿಗಳು, ಸಂಪ್ರದಾಯಸ್ಥರು ಎಂಥದೇ ದುಷ್ಕೃತ್ಯ ನಡೆಸಿದರೂ, ದೌರ್ಜನ್ಯ ನಡೆಸಿದರೂ ಭಿನ್ನಮತವನ್ನು ಹತ್ತಿಕ್ಕಲು ಇದುವರೆಗೂ ಸಾಧ್ಯವಾಗಿಲ್ಲ. ಒಂದೊಂದು ಪ್ರಕರಣ ಜರುಗಿದಾಗಲೂ ಅದರ ವಿರುದ್ಧವಾಗಿ ಸಿಡಿದೆದ್ದು ನಿಂತು ಹೊಸಬರು ಮುಂದೆ ಬರುತ್ತಾರೆ. ಇದು ಪ್ರಕೃತಿನಿಯಮ ಎನ್ನೋಣವೆ ? ಭಿನ್ನಮತವನ್ನು ಹೊಸಕಿಹಾಕುವುದು ದುಸ್ಸಾಧ್ಯ. ಈ ಸತ್ಯವನ್ನು ಮೂಲಭೂತವಾದಿಗಳು, ಸಂಪ್ರದಾಯ ಶರಣರು ಆದಷ್ಟು ಬೇಗ ಅರಿತುಕೊಂಡರೆ ಸಮಾಜಕ್ಕೆ ಒಳಿತು.

ಈಚೆಗೆ ಮೋದಿ ಸರಕಾರ ಅಧಿಕಾರಕ್ಕೆ ಬಂದ ಮೇಲೆ ಅಲ್ಪಸಂಖ್ಯಾತರ ಮೇಲೆ, ದಲಿತರ ಮೇಲೆ, ವಿರೋಧಿಗಳ ಮೇಲೆ ಹಿಂದುತ್ವ ಪ್ರತಿಪಾದಕರ ದಾಳಿಗಳು ಹೆಚ್ಚಾಗಿವೆ. ತಿನ್ನುವ ಆಹಾರ – ವಿಹಾರ, ವಿಚಾರಗಳ ಮೇಲೆ ನಿರ್ಬಂಧಗಳ ಹೇರಿಕೆ, ಹಿಂಸಾಚಾರ ಇವುಗಳು ಮೇಲಿಂದ ಮೇಲೆ ವರದಿಯಾಗುತ್ತಿವೆ. ಬುದ್ಧಿಜೀವಿಗಳು, ಚಿಂತಕರು, ವಿಚಾರವಾದಿಗಳು ಮುಂತಾದವರು ಬಲಿಯಾಗುತ್ತಿದ್ದಾರೆ. ಒಂದು ರೀತಿಯ ಭಯದ ವಾತಾವರಣ ಸೃಷ್ಟಿಯಾಗಿಬಿಟ್ಟಿದೆ. ಹಿಂದುತ್ವವಾದಿಗಳ ಆಕ್ರೋಶಕ್ಕೆ ಯಾರು, ಯಾವಾಗ ಬಲಿಯಾಗುತ್ತಾರೋ ಎನ್ನುವ ಭೀತಿ ಆವರಿಸಿಕೊಂಡಿದೆ. ಅಪರಾಧ ಸಂಭವಿಸಿದಾಗ ಕೊಲೆಗಡುಕರು, ದಾಳಿ ನಡೆಸಿದವರು ಪತ್ತೆಯಾಗದಿರುವುದು

**(೬ನೇ ಪುಟಕ್ಕೆ)**

ತಿಂಗಳ ಪತ್ರಿಕೆ
**ಹೊಸತು**
ನೆನ್ನೆಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೧೯ ಸಂಚಿಕೆ-೩ ಅಕ್ಟೋಬರ್ ೨೦೧೭

■ **ಗೌರವ ಸಂಪಾದಕ**

ಜಿ. ರಾಮಕೃಷ್ಣ

■ **ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

■ **ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ರಮೇಶ ಉಡುಪ

■ **ಮುದ್ರಣ**

ಶ್ರೀ ವಿನಾಯಕ ಪ್ರಿಂಟರ್ಸ್
೭೩೮/೧೦, ೬೦ನೇ ಅಡ್ಡರಸ್ತೆ
೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು – ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧
ದೂರವಾಣಿ : ೨೨೧೬೧೯೧೧, ೨೨೧೬೧೯೧೨
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**

# ಸಂಪಾದಕೀಯ

## ದಮನವೇ ಧರ್ಮದ ಮೂಲವಯ್ಯ

ದಯವೇ ಧರ್ಮದ ಮೂಲವಯ್ಯ ಎಂದು ಸಾರಿದ ನೆಲದಲ್ಲಿ ದಮನವೇ ಧರ್ಮದ ಮೂಲವಯ್ಯ ಎಂಬ ಮನೋಭಾವ ಬೆಳೆಯುತ್ತಿರುವುದು, ಧರ್ಮ ರಕ್ಷಣೆಗೆ ಧರ್ಮಾಂಧರೇ ಸೈನಿಕರಾಗುವುದು ಧರ್ಮಗಳು ತಲುಪಿರುವ ಸ್ಥಿತಿಯನ್ನು ತೋರಿಸುತ್ತದೆ. ಖಡ್ಗವು ಮತಧರ್ಮ ಸ್ಥಾಪನೆಗೆ ಸಹಕಾರಿಯಾಗಬಹುದೇ ಹೊರತು ಧರ್ಮದ ಉಳಿವು ಮತ್ತು ಬೆಳವಣಿಗೆಗಲ್ಲ. ಯಾವುದೇ ಧರ್ಮ ಖಡ್ಗದ ಆಸರೆಯಲ್ಲಿ ಬದುಕುತ್ತದೆ ಎಂದರೆ ಅದು ತನ್ನ ಆಂತರಿಕ ಸತ್ವವನ್ನು ಕಳೆದುಕೊಳ್ಳುತ್ತಿದೆ ಎಂದರ್ಥ.

ಗೌರಿ ಲಂಕೇಶ್ ಹತ್ಯೆ ಚಿಂತಕರ ಹತ್ಯೆಯ ಸಾಲಿಗೆ ಇನ್ನೊಂದು ಸೇರ್ಪಡೆ. ದಾಭೋಲ್ಕರ್, ಪಾನ್ಸರೆ, ಕಲಬುರ್ಗಿಯವರ ಹತ್ಯೆಯ ಆರೋಪಿಗಳ ಹುಡುಕಾಟ ಇನ್ನೂ ನಡೆದಿರುವಾಗಲೇ ಗೌರಿ ಹತ್ಯೆ ನಡೆದಿದೆ. ಐದು ಅಡಿ ಎತ್ತರ, ಸುಮಾರು ನಲವತ್ತು ಕಿಲೊ ತೂಕದ ಒಬ್ಬ ಹೆಣ್ಣುಮಗಳನ್ನು ಕೊಂದರೆ ಮಾತ್ರ ಅವಳ ಧ್ವನಿಯನ್ನು ಅಡಗಿಸಬಹುದು ಎಂಬ ತೀರ್ಮಾನಕ್ಕೆ ಕೊಲೆಗಾರರು ಬಂದಿದ್ದಾರೆಂದರೆ ಅದು ಗೌರಿಯ ಶಕ್ತಿಯನ್ನು ತೋರಿಸುತ್ತದೆ, ಕೊಲೆಗಾರರ ಹೇಡಿತನವನ್ನು ತೋರಿಸುತ್ತದೆ. ಚಿಂತನೆಯನ್ನು ಖಡ್ಗದಿಂದಾಗಲೀ, ಬಂದೂಕಿನಿಂದಾಗಲೀ ತಡೆದ ಉದಾಹರಣೆಗಳಿಲ್ಲ. ಬುದ್ಧ, ಬಸವ, ಗಾಂಧಿ ಇವರೆಲ್ಲ ದಮನಕ್ಕೊಳಗಾದವರೇ. ಆದರೆ ಅವರು ತಮ್ಮ ಜೀವಿತಕಾಲಕ್ಕಿಂತಲೂ ಹೆಚ್ಚಿನ ಅನುಯಾಯಿಗಳನ್ನು ಇಂದು ಹೊಂದಿದ್ದಾರೆ. ತಮ್ಮ ಚಿಂತನೆಗಳ ಮೂಲಕವೇ ಬದುಕಿದ್ದಾರೆ.

ಗೌರಿ ಹತ್ಯೆಯ ವ್ಯಕ್ತಿಗಳು ಯಾರೆಂದು ಗೊತ್ತಿಲ್ಲ. ಆದರೆ ಕೊಲೆಯ ಹಿಂದಿನ ಶಕ್ತಿ ಯಾವುದೆಂದು ಗೊತ್ತು. ಇದಕ್ಕೆ ಗೌರಿ ಹತ್ಯೆಯ ನಂತರದ ವಿದ್ಯಮಾನಗಳೇ ಸಾಕ್ಷಿ ಒದಗಿಸುತ್ತವೆ. ಗೌರಿಯ ಹತ್ಯೆ ಮಾಡಿದವರು ಅಡಗಿಕೊಂಡಿದ್ದಾರೆ. ಆದರೆ ಕೊಲೆಪಾತಕ ಮನಸ್ಸುಗಳು ವಿಜೃಂಭಿಸುತ್ತಿವೆ. ನಿಜ, ಕೊಲೆಪಾತಕಿಗಳು ಇಂಥವರೇ ಎಂದು ನಿರ್ದಿಷ್ಟವಾಗಿ ಹೇಳಲಾಗುವುದಿಲ್ಲ. ಆದರೆ ಗೌರಿ ಕೊಲೆಯಾದ ತಕ್ಷಣ ಪ್ರಗತಿಪರರು, ಗೌರಿಯ ಸಹಚಿಂತಕರು ಸಹಜವಾಗಿಯೇ ಕೋಮುವಾದಿಗಳ ಮೇಲೆ ಅನುಮಾನ, ಆರೋಪ ವ್ಯಕ್ತಪಡಿಸಿದರು. ಅದಕ್ಕೆ ಸಾಂದರ್ಭಿಕ ಕಾರಣಗಳಿವೆ. ಬಸವಣ್ಣನವರಾದಿಯಾಗಿ ವಚನಕಾರರ ಮೇಲಿನ ದಾಳಿ ಯಾರಿಂದ ಮತ್ತು ಯಾವ ಕಾರಣಕ್ಕಾಗಿ ಆಗಿದೆ, ಗಾಂಧಿ ಹತ್ಯೆ ಯಾರಿಂದ ಮತ್ತು ಯಾವ ಕಾರಣಕ್ಕಾಗಿದೆ ಎಂಬುದು ಇತಿಹಾಸದಲ್ಲಿ ದಾಖಲಾಗಿದೆ. ಹಾಗೆಯೇ ಈ ದಶಕದಲ್ಲಿ ನಡೆದ ಈ ನಾಲ್ವರು ಚಿಂತಕರ ಹತ್ಯೆಯ ಹಿಂದೆ ಅದೇ ರೀತಿಯ ಶಕ್ತಿಗಳಿವೆ ಎಂಬ ಅನುಮಾನ ಬರುವುದು ಸಹಜ. ಗೌರಿ ಹತ್ಯೆಯ ನಂತರ ಕರ್ನಾಟಕದಲ್ಲಿ ಆದ ಬೆಳವಣಿಗೆ ಆತಂಕ ಪಡಬೇಕಾದದ್ದು. ಹತ್ಯೆಗೊಳಗಾದವರ ಸಹಚಿಂತಕರು, ಬಂಧುಗಳು ಆತಂಕಕ್ಕೊಳಗಾದರೆ, ಕೆಲವು ಸ್ವಯಂಘೋಷಿತ ಬಲಪಂಥೀಯರು ಆಕ್ರೋಶಕ್ಕೊಳಗಾದದ್ದು ಹೊಸ ಹಾಗೂ ಅಪಾಯಕಾರಿ ಬೆಳವಣಿಗೆ. ಹತ್ಯೆಯಾದ ತಕ್ಷಣ ಬಲಪಂಥೀಯ ಹಾಗೂ ನಿರ್ದಿಷ್ಟ ಕೋಮುವಾದಿ ಸಂಘಟನೆಯ ಹೆಸರನ್ನೇಕೆ ಹೇಳುತ್ತೀರಿ ಎಂಬ ಆಕ್ರೋಶ ಇವರದು. ಈ ಆಕ್ರೋಶ ಕೇವಲ ಪ್ರತಿರೋಧ ಹಾಗೂ ಖಂಡನೆಗೆ ನಿಲ್ಲುವುದಿಲ್ಲ. ಆಗಲೇ ದೈಹಿಕವಾಗಿ ಕೊಲೆಯಾದ ಗೌರಿಯ ವ್ಯಕ್ತಿತ್ವದ ಕೊಲೆಗೆ ಈ ಸ್ವಯಂಘೋಷಿತ ಬಲಪಂಥೀಯ ಚಿಂತಕರೆಂದುಕೊಳ್ಳುವವರು ಇಳಿಯುತ್ತಾರೆ. ಗೌರಿಯ ಸಾವಿನ ದುಃಖದ ಕಣ್ಣೀರು ಇನ್ನೂ ಹಸಿಯಾಗಿರುವಾಗಲೇ ಈ ಕೋಮುವಾದಿ ಬಲಪಂಥೀಯ ಚಿಂತಕರು ಗೌರಿಯ ವ್ಯಕ್ತಿತ್ವಹರಣ ಮಾಡುವ ರೀತಿಯಲ್ಲಿ ಬರೆದದ್ದನ್ನು ಗಮನಿಸಿದರೆ ಗೌರಿಯ ನಿಜವಾದ ಕೊಲೆಪಾತಕರು ಇವರೆ. ಇವರ ಬಾಯಿಯಿಂದ, ಲೇಖನಿಯಿಂದ ಹತ್ಯೆಯನ್ನು ಖಂಡಿಸುವ ಒಂದು ಮಾತೂ ಬರುವುದಿಲ್ಲ. ಬದಲಾಗಿ, ವಿಕೃತ ಚಿಂತನೆಗಳೇ ಹೊರಬರುತ್ತಿವೆ. ಹತ್ಯೆಯ ವೈಭವೀಕರಣವಾಗಲೀ

ಮಾನ್ಯತೆಯಾಗಲೀ ಪ್ರಜಾಸತ್ತೆಗೆ ಒಳ್ಳೆಯದಲ್ಲ. ಎಲ್ಲ ಚಿಂತನೆಗಳಿಗೂ ಬೆಂಬಲಿಗರು ಇದ್ದೇ ಇರುತ್ತಾರೆ. ಇಲ್ಲವಾದರೆ ಭಾರತದಂಥ ನೆಲದಲ್ಲಿ ಸಾವಿರಾರು ವರ್ಷಗಳಿಂದ ಧರ್ಮ ಮತ್ತು ಪ್ರಭುತ್ವಗಳು ಒಂದಾಗಿ ಎಷ್ಟೇ ದಾಳಿ, ಹತ್ಯೆ ನಡೆಸಿದರೂ ಚಿಕ್ಕಪುಟ್ಟ ಜಾತಿ, ಧರ್ಮ, ವಿಭಿನ್ನ ಚಿಂತನೆಯ ಪಂಥಗಳು ಉಳಿದು, ಬೆಳೆದುಬಂದಿವೆ. ಇಷ್ಟಕ್ಕೂ ಕ್ರಿಯೆಗೊಂದು ಪ್ರತಿಕ್ರಿಯೆ ಇರುತ್ತದೆ, ಇರಬೇಕು ಎಂಬ ಪ್ರಜಾಸತ್ತಾತ್ಮಕ ಮನೋಭಾವ ಇಲ್ಲದಿರುವುದು ಫ್ಯಾಸಿಸ್ಟ್ ಲಕ್ಷಣವನ್ನು ತೋರಿಸುತ್ತದೆ. ಕೊಡು–ಕೊಳ್ಳುವ ಮನೋಭಾವ ಎಲ್ಲ ಧರ್ಮಗಳಲ್ಲಿ, ಧರ್ಮಾನುಯಾಯಿಗಳಲ್ಲಿದೆ. ಆದರೆ ಧರ್ಮಾಂಧರಲ್ಲಿ ಮಾತ್ರ ಇಲ್ಲ. ಕಾರಣ ಅವರಿಗೆ ಧರ್ಮದಾಚೆಯ ಹಿತಾಸಕ್ತಿಗಳಿರುತ್ತವೆ. ರಾಜಕೀಯ ಧರ್ಮವನ್ನು, ಧರ್ಮ ರಾಜಕೀಯವನ್ನು ಬಳಸಿಕೊಳ್ಳುವುದು ತಮ್ಮ ಅಸ್ತಿತ್ವ ಮತ್ತು ಅಸ್ಮಿತೆಯ ಕಾರಣಕ್ಕಾಗಿಯೇ ಹೊರತು ತತ್ವಶಾಸ್ತ್ರೀಯ ಅಥವಾ ರಾಜ್ಯಶಾಸ್ತ್ರೀಯ ಕಾರಣಕ್ಕಲ್ಲ. ಧರ್ಮ, ಧರ್ಮದ ಚಿಂತನೆಗಳು, ಆಚರಣೆಗಳು, ಅಪ್ರಸ್ತುತಗೊಳ್ಳ ತೊಡಗಿದಾಗ, ರಾಜಕಾರಣ ಜನರ ಮಧ್ಯೆ ತನ್ನ ಬೇರುಗಳನ್ನು ಕಳೆದುಕೊಳ್ಳತೊಡಗಿದಾಗ ಇಂಥ ಹತ್ಯಾ ಮನೋಭಾವಗಳು ವಿಕೃತಿಗಿಳಿಯುತ್ತವೆ. ಸ್ವಯಂಘೋಷಿತ ಬಲಪಂಥೀಯ ಚಿಂತಕರೆನ್ನಿಸಿಕೊಳ್ಳುವವರು ಈ ವಿಷಯಗಳನ್ನು ಗಮನಿಸಬೇಕು. ಕೊಲೆಗಳೇ ಚಿಂತನೆಗಳ ಸಮರ್ಥನೆಗೆ ಮಾರ್ಗವಾದರೆ ಅದು ನಾಗರಿಕ ಯುದ್ಧ (ಸಿವಿಲ್ ವಾರ್)ಕ್ಕೆ ಕುಮ್ಮಕ್ಕು ಕೊಡುತ್ತದೆ. ಒಂದು ತತ್ವವನ್ನು ಪ್ರತಿಪಾದಿಸಿದ ಕಾರಣಕ್ಕೆ ಕೊಲೆಯಾದರೆ ಅದು ನಾಗರಿಕ ಸಮಾಜವಲ್ಲ. ಆ ಕೊಲೆಯನ್ನು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಸಮರ್ಥಿಸುವುದು ಅನಾಗರಿಕತನಕ್ಕಿಂತಲೂ ಹೀನವಾದದ್ದು. ಇಂಥ ಬೆಳವಣಿಗೆಯನ್ನು ನಾವು ಇಂದಿನ ಪ್ರಜಾಸತ್ತೆಯಲ್ಲಿ ಕಾಣುತ್ತಿದ್ದೇವೆ. ಇದು ಅಪಾಯಕಾರಿಯಾದದ್ದು. ಇದು ಹೊಸದೇನೂ ಅಲ್ಲ. ಗಾಂಧಿಯ ಹತ್ಯೆಯಾದಾಗ ಗೋಡ್ಸೆ ನಮ್ಮವನಲ್ಲ ಎಂದು ಹೇಳುತ್ತಲೇ ಹತ್ಯೆಯನ್ನು ಸಂಭ್ರಮಿಸಿ ಹಾಲು ಸಕ್ಕರೆ ಹಂಚಿದವರು ನಮ್ಮ ಮಧ್ಯೆಯೇ ಇದ್ದಾರೆ. ಅಂಥ ವಿಕೃತಿಯನ್ನೇ ಸಿದ್ಧಾಂತವಾಗಿಸಿಕೊಂಡ ಕೆಲವರು ಗೌರಿ ಹತ್ಯೆಯನ್ನು ಸಂಭ್ರಮಿಸುತ್ತಿರುವುದು ಮತ್ತು ಸಮರ್ಥಿಸುತ್ತಿರುವುದು.

ದಾಭೋಲ್ಕರ್, ಪಾನ್ಸರೆ, ಕಲಬುರ್ಗಿ, ಗೌರಿ ಇವರೆಲ್ಲರ ಹತ್ಯೆಗಳು ರಾಜಕೀಯ ಕಾರ್ಯಕರ್ತರ ಹತ್ಯೆಗಳಲ್ಲ, ಅವರ ಚಿಂತನೆಗಾಗಿ ನಡೆದ ಹತ್ಯೆಗಳು. ನಮ್ಮ ದೇಶ, ಸಮಾಜದಲ್ಲಿ ಎಲ್ಲ ಚಿಂತನೆಯ ಧಾರೆಗಳೂ ಮುಕ್ತವಾಗಿವೆ. ಪರಸ್ಪರ ವಿರೋಧಿ ನೆಲೆಯಲ್ಲಿ ಬೆಳೆದ ಚಿಂತನ ಧಾರೆಗಳು ಇತಿಹಾಸದುದ್ದಕ್ಕೂ ಬೆಳೆದು ಬಂದಿವೆ. ಆಧುನಿಕ ಭಾರತದಲ್ಲಿ ಎಡಪಂಥೀಯ, ಬಲಪಂಥೀಯ ಚಿಂತನೆಗಳು, ಈ ಎರಡೂ ಪಂಥಗಳೊಂದಿಗೆ ಗುರುತಿಸಿಕೊಳ್ಳಲು ಒಪ್ಪದ, ತಮ್ಮನ್ನು ತಾವು ಮಧ್ಯಮ ಮಾರ್ಗಿಗಳೆಂದು ಕರೆದುಕೊಳ್ಳಬಯಸುವ ಪಂಥಗಳು ಸಕ್ರಿಯವಾಗಿವೆ. ಎಡ ಮತ್ತು ಬಲಪಂಥೀಯರು ತಮ್ಮವೇ ಆದ ರಾಜಕೀಯ ವೇದಿಕೆಗಳನ್ನೂ, ಸಾಮೂಹಿಕ ಸಂಘಟನೆಗಳನ್ನೂ, ಮಾಧ್ಯಮಗಳನ್ನೂ ಹೊಂದಿದ್ದಾರೆ. ಇವೆಲ್ಲ ತಮ್ಮ ತತ್ವಗಳನ್ನು ಸಾಂವಿಧಾನಿಕ ಮಾರ್ಗದಲ್ಲಿ ಜನತೆಗೆ ತಲುಪಿಸಲು ವಿವಿಧ ವೇದಿಕೆಗಳಾಗಿವೆ. ಈ ವೇದಿಕೆಗಳ ಮೂಲಕ ತಮ್ಮ ತಮ್ಮ ಚಿಂತನೆಗಳನ್ನು ಪ್ರಸಾರಮಾಡುವ ಹಕ್ಕು ಎಲ್ಲರಿಗೂ ಇದೆ. ಅಭಿವ್ಯಕ್ತಿ ಎನ್ನುವುದು ಸಂವಿಧಾನಾತ್ಮಕವಾಗಿ ಪಡೆದ ಸ್ವಾತಂತ್ರ್ಯವಾಗಿದೆ. ಅಭಿವ್ಯಕ್ತಿ ಸ್ವಾತಂತ್ರ್ಯ ಎಲ್ಲೆ ಮೀರಿದರೆ ಅದಕ್ಕಾಗಿ ನ್ಯಾಯಾಂಗ ವ್ಯವಸ್ಥೆ ಇದೆ. ಹೀಗಿರುವಾಗ ಕಾನೂನನ್ನು ಕೈಗೆತ್ತಿಕೊಳ್ಳುವ ಹಕ್ಕು ಯಾರಿಗೂ ಇಲ್ಲ. ಅದೇ ಸಂದರ್ಭದಲ್ಲಿ ಧಾರ್ಮಿಕ ಸ್ವಾತಂತ್ರ್ಯ ಎಲ್ಲ ಧರ್ಮದವರಿಗೂ ಇದೆ. ನನ್ನದು ಒಳ್ಳೆಯ ಧರ್ಮ ಎಂದು ನಂಬುವ ಹಕ್ಕೂ ಇದೆ. ಆದರೆ ನನ್ನದು ಮಾತ್ರ ಒಳ್ಳೆಯ ಧರ್ಮ; ನನ್ನ ಆಚರಣೆಗಳು, ಚಿಂತನೆಗಳು ಮಾತ್ರ ಶ್ರೇಷ್ಠ ಎಂದು ಹೇಳುವ ಹಕ್ಕು ಯಾರಿಗೂ ಇಲ್ಲ, ಮಾತ್ರವಲ್ಲ, ಯಾವ ಧರ್ಮವನ್ನೂ ದೇವರನ್ನೂ ನಂಬದೇ ಇರುವ ನಾಸ್ತಿಕ ಪರಂಪರೆಯೂ ಆದಿಕಾಲದಿಂದಲೂ ಬೆಳೆದು ಬಂದಿದೆ. ಮನುಷ್ಯನ ಭಿನ್ನ, ವಿಭಿನ್ನ ಚಿಂತನಾ ವಿಧಾನದಿಂದಲೇ ಮಾನವ ಸಮಾಜದ ವಿಕಾಸ, ಅಭಿವೃದ್ಧಿ, ಬೆಳವಣಿಗೆ ಸಾಧ್ಯವಾಗಿದೆ. ಚಿಂತನೆಗೆ ಚಿಂತನೆಯೇ ಪ್ರತಿಯಾಗಿ ನಿಲ್ಲಬೇಕು, ಬಂದೂಕಲ್ಲ. ಯಾವುದೇ ಪಂಥದ ಚಿಂತಕರಾಗಲಿ ಹತ್ಯೆಯನ್ನು ಸಮರ್ಥಿಸಬಾರದು. ಇತಿಹಾಸದಲ್ಲಿ ಚಾರ್ವಾಕರ ಕಾಲದಿಂದಲೂ ದಮನಕ್ಕೊಳಗಾದ ಚಿಂತಕರಿದ್ದಾರೆ. ಅವರ್‍ಯಾರೂ ಹಂತಕರಾಗಿಲ್ಲ. ಸಹಿಷ್ಣುತೆ ಭಾರತೀಯ ಸಂಸ್ಕೃತಿಯ ಮೂಲ ಧಾರೆ. ಅದನ್ನು ಉಳಿಸಿ ಬೆಳೆಸಬೇಕಾಗಿದೆ. ಗೌರಿ ಹತ್ಯೆಯನ್ನು ಸಂಭ್ರಮಿಸುತ್ತಿರುವ ವಿಕಾರಿಗಳಿಗೆ ನಾಗರಿಕ ಸಮಾಜದ ಧಿಕ್ಕಾರವಿರಲಿ.

ನಿಜ್ಜನಗೌಡ ಪಾಟೀಲ

ತಿಂಗಳ ಪತ್ರಿಕೆ
ಹೊಸತು
ನವಕರ್ನಾಟಕ ಪ್ರಕಾಶನ



■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

■ ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

*(ಈ ತಿಂಗಳು ೩ನೇ ಪುಟದಿಂದ)*

ಸರಕಾರಗಳ ವೈಫಲ್ಯಕ್ಕೆ ಸಾಕ್ಷಿ. ಕೇಂದ್ರ ಸರಕಾರವಂತೂ ಅವು ರಾಜ್ಯ ಸರಕಾರಗಳಿಗೆ ಸಂಬಂಧಪಟ್ಟ ವಿಷಯ ಎಂದು ಕೈ ತೊಳೆದುಕೊಂಡಿದೆ. ಇಂಥ ಪ್ರಕರಣ ಗಳಲ್ಲಿ ಬಲಿಯಾಗಿರುವವರೆಲ್ಲ ವಿಚಾರವಾದಿಗಳೇ. ಮಹಾರಾಷ್ಟ್ರದಲ್ಲಿ ದಾಭೋಲ್ಕರ್ ಹಾಗೂ ಪಾನ್ಸರೆ, ಕರ್ನಾಟಕದಲ್ಲಿ ಕಲ್ಬುರ್ಗಿ ಮತ್ತು ಇದೀಗ ಪತ್ರಕರ್ತೆ ಗೌರಿ ಲಂಕೇಶ್. ಎರಡು ವರ್ಷಗಳಿಗೂ ಮೇಲಾದರೂ ಮೇಲಿನ ಮೂವರ ಹಂತಕರು ಇನ್ನೂ ಪತ್ತೆಯಾಗಿಲ್ಲ. ನಾಲ್ಕು ಮಂದಿ ಬಲಿಯಾದದ್ದು ಒಂದೇ ಮಾದರಿಯಲ್ಲಿ. ಮೋಟಾರು ಸೈಕಲ್ ಮೇಲೆ ಬಂದು ಗುಂಡಿನ ಮಳೆಗರೆದ ನಂತರ ಸಾಕಷ್ಟು ಪ್ರತಿಭಟನೆಗಳು ಜರುಗಿದ್ದಾಗ್ಯೂ ಇನ್ನೂ ಸರಕಾರ ಎಚ್ಚೆತ್ತಿರುವಂತೆ ಕಾಣುತ್ತಿಲ್ಲ. ಹಿಂದುತ್ವ ವಾದಿಗಳ ಮೇಲೆ ಕ್ರಮ ಜರುಗಿಸಲು ಸರಕಾರ ಹಿಂದೇಟು ಹಾಕುತ್ತಿದೆ ಎನ್ನುವ ಅನುಮಾನ ಬಲವಾಗುತ್ತಿದೆ. ಗೌರಿ ಲಂಕೇಶ್ ಹತ್ಯೆ ಪ್ರಕರಣದಲ್ಲಿ ಮೂಡಿಬಂದಿರುವ ಪ್ರತಿಭಟನೆಗಳು ಸ್ವಾಗತಾರ್ಹ. ಸಂಪ್ರದಾಯವಾದಿಗಳಿಗೆ ಒಂದು ಎಚ್ಚರಿಕೆಯ ಗಂಟೆ. ವೈಚಾರಿಕ ಸ್ವಾತಂತ್ರ್ಯವನ್ನು ಹತ್ತಿಕ್ಕಲು ಸಾಧ್ಯವಿಲ್ಲ ಎನ್ನುವುದನ್ನು ಹಿಂದುತ್ವವಾದಿಗಳು ಎಷ್ಟು ಬೇಗ ಅರಿತರೂ ಅಷ್ಟು ಒಳ್ಳೆಯದು.

✶ ✶ ✶

ರೈಲು ದುರಂತದ ಸರಮಾಲೆಯ ಹಿಂದೆಯೇ ಮೋದಿ ಸರಕಾರ ಬುಲೆಟ್ ಟ್ರೇನ್ ಬಿಡಲು ಹೊರಟಿದೆ. ಜಪಾನಿನೊಂದಿಗೆ ಒಪ್ಪಂದ ಮಾಡಿಕೊಂಡು ಭಾರತದ ಮೊದಲ ಬುಲೆಟ್ ಟ್ರೇನಿನ ಗುದ್ದಲಿ ಪೂಜೆಯೂ ನಡೆದು ಹೋಗಿದೆ. ೨೦೨೨ರ ವೇಳೆಗೆ ಅಹ್ಮದಾಬಾದ್ – ಮುಂಬೈ ಮಾರ್ಗದಲ್ಲಿ ರೈಲು ಸಂಚಾರ ಪ್ರಾರಂಭ ಎನ್ನಲಾಗುತ್ತಿದೆ. ಸಾಕಷ್ಟು ದೊಡ್ಡ ಮೊತ್ತದ ಸಾಲವನ್ನು ಜಪಾನ್ ಒದಗಿಸುತ್ತಿದೆ. ಯೋಜನೆ ಯಾವಾಗ ಕಾರ್ಯಗತವಾಗುತ್ತದೆ ಎನ್ನುವುದೇ ಪ್ರಶ್ನೆ. ಈಗಾಗಲೇ ಸಾಲದ ಹೊರೆ ಹೊತ್ತಿರುವ ಈ ದೇಶದ ಪ್ರಜೆಗಳ ಮೇಲೆ ಮತ್ತೊಂದು ಹೊರೆ. ಅಂತೂ ಅಮೆರಿಕ – ಭಾರತ – ಜಪಾನ್ – ಇಸ್ರೇಲ್ ಆಕ್ಸಿಸ್ ಮೋದಿ ಆಡಳಿತದಲ್ಲಿ ಪ್ರಾರಂಭವಾಗಿದೆ. ಇದು ದೇಶವನ್ನು ಎಲ್ಲಿಗೆ ಒಯ್ಯುತ್ತದೆ ನೋಡೋಣ.

ರೈಲು ಬಿಡುವುದಕ್ಕೆ ಮುನ್ನ ಪ್ರಧಾನಿ ನರೇಂದ್ರ ಮೋದಿ ತಮ್ಮ ಸಂಪುಟವನ್ನು ಪುನಾರಚಿಸಿದ್ದಾರೆ. ಅಗತ್ಯ ವೆನಿಸಿದಾಗ ಸಂಪುಟದ ಪುನಾರಚನೆ ಪ್ರಧಾನ ಮಂತ್ರಿ ಯವರಿಗೆ ಬಿಟ್ಟ ವಿಷಯ. ಸಂವಿಧಾನಾತ್ಮಕವಾಗಿ ಅದು ಆಡಳಿತ ನಡೆಸುತ್ತಿರುವ ಪಕ್ಷದ ಆಂತರಿಕ ವಿಷಯ ಎನ್ನುವುದೂ ನಿಜ. ಆದರೆ ಮೋದಿ – ಷಾ ಜೋಡಿ ಸಂಪುಟ ಪುನಾರಚನೆಯಲ್ಲಿ ಪಕ್ಷದ ಮೇಲೆ ಹಿಡಿತವನ್ನು ಮತ್ತಷ್ಟು ಬಿಗಿಪಡಿಸಿಕೊಂಡಿದ್ದಾರೆ. ಕರ್ನಾಟಕದ ಮಟ್ಟಿಗೆ ಕಾರವಾರದ ಪಾರ್ಲಿಮೆಂಟ್ ಸದಸ್ಯ ಹೆಗಡೆಯ ನೇಮಕ ಅನಿರೀಕ್ಷಿತ. ಮುಂದೆ ಚುನಾವಣೆಗಳನ್ನು, ಅದರಲ್ಲೂ ಬರುವ ವರ್ಷ ಕರ್ನಾಟಕ ವಿಧಾನಮಂಡಲಕ್ಕೆ ನಡೆಯುವ ಚುನಾವಣೆಯನ್ನು ಗಮನದಲ್ಲಿರಿಸಿಕೊಂಡು ಸಂಪುಟ ವಿಸ್ತರಿಸಲಾಗಿದೆ. ಹೆಗಡೆಯ ಮಟ್ಟಿಗೆ ಹೇಳುವುದಾದರೆ ಅವರು ಕಳಂಕಿತರ ಪಟ್ಟಿಗೆ ಬರುತ್ತಾರೆ. ಅವರ ಮೇಲೆ ಹಲವು ಮೊಕದ್ದಮೆಗಳು ಕೂಡ ಇವೆ. ಇದು ಮೋದಿ ಅವರಿಗೆ ತಿಳಿಯದ ವಿಷಯವೇನಲ್ಲ. ರಕ್ಷಣಾ ಇಲಾಖೆಯನ್ನು ಶ್ರೀಮತಿ ನಿರ್ಮಲಾ ಸೀತಾರಾಮನ್ ಅವರಿಗೆ ವಹಿಸಿ ಮೋದಿ ಮಾಧ್ಯಮಗಳಲ್ಲಿ ಅಬ್ಬರದ ಪ್ರಚಾರ ಗಿಟ್ಟಿಸಿಕೊಂಡಿದ್ದಾರೆ. ಈಕೆ ಕರ್ನಾಟಕದಿಂದ ರಾಜ್ಯ ಸಭೆಗೆ ಆಯ್ಕೆಯಾಗಿರುವುದು ವಿಶೇಷ. ವಿದೇಶಾಂಗ ಸಚಿವೆ ಸುಷ್ಮಾರಂತೆಯೇ ರಕ್ಷಣಾ ಸಚಿವೆ ನಿರ್ಮಲಾ ಕೂಡ ಉತ್ಸವ ಮೂರ್ತಿ ಯಾಗಿರುತ್ತಾರೆಯೆ ನೋಡಬೇಕು. ಉಳಿದಂತೆ ಸಂಪುಟ ಪುನಾರಚನೆಯಲ್ಲಿ ವಿಶೇಷವೇನಿಲ್ಲ.

✶ ✶ ✶

ಬೆಂಗಳೂರಿನಲ್ಲಿ ಈಚೆಗೆ ಭಾರಿ ಮಳೆ ಸುರಿಯಿತು. ಮಾಧ್ಯಮಗಳ ಭಾಷೆಯಲ್ಲಿ ಜನಜೀವನ ಅಸ್ತವ್ಯಸ್ತ, ವಾಹನದಟ್ಟಣೆ, ರಾಜ ಕಾಲುವೆಗಳಿಂದ ಮನೆಗಳಿಗೆ, ಮನೆಗಳೊಳಗೆ ನೀರು, ಇತ್ಯಾದಿ. ಇವೆಲ್ಲ ಮಾಮೂಲು ಸಣ್ಣ ಮಳೆ ಬಂದರೂ ಕೂಡ ಬೆಂಗಳೂರಿನಲ್ಲಿ. ರಾಜಧಾನಿಯಲ್ಲೇ ಹೀಗಿರುವಾಗ ಉಳಿದ ಕಡೆ ಏನು ಗತಿ ಊಹಿಸಿಕೊಳ್ಳಬಹುದು. ತಡವಾಗಿಯಾದರೂ ರಾಜ್ಯದ ವಿವಿಧ ಕಡೆಗಳಲ್ಲಿ ಮುಂಗಾರು ಮಳೆಯಾಗಿ ರುವುದು ಸಮಾಧಾನಕರ ಸಂಗತಿ. ರೈತರ ಪಾಲಿಗೆ ವರದಾನವಾಯಿತು. ಈ ಮಳೆಯಿಂದ ಬೆಂಗಳೂರು ನಗರ ಭಾರತದ ಇತರ ನಗರಗಳಂತೆಯೇ ಮಳೆಯ ಅಬ್ಬರಕ್ಕೆ ತತ್ತರಿಸುತ್ತದೆ. ಟೆಲಿವಿಷನ್ ವೀಕ್ಷಕರು ಮುಂಬೈನಲ್ಲಿ ಸುರಿದ ಮಳೆಯ ಅವಾಂತರವನ್ನು ನೋಡಿರಲು ಸಾಕು. ಬೆಂಗಳೂರು ಈ ವಿಷಯದಲ್ಲಿ ಯಾವ ಬಗೆಯಲ್ಲೂ ಹಿಂದೆ ಬಿದ್ದಿಲ್ಲ. ಮೊಳಕಾಲವರೆಗೆ ರಸ್ತೆಗಳಲ್ಲಿ ನೀರು ತುಂಬಿ ಹರಿಯುತ್ತಿರುವ ದೃಶ್ಯ ಸಾಮಾನ್ಯವಾಗಿತ್ತು. ಅಷ್ಟೇ ಅಲ್ಲದೆ ನೂರಾರು ಮರಗಳು ಧರೆಗುರುಳಿ ಪರಿಸರಕ್ಕೆ ಇನ್ನಷ್ಟು ಹಾನಿಯಾಗಿ ಹೋಗಿದೆ. ರಸ್ತೆ ಅಗಲೀಕರಣ, ಹೊಸಕಟ್ಟಡಗಳ ನಿರ್ಮಾಣದಲ್ಲಿ ನಡೆಯುವ ಒತ್ತುವರಿ ಇವುಗಳಿಂದ ಸಾಕಷ್ಟು ಮರಗಳ ಮಾರಣಹೋಮ ನಡೆದಿದೆ. ರಸ್ತೆ ಗುಂಡಿಗಳು ವಾಹನಗಳ ಸುಗಮ ಸಂಚಾರಕ್ಕೆ ವಿಪತ್ಕಾರಿಯಾಗಿವೆ. ಮುಖ್ಯ ಮಂತ್ರಿಗಳು, ಸಚಿವರು, ಮೇಯರು, ಕಾರ್ಪೊರೇಟರುಗಳು ಎಲ್ಲಾ ಠಳಾಯಿಸಿ ಆಶ್ವಾಸನೆ ಗಳನ್ನು ನೀಡಿದ್ದಾಯಿತು. ಮುಂದೆ ಮಳೆ ಸುರಿಯುವ ವರೆಗೆ ಅಧಿಕಾರಿಗಳು ಮಾಮೂಲಿ ವ್ಯವಹಾರಗಳಲ್ಲಿ ತೊಡಗಲು ಅಡ್ಡಿಯಿಲ್ಲ. ಇದು ವರ್ಷ ವರ್ಷವೂ ಇದ್ದದ್ದೇ. ಸಾರ್ವಜನಿಕರು ಅನುಭವಿಸಿಯೇ ತೀರಬೇಕು.

✶ ✶ ✶

ಆಂಧ್ರದ ವಿಶಾಖಪಟ್ಟಣ ಮತ್ತು ಶ್ರೀಕಾಕುಲಂ ಜಿಲ್ಲೆಗಳಲ್ಲಿ ಕೆಲವು ಬುಡಕಟ್ಟುಗಳು ಊರುಗಳಾಚೆ ಕಾಡಿನಲ್ಲಿ ಇಲ್ಲವೆ ಕಾಡಿನ ಅಂಚಿನಲ್ಲಿ ವಾಸಿಸುತ್ತಿವೆ. ಅವರ ಭಾಷೆಯನ್ನು ಸಾಮಾನ್ಯ ತೆಲುಗರು ಪೂರ್ತಿ ಅರ್ಥಮಾಡಿಕೊಳ್ಳಲಾರರೆಂದು ಹೇಳುತ್ತಾರೆ. ಆ ಜನರು ನಮ್ಮ ದೇಶದ "ಅಭಿವೃದ್ಧಿ" ಮೀಮಾಂಸೆಯಲ್ಲಿ "ತೊಡಕುಂಟುಮಾಡುವವರು" ಎನಿಸಿಕೊಂಡಿದ್ದಾರೆ. ಏಕೆಂದರೆ, ಅವರಿರುವ ಜಾಗಗಳನ್ನು ಬಿಟ್ಟು ನಿರ್ವಸಿತರಾಗಲು ಅವರು ಸಿದ್ಧರಿಲ್ಲ. ಶ್ರೀಕಾಕುಲಂ ಬಳಿ ಬಾಕ್ಸೈಟ್ ಎಂಬ ಖನಿಜವು ದೊಡ್ಡ ಪ್ರಮಾಣದಲ್ಲಿ ಲಭ್ಯವಿದೆ ಎನ್ನಲಾಗಿದೆ. ಆ ಬಾಕ್ಸೈಟ್ ಮೇಲೆ ಈ ಬುಡಕಟ್ಟು ಜನ ವಾಸಿಸುತ್ತಿದ್ದಾರಾದ್ದರಿಂದ ಅವರನ್ನು ಎತ್ತಂಗಡಿ ಮಾಡುವುದು ಆಂಧ್ರದ ಮುಖ್ಯಮಂತ್ರಿ ಚಂದ್ರಬಾಬು ನಾಯ್ಡುಗೆ ಆದ್ಯತೆಯ ವಿಷಯ. ನಮ್ಮ ದೇಶದಲ್ಲಿದೆಯೆನ್ನಲಾದ ಒಟ್ಟು ಬಾಕ್ಸೈಟ್‌ನಲ್ಲಿ ಸುಮಾರು ಶೇಕಡ ೬೦ರಷ್ಟು ಅಲ್ಲಿದೆಯಂತೆ. ನಮ್ಮ ರಾಜ್ಯದ ಬೆಳಗಾವಿ ಜಿಲ್ಲೆಯಲ್ಲೂ ಸ್ವಲ್ಪ ಬಾಕ್ಸೈಟ್ ಇದೆ. ಅದನ್ನು ೧೯೭೦ರ ದಶಕದಲ್ಲಿ ಬಿರ್ಲಾ ಕಂಪನಿ ಭಾಗಶಃ ಪಡೆದಿತ್ತು. ಉಚ್ಚಮಟ್ಟದ ಅಲ್ಯೂಮಿನಿಯಂ ತಯಾರಿಕೆಗೆ ಈ ಖನಿಜ ಬೇಕಾಗುತ್ತದೆ. ವಿಮಾನಗಳ ತಯಾರಿಕೆಯಲ್ಲಿ ಇದು ಬಹುಮುಖ್ಯ ಸಾಮಗ್ರಿ ಎನ್ನುತ್ತಾರೆ. ಚಂದ್ರಬಾಬು ನಾಯ್ಡು ತನ್ನ ರಾಜ್ಯದ ಬಾಕ್ಸೈಟ್‌ಅನ್ನು ಗಣಿಗಳಿಂದ ಹೊರತೆಗೆದು ತಾನೇ ಯಾವ ಸರಕನ್ನೂ ಉತ್ಪಾದಿಸುವ ಯೋಜನೆಯನ್ನು ಹಾಕಿಕೊಂಡಿಲ್ಲ. ವಿಶಾಖಪಟ್ಟಣ ಜಿಲ್ಲಾ ಕಮ್ಯುನಿಸ್ಟ್ ಪಕ್ಷದ ಕಾರ್ಯದರ್ಶಿ ಶ್ರೀ ಸತ್ಯನಾರಾಯಣ ಅಥವಾ "ಕಾಮ್ರೇಡ್ ನಾನಿ" ಹೇಳುವಂತೆ ನಾಯ್ಡು ಉದ್ದೇಶ ಶ್ಲಾಘನೀಯವಾದುದೇನೂ ಅಲ್ಲ. ಖನಿಜವನ್ನು ರಫ್ತು ಮಾಡಿ ಸ್ವಲ್ಪ ಕಮಿಷನ್ ಪಡೆದು ರಾಜ್ಯದ ಬೊಕ್ಕಸಕ್ಕೆ ತುಂಬುವುದಷ್ಟೇ ಆತನ ಮಹಾನ್ ಯೋಜನೆ. ಅದನ್ನು ಸುರಿದು ಬೇಗನೆ ಧಾಂ–ಧೂಂ ಎಂದು ಇಂದ್ರನ ಅಮರಾವತಿಯ ರೂಪದ ರಾಜಧಾನಿಯನ್ನು ಆತ ಕಟ್ಟಿಕೊಳ್ಳಬೇಕಂತೆ. ಈಗಾಗಲೇ ಫಲವತ್ತಾದ ಮೂವತ್ತು ಸಾವಿರ ಹೆಕ್ಟೇರ್ ಭೂಮಿಯನ್ನು ವಶಪಡಿಸಿ ಕೊಂಡಾಗಿದೆ. ಅಂದರೆ ಅಷ್ಟರಮಟ್ಟಿನ ಭತ್ತದ ಬೆಳೆ ಇಲ್ಲವಾಗಿದೆಯೆಂದರ್ಥ. ಅಷ್ಟು ಭೂಮಿ ಸಾಲದಂತೆ, ಏಕೆಂದರೆ "ವಿಶೇಷ ಆರ್ಥಿಕ ವಲಯಗಳು" ಬೇಕಲ್ಲ ! ಅದಕ್ಕೆ ಒಂದು ಲಕ್ಷ ಎಕರೆ ಭೂಮಿಯನ್ನು ವಶಪಡಿಸಿ ಕೊಳ್ಳುವ ಉದ್ದೇಶವಿದೆ. ಕೃಷ್ಣಾ ನದಿಯಿಂದ ನೀರಾವರಿ ಸೊಗಸಾಗಿದ್ದು ಅದು ಆಂಧ್ರದ ಭತ್ತದ ಕಣಜ ಎನಿಸಿಕೊಂಡಿದೆ. ಗದ್ದೆಗಳನ್ನು ನಾಶ ಮಾಡಿ ಹಾಗೂ ಸಾವಿರಾರು ಮರಗಳನ್ನು ಕಡಿದು ಹಾಕಿ ವಿದೇಶಿ ಮತ್ತು ಸ್ವದೇಶಿ ಬಂಡವಾಳ ಹೂಡಿಕೆಗೆ ಆತ ಅನುವು ಮಾಡಿಕೊಡಹೊರಟಿದ್ದಾನೆ. ಸುಮಾರು ೫೦–೬೦ ಕಿಲೋಮೀಟರ್ ದೂರಕ್ಕೆ ಹೋದರೆ ತೆನಾಲಿಯ ಬಳಿ ಭೂಮಿ ಲಭ್ಯವಿದೆ. ಅಲ್ಲಿ ಕೃಷಿ ಅಷ್ಟು ಉತ್ಕೃಷ್ಟವಾಗಿಲ್ಲ. ಆದರೆ ಆತನಿಗೆ ಕೃಷ್ಣಾ ನದಿಯ ಬಯಲಿನ ಭೂಮಿಯೇ ಬೇಕು ! ಅದೇ ಉನ್ನತ ಮಾದರಿಯ "ಅಭಿವೃದ್ಧಿ." ಅಲ್ಲಿ ಬರಲಿರುವ ಉದ್ಯಮಗಳಲ್ಲಿ ದಲಿತ ಮತ್ತು ಹಿಂದುಳಿದ ವರ್ಗಗಳವರಿಗೆ ನೌಕರಿಯಲ್ಲಿ ಮೀಸಲಾತಿ ಕಡ್ಡಾಯಗೊಳಿಸಬೇಕೆಂದು ಆಗ್ರಹಿಸಲು ಕಮ್ಯುನಿಸ್ಟ್ ಪಕ್ಷದ ನಾಯಕರು ಮುಖ್ಯಮಂತ್ರಿಯನ್ನು ಭೇಟಿಯಾದಾಗ ಆತ ಹೇಳಿದನಂತೆ, "ಹಾಗೆ ಮೀಸಲಾತಿಗೆ ಆಗ್ರಹಿಸಿದರೆ ನಮ್ಮ ರಾಜ್ಯಕ್ಕೆ ಯಾವ ಬಂಡವಳಿಗನೂ ಬಂದು ಬಂಡವಾಳ ಹೂಡುವುದಿಲ್ಲ; ನಿಮ್ಮ ಒತ್ತಾಯಕ್ಕೆ ಸರ್ಕಾರ ಮಣಿಯುವುದಿಲ್ಲ," ಎಂದು.

ಬಾಕ್ಸೈಟ್ ವಿಷಯಕ್ಕೆ ಮರಳಿದರೆ ಇದಕ್ಕಿಂತಲೂ ಹೆಚ್ಚು ಘೋರವಾದ ಸಂಗತಿ ತಿಳಿಯುತ್ತದೆ. ಆಂಧ್ರ ಮುಖ್ಯಮಂತ್ರಿಗೆ ಸಾರ್ವಜನಿಕ ವಲಯದಲ್ಲಿ ಉದ್ಯಮಗಳಿರಬೇಕೆಂಬ ಆಶಯವಿಲ್ಲ. ಬುಡಕಟ್ಟು ಜನರನ್ನು ಹೊರಗೆ ನೂಕಬೇಕು, ಕಾಡು ಕಡಿದು ಹಾಕಬೇಕು, ವಿದೇಶಿ–ಸ್ವದೇಶಿ ಬಂಡವಾಳಿಗರಿಗೆ ಗಣಿಗಾರಿಕೆಗೆ ಕಾಂಟ್ರಾಕ್ಟ್ ನೀಡಬೇಕು; ಆಗಲೇ ಆಂಧ್ರದ "ಅಭಿವೃದ್ಧಿ" ಸಾಧ್ಯವೆಂಬುದು ನಾಯ್ಡು ಮೂಢನಂಬಿಕೆ. ರಾಜ್ಯಕ್ಕೆ ದೊರೆಯುವ ಸಂಪತ್ತಾದರೂ ಎಷ್ಟು? ಕಾಮ್ರೇಡ್ ನಾನಿಯವರ ಪ್ರಕಾರ ಅದು ಲೆಕ್ಕಕ್ಕೆ ಬಾರದಷ್ಟು ಕಡಿಮೆ ಮೊತ್ತ. ಸುಮಾರು ಒಂದು ಲಕ್ಷ ರೂಪಾಯಿ ಮೌಲ್ಯದ ಖನಿಜ ಹೊರತೆಗೆದು ಬಂಡವಾಳಿಗನು ಅದನ್ನು ತನ್ನದಾಗಿಸಿಕೊಂಡರೆ ರಾಜ್ಯದ ಬೊಕ್ಕಸಕ್ಕೆ ದೊರಕುವ ಕಮಿಷನ್ ಸುಮಾರು ೧೫೦೦ ರೂಪಾಯಿಗಳು, ಅಷ್ಟೆ. ನೌಕರರೆಲ್ಲರ ಕೂಲಿ, ಯಂತ್ರೋಪಕರಣ, ಸಾರಿಗೆ, ಬಂಡವಾಳಿಗನಿಗೆ ದೊರೆಯಬೇಕಾದ ವರಮಾನ, ಇತ್ಯಾದಿಗಳನ್ನೆಲ್ಲಾ ಕಳೆದರೆ ಹೂಡಿಕೆದಾರನಿಗೆ ದಕ್ಕುವ ಲಾಭ ಒಂದು ಲಕ್ಷದಲ್ಲಿ ಸುಮಾರು ಮೂವತ್ತೈದು ಸಾವಿರದಷ್ಟಾಗುತ್ತದೆ. ಹಾಗಿದ್ದರೆ, ಇಡೀ ಉದ್ಯಮವನ್ನು ಸರ್ಕಾರವೇ ವಹಿಸಿಕೊಂಡರೆ ರಾಜ್ಯಕ್ಕೆ ಲಭ್ಯವಾಗುವ ಮೊತ್ತ ಎಷ್ಟಿರಬಹುದು? ಅದು ನಾಯ್ಡುಗೆ ಬೇಡ, ಆತನಿಗೆ ೧೫೦೦ ರೂಪಾಯಿ ಸಾಕು! ರಾಜ್ಯದ ಜನತೆಯ ಸಂಪತ್ತಿನ ಲೂಟಿಯಾದರೆ ಆತನಿಗೇನೂ ಮುಜುಗರವಿಲ್ಲ. ಶ್ರೀಕಾಕುಲಂ ಬಳಿಯ ಬುಡಕಟ್ಟು ಜನ ತಾವಿರುವ ತಾವಿನಿಂದ ನಿರ್ಗಮಿಸಲು ನಿರಾಕರಿಸುತ್ತಿದ್ದಾರೆ. ರಾಜ್ಯಕ್ಕೆ ಲಾಭವಿಲ್ಲ ಮತ್ತು ಜನಕ್ಕೆ ನೆಮ್ಮದಿಯಿಲ್ಲ. ಇದು "ಅಭಿವೃದ್ಧಿ." ಮುಂದಿನ ತಿಂಗಳುಗಳಲ್ಲಿ ಆ ಜನರ ಸಂಕಷ್ಟಗಳ ಸರಮಾಲೆ, ಪ್ರಭುತ್ವದಿಂದ ಹಿಂಸೆ, ಬಂಡವಾಳ ಹೂಡಿಕೆದಾರರ ಮೋಜು, ಇವುಗಳೆಲ್ಲದರ ವರದಿಗಳನ್ನು ನಿರೀಕ್ಷಿಸುತ್ತಿದ್ದರೆ ಆದೀತೆ? ನಾಯ್ಡು ಅವರಿಗೆ ಪತ್ರಗಳನ್ನು ಬರೆದು ಈ ತರಹದ ಯೋಜನೆ ಸರ್ವಥಾ ಕೂಡದು ಎಂದು ನಾವು ಪ್ರಬಲವಾಗಿ ಆಗ್ರಹಿಸಬೇಕು. ಅಲ್ಲಿಯ ಬುಡಕಟ್ಟು ಜನಕ್ಕೆ ಬೆಂಬಲ ನೀಡಬೇಕು. ಸಾರ್ವಜನಿಕ ಸಂಪತ್ತು ಜನತೆಗೆ ಮಾತ್ರವೇ ಸೇರಿದ್ದು ಎಂಬುದನ್ನು ಖಚಿತಪಡಿಸಬೇಕು.

✶ ✶ ✶

ನಮ್ಮ ದೇಶದಲ್ಲಿ "ಒಂದು–ಒಂದು–ಒಂದು" ಎಂಬ ಉಪದ್ರವ ವಿಪರೀತವಾಗುತ್ತಿದೆ. ಇತ್ತೀಚೆಗೆ ತಮಿಳುನಾಡಿನಲ್ಲಿ ಒಬ್ಬ ವಿದ್ಯಾರ್ಥಿನಿ ಈ 'ಒಂದು' ಎಂಬ ಪಿಡುಗಿಗೆ ಬಲಿಯಾಗಿದ್ದಾಳೆ. ತೀರಾ ಹತಾಶಳಾಗಿ ಆಕೆ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ. ಈವರೆಗೆ ಒಂದು ದೇಶ – ಒಂದು ಸಂಸ್ಕೃತಿ – ಒಂದು ಭಾಷೆ – ಒಬ್ಬ ನಾಯಕ – ಒಂದು ಆಹಾರ ಪದ್ಧತಿ ಎಂಬ ಅನಿಷ್ಟದ ಬಾಧೆ ಇದ್ದಿತು. ಈಗ ಅದು ಶಿಕ್ಷಣ ಕ್ಷೇತ್ರಕ್ಕೆ ವ್ಯಾಪಿಸಿದೆ. ಎಲ್ಲದಕ್ಕೂ ಒಂದು ಪಠ್ಯ – ಒಂದು ಪರೀಕ್ಷೆ – ಒಂದು ಪ್ರವೇಶ ಪದ್ಧತಿ ಎಂಬ ಅಪ್ಪಟ ಮೂರ್ಖತನದ ಅನೀತಿ ಜಾರಿಗೆ ಬರುತ್ತಿದೆ. ಉದಾಹರಣೆಗೆ, ವೈದ್ಯಕೀಯ ಶಿಕ್ಷಣವನ್ನು ನೋಡೋಣ. ಕರ್ನಾಟಕದಂತಹ ರಾಜ್ಯಗಳಲ್ಲಿ ವೈದ್ಯಕೀಯ ಕಾಲೇಜುಗಳು ಬೇರೆ ರಾಜ್ಯಗಳಲ್ಲಿರುವುದಕ್ಕಿಂತ ಹೆಚ್ಚಾಗಿವೆ. ಹಣ ತೊಡಗಿಸಿರುವವರು ನಮ್ಮ ರಾಜ್ಯದ ವ್ಯಕ್ತಿಗಳು ಮತ್ತು ಸಂಸ್ಥೆಗಳು. ಬೇರೆ ರಾಜ್ಯಗಳ ವಿದ್ಯಾರ್ಥಿಗಳಿಗೂ ಇಲ್ಲಿ ಪ್ರವೇಶಾವಕಾಶಗಳಿವೆ, ಹಣ ತೆತ್ತು ವ್ಯಾಸಂಗ ಮಾಡಲು ಇಲ್ಲಿಗೆ ಬರುತ್ತಾರೆ. ಕೇಂದ್ರ ಸರ್ಕಾರದ ಕಣ್ಣು ಕುಕ್ಕುತ್ತಿದೆ. ಅಲ್ಲಿಯ ಹದ್ದಿನ ಕಣ್ಣುಗಳಿಗೆ ನಮ್ಮ ಸೌಲಭ್ಯಗಳನ್ನು ತಮ್ಮದಾಗಿಸಿಕೊಳ್ಳುವ ದುರಾಸೆ ಹೆಚ್ಚುತ್ತಿದೆ. ಅದಕ್ಕಾಗಿ ಏಕ ಪರೀಕ್ಷೆಯನ್ನು ರಾಷ್ಟ್ರದ ಮಟ್ಟದಲ್ಲಿ ನಡೆಸುವ ತಂತ್ರವನ್ನು ಹೆಣೆಯಲಾಗಿದೆ. ಅದಕ್ಕೆ "ನೀಟ್" ಎಂದು ಹೆಸರು. ನಿಜಕ್ಕೂ ಅದು ನೀಟಾಗಿಲ್ಲ, ಬದಲಾಗಿ ಬಹಳ ವಕ್ರತೆಯ ಯೋಜನೆ. ರಾಷ್ಟ್ರಮಟ್ಟದಲ್ಲಿ ಒಂದೇ ಪರೀಕ್ಷೆ ಮತ್ತು ಅದರ ಆಧಾರದ ಮೇಲೆ ಎಲ್ಲ ರಾಜ್ಯಗಳಿಗೂ ವಿದ್ಯಾರ್ಥಿಗಳ ರವಾನೆ: ಇದು ಯೋಜನೆ. ಬೇರೆ ರಾಜ್ಯಗಳಿಗೆ ಹೋಗುವಷ್ಟು ಆರ್ಥಿಕ ಚೈತನ್ಯ ಎಷ್ಟು ಜನಕ್ಕಿದೆ? ಹೆಚ್ಚು ಕಾಲೇಜುಗಳಿರುವ ರಾಜ್ಯಗಳಲ್ಲಿ ಆ ರಾಜ್ಯಗಳ ಹೊರಗಿನವರಿಗೆ ಪ್ರವೇಶವು ಸಲೀಸಾಗುವ ಸಾಧ್ಯತೆ ಇದೆ. ತಮಿಳುನಾಡಿನ ವಿದ್ಯಾರ್ಥಿನಿ 'ನೀಟ್' ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದಳು. ಆದರೆ ಬೇರೆ ರಾಜ್ಯಕ್ಕೆ ತೆರಳಿ ವ್ಯಾಸಂಗ ಮಾಡಲು ಅವಳಿಗೆ ಆರ್ಥಿಕ ಸಾಮರ್ಥ್ಯ ಇರಲಿಲ್ಲ. ತನ್ನ ಗುರಿಗೆ ಬೆಂಕಿ ಇಟ್ಟಿದ್ದನ್ನು ಸಹಿಸಲಾಗದೆ ಪ್ರಾಣ ಕಳೆದುಕೊಂಡಳು. ಕೇಂದ್ರದ ಕೆಟ್ಟ ಅಹಂಕಾರ ಮತ್ತು ಕುತಂತ್ರಗಳಿಗೆ ಅವಳದು ಮೊದಲ ಬಲಿ. ನಮ್ಮ ರಾಜ್ಯವು ಈ ಅನೀತಿಯ 'ನೀಟ್' ಪರೀಕ್ಷೆಯನ್ನು ವಿರೋಧಿಸಬೇಕಾಗಿತ್ತು. ಅದು ಯಾರ ತೀರ್ಮಾನವೋ ಏನೋ ನಮ್ಮ ಮಕ್ಕಳನ್ನು 'ನೀಟ್'ಗೆ ಬಲಿ ಕೊಡಲಿದ್ದೇವೆ. ಮುಂದಿನ ವರ್ಷದಿಂದ ಅದು ಜಾರಿಯಾಗುವ ನಿರೀಕ್ಷೆ ಇದೆ. ಅರ್ಹತೆಯುಳ್ಳವರ ಪಟ್ಟಿಯಲ್ಲಿ ಮೇಲಿರುವವರು ನಮ್ಮ ರಾಜ್ಯದ ಕಾಲೇಜುಗಳ ಸೀಟುಗಳನ್ನು ಆದ್ಯತೆಯ ಮೇಲೆ ಆಯ್ಕೆ ಮಾಡಿಕೊಂಡರೆ ನಮ್ಮ ಮಕ್ಕಳನ್ನು ಯಾವ ಕೂಪದ ಕಾಲೇಜುಗಳಿಗೆ ಕಳಿಸೋಣ? "ಅರ್ಹರು" ಈ ರಾಷ್ಟ್ರಮಟ್ಟದ 'ನೀಟ್'ನಿಂದ ಗುರುತಿಸಲಾಗುತ್ತಾರೆ. ಆ ಅರ್ಹರೆಲ್ಲಾ ಭಾರಿ ಜಾಣರೆಂದೇ ಇಟ್ಟುಕೊಳ್ಳೋಣ, ಆದರೆ ಎಲ್ಲ ಶಿಕ್ಷಣದ ಹಾದಿಗಳೂ ಕೇವಲ ಜಾಣರಿಗೆಂದು ಮೀಸಲಿಡಬೇಕೇನು? ಅಮೇರಿಕಾದ ಗುಣಮಟ್ಟಕ್ಕೆ ಸಮವಾಗಿಲ್ಲದವರಿಗೆ ಜೀವನ ಮತ್ತು ಶಿಕ್ಷಣ ಕೂಡದು ಎಂಬ ಭಂಡ ಸೂತ್ರಕ್ಕೆ ಸಮನಾದ್ದು ಈ ಅನಿಷ್ಟ 'ನೀಟ್' ಪರೀಕ್ಷೆ. ಕೊಪ್ಪಳದ ಒಬ್ಬ ವಿದ್ಯಾರ್ಥಿನಿಯು ಲಕ್ನೋದ ಯಾರೋ ಬುದ್ಧಿವಂತೆಗೆ ಸಮವಲ್ಲವೆಂದಿಟ್ಟುಕೊಳ್ಳೋಣ. ಅವಳಿಗೆ ಅವಕಾಶದ ಬಾಗಿಲು ಮುಚ್ಚುತ್ತೇವೇನು? ನಮ್ಮ ರಾಜ್ಯದವರು ನಮ್ಮ ರಾಜ್ಯದಲ್ಲಿ ವ್ಯಾಸಂಗ ಮಾಡಿ ನಮಗೆ ವೈದ್ಯಕೀಯ ಶುಶ್ರೂಷೆ ಮಾಡದಿದ್ದರೆ ರಾಜಸ್ತಾನದ ಮೇಧಾವಿ ಬಂದು ಚಿಕಿತ್ಸೆ ನೀಡಬೇಕೆ? ಇದೆಂತಹ ಶಿಕ್ಷಣ ವ್ಯವಸ್ಥೆ? ನಮ್ಮ ರಾಜ್ಯವು ಈ 'ನೀಟ್'ನ ಬಲೆಗೆ ಬೀಳಕೂಡದು, ನಮ್ಮ ರಾಜ್ಯದ ವಿದ್ಯಾರ್ಥಿಗಳ ಭವಿಷ್ಯವನ್ನು ಹಾಳುಮಾಡಕೂಡದು. ವಿದ್ಯಾರ್ಥಿಗಳು ಮತ್ತು ಪೋಷಕರು ಈ 'ನೀಟ್'ಅನ್ನು ಬಹಿಷ್ಕರಿಸಬೇಕು. ಇಡೀ ರಾಷ್ಟ್ರವು ಶೈಕ್ಷಣಿಕವಾಗಿ ಒಂದು ಬೃಹತ್ ಬಂಡೆಯಾಗಬೇಕಾಗಿಲ್ಲ, ಎಲ್ಲರೂ ಯಾರೋ ನಾಲ್ಕು ಮಂದಿಯ ಮಾಪನಕ್ಕೆ ಬಲಿಪಶುಗಳಾಗಕೂಡದು. ನಮ್ಮ ರಾಜ್ಯ ಸರ್ಕಾರವು ಎಚ್ಚರಗೊಂಡು ನೀಟನ್ನು ನಿಷೇಧಿಸಲಿ, ನಮ್ಮ ರಾಜ್ಯದ ಶಿಕ್ಷಣ ವ್ಯವಸ್ಥೆಯನ್ನು ನಮ್ಮ ಮಕ್ಕಳಿಗಾಗಿ ತೆರೆದಿಡಲಿ. ತಮಿಳುನಾಡಿನ ತರುಣಿಯಂತೆ ನಮ್ಮ ತರುಣ – ತರುಣಿಯರು ಹತಾಶೆಗೆ ಈಡಾಗುವುದು ಕೂಡದು. ಯಾವ ನ್ಯಾಯಾಲಯವು ಅದನ್ನು ಹೇರಲು ಮುಂದಾದರೂ ಸರಿಯೇ, ನಾವದಕ್ಕೆ ಶರಣಾಗಬಾರದು.

✶ ✶ ✶

ಅಲಹಾಬಾದ್ ವಿಶ್ವವಿದ್ಯಾನಿಲಯದಲ್ಲಿ ಹಾಗೂ ಚೆನ್ನೈ ಐ.ಐ.ಟಿ.ಯಲ್ಲಿ ಈ ವಾರ ಎರಡು ವಿಚಾರಗೋಷ್ಠಿ ನಡೆಯುವುದಿತ್ತು. ಮೂರು ದಿನಗಳ ಗೋಷ್ಠಿಗೆ ದೇಶದ ಅನೇಕ ಪರಿಣತರನ್ನು ಆಹ್ವಾನಿಸಲಾಗಿತ್ತು. ಅವು ಸಂವಿಧಾನದ ಆಶಯಗಳು ಮತ್ತು ಸಮಾಜ ವಿಜ್ಞಾನಕ್ಕೆ ಸಂಬಂಧಿಸಿದ ಗೋಷ್ಠಿಗಳು. ಸಾಮಾಜಿಕ ನ್ಯಾಯವನ್ನು ಕೇಂದ್ರೀಕರಿಸಿ ಪ್ರಬಂಧಗಳ ಮಂಡನೆ, ಚರ್ಚೆ, ಆಯೋಜಿಸಲಾಗಿತ್ತು. ಕೇಂದ್ರ ಸರ್ಕಾರದ ದೇವಾನಾಂಪ್ರಿಯ ಮುತ್ಸದ್ದಿಗಳಿಗಾಗಲಿ ಉತ್ತರ ಪ್ರದೇಶದ ಯೋಗಿಮುಖ್ಯರಿಗಾಗಲಿ ಈ ವಿಷಯವು ರುಚಿಸುವುದಿಲ್ಲ. ಗೋಷ್ಠಿಗೆ ಆಹ್ವಾನಿಸಲಾದ ವಿದ್ವಾಂಸರು ವಿದ್ಯಾರ್ಥಿಗಳಿಗೆ ಇನ್ನೇನು ವಿಷಮಯ ಸಿದ್ಧಾಂತಗಳ ಪರಿಚಯ ಮಾಡಿಕೊಟ್ಟುಬಿಡುತ್ತಾರೋ ಎಂದು ಘಾಸಿಗೊಂಡ ಆಳುವ ಮಹಾತ್ಮರು ವಿಚಾರಗೋಷ್ಠಿಯನ್ನು ರದ್ದುಗೊಳಿಸಲು ಒತ್ತಡ ಹೇರಿ ವಿಜಯಿಗಳಾಗಿದ್ದಾರೆ. ತಮ್ಮ ಸ್ವಚ್ಛ ಭಾರತದಲ್ಲಿ ಸ್ವಚ್ಛ ಮನಸ್ಸುಗಳಿಗೆ, ಸ್ವಸ್ಥ ಚಿಂತನೆಗಳಿಗೆ, ಅವಕಾಶ ಕೂಡದೆಂಬ ಮೌಢ್ಯದಿಂದಾಗಿ ವಿಚಾರಗೋಷ್ಠಿಗೆ ಕಲ್ಲು ಹಾಕಲಾಗಿದೆ. ವಿಶ್ವವಿದ್ಯಾನಿಲಯದ ದೊಡ್ಡ ಮನುಷ್ಯರೆಲ್ಲಾ ಮೇಲಿನವರ ಅನಧಿಕೃತ ಆಜ್ಞೆಗಳಿಗೆ ತಲೆಬಾಗಿದ್ದಾರೆ. ಬೌದ್ಧಿಕ ವಾತಾವರಣವನ್ನು ಕಲುಷಿತಗೊಳಿಸುವುದು ನಮ್ಮನ್ನಾಳುತ್ತಿರುವ ಪ್ರಭೃತಿಗಳ ದಿನನಿತ್ಯದ "ಸಾಂಸ್ಕೃತಿಕ" ಚಟುವಟಿಕೆ. ಆತ್ಮೀಯ ಗೌರಿಯಂಥವರ ಹತ್ಯೆಗೆ ಇಂತಹ ವಾತಾವರಣದ ಸೃಷ್ಟಿಯು ನೀರು – ಗೊಬ್ಬರ ಒದಗಿಸಿದ್ದಿರಬಹುದಲ್ಲವೆ? ಆದರೆ ವಿದ್ವಾಂಸರೇಕೆ ಮೂಕರಾಗಿದ್ದಾರೆ?

ಉತ್ತರಾಖಂಡದಲ್ಲಿ ಒಬ್ಬ ವಿದ್ವತ್ ಪೂರ್ಣ ತಲೆ ಹೊತ್ತಿರುವ ಮಂತ್ರಿ ಮಾಧ್ಯಮಿಕ ಶಾಲೆಯೊಂದಕ್ಕೆ ಹೋಗಿ ಅಲ್ಲಿಯ ಅಧ್ಯಾಪಕಿಗೆ ಗಣಿತದ ಪಾಠ ಬೋಧಿಸಿದ್ದಾರೆ. ಆಕೆ ಈವರೆಗೆ ಕಲಿತಿದ್ದುದೆಲ್ಲಾ ಆತನ ಮುಂದೆ ದಂಡವಾಗಿಹೋಯಿತು! –೧+–೧ ಎಷ್ಟು ಎಂದು ಕೇಳಿದ; ಆಕೆ – ೨ ಎಂದರು. "ನಿನ್ನ ತಲೆ, ಉತ್ತರ ತಪ್ಪು, ಅದು ಸೊನ್ನೆ ಆಗುತ್ತದೆಂದು ಸಹ ನಿನಗೆ ತಿಳಿಯದು" ಎಂದು ಆಕೆಯನ್ನು ದಂಡಿಸಿದ!

ಇಂಥವರು ನಮ್ಮ ದೇಶವನ್ನು "ಅಭಿವೃದ್ಧಿ"ಯ ಹಾದಿಯಲ್ಲಿ ದೂಡುತ್ತಿದ್ದಾರೆ. ಇದು ೨೧ನೇ ಶತಮಾನವೇ ಎಂದು ಅನುಮಾನ ಬರುತ್ತಿದೆ! ನೀವೇನೆನ್ನುತ್ತೀರಿ?




## ಕೃಷಿ ಕಾಯಕದಲ್ಲಿ ಮಹಿಳೆಯ ತ್ಯಾಗ

✉ 'ಹೆಣ್ಣಿಗೆ ಇರುವಷ್ಟು ಆಲೋಚನೆಗಳು ಯಾರಿಗೂ ಇಲ್ಲ ಎನ್ನಬಹುದು. ಬೆಳಿಗ್ಗೆ ಏಳುವಾಗಲೇ ಕೆಲಸದ ವೇಳಾಪಟ್ಟಿ ಇಟ್ಟುಕೊಂಡೇ ಏಳುವುದು. ನಿಯಮಾನುಸಾರ ಏನು ಆಗಬೇಕೋ ಅದೆಲ್ಲ ಮುಗಿಯಲೇಬೇಕು. ಮನೆಯಲ್ಲಿ ಗಂಡನಿಂದ ಹಿಡಿದು ಅತ್ತೆ ಮಾವಂದಿರಿರಲಿ, ಮೈದುನ ನಾದಿನಿಯರೇ ಇರಲಿ, ಈಕೆಯ ಅವಶ್ಯಕತೆ ಬಹಳ. ಒಬ್ಬ ಸೇವಕಿಯಂತೆಯೇ ಈಕೆಯ ಬಾಳು.

ಇಂದಿನ ವಾತಾವರಣದಲ್ಲಿ ಕಚೇರಿ, ಖಾಸಗಿ ಕಂಪನಿ, ಮನೆಗೆಲಸದ ಮಾಡುವವರ ಯಾದಿ ಇದೇ ಅಂದರೂ ಆದೀತು. ಇಷ್ಟೆಲ್ಲ ಮಾಡಿಯೂ ಬೈಸಿಕೊಳ್ಳುವುದು ಮಹಿಳೆಯೇ ಕುಟುಂಬದಲ್ಲಿ ಸಹಾಯಕರಾಗಿ ಕೆಲಸಗಳಿಗೆ ಭಾಗಿಯಾದರೆ ನಮ್ಮಿಂದಲು ಸೇವೆಗೆ ಸಹಕಾರ ನೀಡಿದಂತಾಗುತ್ತದೆ. ಆಗ ಈ ಮಹಿಳೆಗೆ ವಿರಮಿಸಲು ತುಸು ಸಮಯ ಅನುಕೂಲವಾಗುವುದು.

ಮನೆಯಿಂದ ಹೊರಹೋಗುವ ಗಂಡಸರಿಗಿಂತ ಮನೆಯಲ್ಲಿದ್ದು ಎಲ್ಲೆಡೆಯ ಗಮನ ನೀಡುವ ಕೆಲಸ ಹೆಣ್ಣಿನದು. ಬಾಳೊಂದು ನಂದನವನ ಆಗಬೇಕಾದರೆ ಒಟ್ಟಿಗಿನ ಪ್ರೀತಿ, ಸ್ನೇಹ, ವಿನಯ, ಮುಜುಗರ ಎಲ್ಲ ಕಾಡಬೇಕು. ಶ್ರದ್ಧೆಯ ಕೆಲಸ ಬದುಕಿನಲ್ಲಾಗುವ ಬದಲಾವಣೆಗೆ ವಿಸ್ಮಯವಾಗುವುದು. ತನ್ನ ನೋವ ಮರೆತು ಇತರರ ಏಳಿಗೆಯನ್ನೇ ಬಯಸುವ ಧೀರದಾತೆ ಈ ಕೃಷಿ ಮಹಿಳೆ. ಹುಟ್ಟಿನಿಂದ ವಿದಾಯದವರೆಗೂ ಕ್ಷಣವೂ ವಿರಮಿಸದ ಕ್ರಿಯಾಶೀಲತೆ, ಚೈತನ್ಯವಂತೆ. ಯಾವುದನ್ನೂ ಅಸಹ್ಯಪಡದೆ ತನು – ಮನ ಅರ್ಪಿಸುವ ತಲೆಬಾಗಿ ಕೆಲಸ ಮಾಡುವಾಕೆ. ಈಕೆಯ ಅದಮ್ಯ ಶಕ್ತಿಯನ್ನು ಅಂತರಂಗದಲ್ಲೇ ಕಾಣಬೇಕು. ಜನ್ಮದಾತೆ, ಭಾಗ್ಯದಾತೆ, ಶಕ್ತಿಮಾತೆ, ಭೂಮಾತೆ ಎಂದು ಕರೆಸಿಕೊಳ್ಳುವ ಈ ಅದ್ಭುತ ಅನಂತಶಕ್ತಿಗೆ ನಾವು ನೀಡಬೇಕಾದ ಗೌರವ ದೊಡ್ಡದು. ಇಂಥ ಕೃಷಿ ಮಹಿಳೆಯ ಬದುಕು ಆದರ್ಶ ಮತ್ತು ಅತೀತ.

*ಕೊಪ್ಪಳ* **ಅಕ್ಬರ್ ಸಿ. ಕಾಲಿಮಿರ್ಚಿ**

✉ ಹೊಸತು ಪತ್ರಿಕೆಯ ಸೆಪ್ಟೆಂಬರ್ ಸಂಚಿಕೆ ರಂಗ ಕಲಾವಿದ ಏಣಗಿ ಬಾಳಪ್ಪ ಹಾಗೂ ಭಾರತಕ್ಕೊಂದು ಹೊಸದಾರಿ ನಿರ್ಮಿಸಿದ ಪ್ರೊ॥ ಯು. ಆರ್. ರಾವ್ ಇವರೀರ್ವರ ಸಚಿತ್ರ ನುಡಿ ನಮನಗಳನ್ನು ದಾಖಲಿಸಿ ಕೊಂಡು ವೈಶಿಷ್ಟ್ಯದ ಸಂಚಿಕೆಯಾಗಿ ಹೊರಬಂದಿದೆ. ಬಾಹ್ಯಾಕಾಶಕ್ಕೇರುವ ರೂಪೀಕರಣವನ್ನು ಕಂಡು ಹುಡುಕಿದ ಪ್ರೊ॥ ರಾವ್ ಅವರ ಕುರಿತಾಗಿ ಬೆಂಗಳೂರಿನ ಡಾ॥ ಬಿ. ಎಸ್. ಶೈಲಜಾ ಅವರು ಸಚಿತ್ರವಾಗಿ ವಿವರಿಸಿ ರಾವ್ ಅವರ ಜೀವನ ಚಿತ್ರಣವನ್ನು ಓದುಗರಿಗೆ ಉಣಬಡಿಸಿದ್ದಾರೆ.

*ಕಾಸರಗೋಡು* **ಕೀರಿಕ್ಕಾಡು ವನಮಾಲ ಕೇಶವ ಭಟ್ಟ**

## ಮಹಾನುಭಾವ ಪಂಥ

✉ 'ಮರಾಠಿಯನ್ನು ಧಾರ್ಮಿಕ ಭಾಷೆ ಎಂದೊಪ್ಪಿಕೊಂಡ ಮಹಾನುಭಾವ ಪಂಥಕ್ಕೆ ಮರಾಠಿ ಸಾಹಿತ್ಯದಲ್ಲಿ ವಿಶೇಷ ಸ್ಥಾನವಿದೆ. ಸಂಸ್ಥಾಪಕನಾದ ಶ್ರೀ ಚಕ್ರಧರನ ಚರಿತ್ರೆಯನ್ನು ಕಥನ ಮಾಡುವ 'ಲೀಳಾಚರಿತ್ರೆ' (ಕ್ರಿ. ಶ. ೧೨೭೮)ಯು ಮರಾಠಿಯ ಆದ್ಯಗ್ರಂಥ. ಹಲವು ಗ್ರಂಥಗಳ ನಿರ್ಮಾಣ ಮಾಡಿ ಈ




ಪಂಥವು ಮರಾಠಿಯನ್ನು ಸಮೃದ್ಧಿಗೊಳಿಸಿತು. ಧಾರ್ಮಿಕ ಪ್ರೇರಣೆಯಿಂದ ಬರೆದ ಈ ಸಾಹಿತ್ಯವು ವೈವಿಧ್ಯತೆಯಿಂದಲೂ, ವೈಚಿತ್ರ್ಯದಿಂದಲೂ ಕೂಡಿದೆ. ಈ ಬರವಣಿಗೆಯು ಚರಿತ್ರೆ, ಕಾವ್ಯ, ತತ್ವ, ಚರ್ಚೆ, ವ್ಯಾಕರಣ, ಛಂದಸ್ಸು, ಕೋಶ ಸ್ಥಳವರ್ಣನೆ, ಭಾಷ್ಯ, ಆರತಿ, ಪದ್ಯ, ಭಾರೂಢದಲ್ಲಿದೆ. ಚಕ್ರಧರನ ಜೊತೆಗೆ ಶಿಷ್ಯ ನಾಗದೇವಾಚಾರ್ಯನೂ ಮರಾಠಿ ಭಾಷೆಗೆ ಗೌರವ ನೀಡಿದನು.

ಮಹಾನುಭಾವ ಪಂಥವು ವೈದಿಕವೇ–ಅವೈದಿಕವೇ ಎಂಬ ಬಗೆಗೆ ಭಿನ್ನಾಭಿಪ್ರಾಯವಿದೆ. ಮಹಾನುಭಾವರ ಸಂಪೂರ್ಣ ಸಾಹಿತ್ಯವನ್ನು ಪಂಚಕೃಷ್ಣರನ್ನು ಕೇಂದ್ರದಲ್ಲಿ ಇರಿಸಿ ರಚಿಸಲಾಗಿದೆ. ಶ್ರೀಕೃಷ್ಣ, ಶ್ರೀ ದತ್ತಾತ್ರೇಯ, ಶ್ರೀ ಚಾಂಗದೇವ, ಶ್ರೀಗುಂಡಮ್ (ಗೋವಿಂದ ಪ್ರಭು ಮತ್ತು ಪೈಠಣದ ಚಾಂಗದೇವ (ಶ್ರೀ ಚಕ್ರಧರ) ದತ್ತ ಪಂಥವಾದ ಈ ಮಹಾನುಭಾವ ಪಂಥವು ಮಹಾರಾಷ್ಟ್ರದಲ್ಲಿ ಅದನ್ನು ಪ್ರತಿಸ್ಥಾಪನೆ ಮಾಡಿದೆ. ಈ ಪಂಚ ಕೃಷ್ಣರಲ್ಲಿ ಆನಂತರದ ನಾಲ್ವರು ದತ್ತ ಪರಂಪರೆಯ ಅವತಾರಿಗಳು. ಮಹಾನುಭಾವರ ದತ್ತ ಏಕಮುಖಿ, ದತ್ತರದ್ದು ತ್ರಿಮುಖಿ ಗೋರಖನ ಶಿಷ್ಯರು ನಾಥ ಪಂಥವನ್ನು ಪ್ರಸಾರ ಮಾಡುವಾಗ ಚಾಂಗದೇವನ ಹೆಸರು ಪ್ರಸಿದ್ಧವಾಗಿತ್ತು. ಅವನು ಮಾಹೂರದ ದತ್ತಾವಧೂತರಿಂದ ದೀಕ್ಷೆ ಪಡೆದು ಗುಜರಾತದ ದ್ವಾರಾವತಿಗೆ ಹೋದ. ಮುಂದೆ ರಾವುಳ ಉಪ ಪರಂಪರೆವೊಂದಿದೆ ಸಂಬಂಧ ಬಂತು. ಅಫಗಾಣ, ಪಂಜಾಬ, ರಾಜಸ್ತಾನ, ಗುಜರಾತದಲ್ಲಿ ರಾವುಳರ ಪ್ರಭಾವಿದೆ. ರಾವುಳರು ಪಾಶುಪತರಾಗಿದ್ದರು. ಚಾಂಗ ದೇವನೂ ಆರಂಭದಲ್ಲಿ ಶೈವ ಪಾಶುಪತವಾಗಿರ ಬಹುದು. ಪಾಶುಪತರು ಶೈವರಾಗಿದ್ದರೂ ಶ್ರೀ ಕೃಷ್ಣನ ಉಪಾಸಕರು. ಶಿವ ಮತ್ತು ದತ್ತನಿಗೆ ಪಾಶುಪತರಲ್ಲಿ ಗೌರವದ ಸ್ಥಾನವಿದೆ. ಉಪಮನ್ಯು ಮುನಿಯಿಂದ ಶ್ರೀ ಕೃಷ್ಣನು ಪಾಶುಪತ ವ್ರತದ ದೀಕ್ಷೆ ತೆಗೆದು ಕೊಂಡನೆಂದು ಪಾಶುಪತರು ನಂಬುತ್ತಾರೆ. ಪಾಶುಪತರು ದ್ವೈತ, ಮಹಾನುಭಾವರೂ ದ್ವೈತ. ಆ ಕಾಲದ ಶೈವರು ಶ್ರೀ ಕೃಷ್ಣ ಹಾಗೂ ದತ್ತನ ಉಪಾಸನೆ ಮಾಡುತ್ತಾರೆ. ಚಕ್ರಧರನಿಗೆ ಶಿವೋಪಾಸನೆಯು ಒಪ್ಪಿಗೆ ಇರಲಿಲ್ಲ. ಕೃಷ್ಣ ಭಕ್ತಿಯನ್ನು ಬೆಂಬಲಿಸಿದರು. ಹಾಗೆಯೇ ಅವರಿಗೆ ನಾಥ ಪಂಥದ ಶಿವಶಕ್ತಿ – ಅದ್ವೈತ ತತ್ವವೂ ಒಪ್ಪಿಯಿರಲಿಲ್ಲ. ಹೀಗಾಗಿ ಭಿನ್ನ ವಿಚಾರಧಾರೆಯನ್ನು ಮಂಡಿಸಿದರು. ಸಂಶೋಧಕರಾದ ವಿ. ಬಿ. ಕೋಲತೆ ಯವರ 'ಮಹಾನುಭಾವ ತತ್ವಜ್ಞಾನ'ದ ಸಾರ ಹೀಗಿದೆ:

ಮಹಾನುಭಾವ ತತ್ವಜ್ಞಾನವು ಜೀವ, ದೇವತೆ, ಪ್ರಪಂಚ ಹಾಗೂ ಪರಮೇಶ್ವರ ಎಂಬ ನಾಲ್ಕು ನಿತ್ಯವಸ್ತುವನ್ನು ಒಪ್ಪುತ್ತದೆ. ಜೀವ ಮತ್ತು ಈಶ್ವರದ ಐಕ್ಯ ದರ್ಶನದ ಬಗೆಗೂ ಮತಭೇದವಿದೆ. ಈ ತತ್ವಜ್ಞಾನವು ಪ್ರಪಂಚದ ಸ್ವತಂತ್ರ ಅಸ್ತಿತ್ವವನ್ನು ಒಪ್ಪಿದೆ. ಮೋಕ್ಷವೇ ಇದರ ಸಾಧ್ಯ. ಇದಕ್ಕೆ ಆತ್ಮಜ್ಞಾನದ ಅಗತ್ಯವಿದೆ. ದೇವರ ಜ್ಞಾನಕ್ಕಿಂತ ಭಕ್ತಿ ಹೆಚ್ಚು ಶ್ರೇಷ್ಠ. ದೇವರ ಬೋಧಶಕ್ತಿಯಿಂದ ಜೀವಕ್ಕೆ ಜ್ಞಾನಪ್ರಾಪ್ತಿಯಾಗಿ ಅದು ದೇವರಿಗೆ ಸಮಾನವಾಗಿರುತ್ತದೆ. ಮೋಕ್ಷಪ್ರಾಪ್ತಿಯ ಮತ್ತೊಂದು ಸಾಧನವೆಂದರೆ ಭಕ್ತಿ. ಭಕ್ತಿ ಮಾರ್ಗವೇ ಶ್ರೇಷ್ಠ. ದೇವರಿಂದ ಪ್ರೇಮ ಸಂಚಾರವಾದ ಬಳಿಕ ಜೀವನ ಸ್ವಭಾವ ಇಲ್ಲವಾಗುತ್ತದೆ. ಭಕ್ತ–ದೇವರ ನಿತ್ಯ ಸಂಬಂಧ ಏರ್ಪಡುತ್ತದೆ. ಆಗ ದೇವರು ಅವಿದ್ಯೆಯನ್ನು ನಾಶಗೊಳಿಸಿ ಅವನಿಗೆ 'ಸ್ವ'ರೂಪವನ್ನು ನೀಡುತ್ತಾನೆ. ಭಕ್ತನು ದೇವರ ಸ್ವರೂಪದ ಆನಂದವನ್ನು ಅನುಭವಿಸುತ್ತಾನೆ. (ವಿವಿಧ ಮೂಲಗಳಿಂದ)

*ಬೆಳಗಾವಿ* **ಚಂದ್ರಕಾಂತ ಪೋಕಳೆ**

### ಅಸ್ತಿತ್ವ

ಕತ್ತಲಾಗುವುದ
ಕ್ಕೆ
ಕಾಯುತ್ತಿತ್ತು
ಬೆಳ್ಳಿ - ಚಿಕ್ಕಿ

**ಪ. ಉಮೇಶ ಕಾರಂತ**
ಮಂಗಳೂರು – ೫೬೭ ೦೦೧



## ಭಗವದ್ಗೀತೆ : ಒಂದು ಅವಲೋಕನ

# ೧೩. ಪ್ರಕೃತಿಯ ಗುಣಗಳು ಮತ್ತು ಪುರುಷೋತ್ತಮನ ಸರ್ವವ್ಯಾಪಿತ್ವ

ಸಾಂಖ್ಯದ ತತ್ವಗಳ ಪ್ರಸ್ತಾಪವು ಗೀತೆಯಲ್ಲಿ ಯಥೇಚ್ಛವಾಗಿ ಬರುತ್ತದೆ. ಆದರೆ ಸಾಂಖ್ಯದಲ್ಲಿ ಇದ್ದಂತೆಯೇ ಅವುಗಳ ನಿರೂಪಣೆ ಇರುವುದಿಲ್ಲ. ಸಾಂಖ್ಯದರ್ಶನದ ವಿಕಾಸವು ನಮ್ಮ ದೇಶದ ತತ್ತ್ವಶಾಸ್ತ್ರದ ಇತಿಹಾಸದಲ್ಲಿ ಕಾಲದಿಂದ ಕಾಲಕ್ಕೆ ಮೂಲದ ಪರಿಕಲ್ಪನೆಗಳಿಗೆ ಭಿನ್ನವಾಗಿ ನಡೆದಿರುವುದಕ್ಕೆ ಗೀತೆಯ ಕಾಣಿಕೆಯು ಗಮನಾರ್ಹವಾದ್ದು. ವಿಶೇಷವೆಂದರೆ ಸಾಂಖ್ಯವು ಹೇಳುವ ತ್ರಿಗುಣಗಳಿಗೆ ಗೀತೆಯು ವರ್ಣವಿಭಜನೆಯ ಲೇಪವನ್ನು ಸಹ ಹಚ್ಚುತ್ತದೆ. ಇಂತಹ ಗುಣಗಳನ್ನು ಮೀರಿ ಮೇಲೇರುವುದು ಪ್ರಕೃತಿ–ಪುರುಷರ ನಡುವಿನ ಭಿನ್ನತೆಯ ಬಗೆಗಿನ ವಿವೇಕದಿಂದ. ಈ ವಿಧದ ಪುರುಷನ ಅತಿಶಯವೋ ಎಂಬಂತೆ ಗೀತೆಯು ಒಬ್ಬ ಪುರುಷೋತ್ತಮನನ್ನು ನಮ್ಮ ಮುಂದಿಡುತ್ತದೆ. ಅವನು ನಿರಾಕಾರನಾದರೆ ಬಹುಶಃ 'ಬ್ರಹ್ಮನ್' ಎಂಬ ಪದವಿಗೇರುತ್ತಾನೆ. ಅದರಂತೆ ಇವನು ಸರ್ವವ್ಯಾಪಿ ಮತ್ತು ಎಲ್ಲದಕ್ಕೂ ಆದಿ ಮೂಲ.

ಜಿ. ರಾಮಕೃಷ್ಣ

**ಈ**ವರೆಗಿನ ಹದಿಮೂರು ಅಧ್ಯಾಯಗಳನ್ನು ಪರಿಚಯಿಸಿಕೊಳ್ಳಲು ನಾವು ಒಂದು ವಿಧಾನ ಅನುಸರಿಸಿಕೊಂಡು ಬಂದಿದ್ದೇವೆ. ಯಾವ ಅಧ್ಯಾಯ ವನ್ನೂ ಇಡಿಯಾಗಿ, ಅಂದರೆ ಯಾವ ಶ್ಲೋಕವನ್ನೂ ಬಿಡದೆ, ಚರ್ಚಿಸುತ್ತಾ ಬರಲಿಲ್ಲ; ಆದರೆ ಯಾವ ಅಧ್ಯಾಯದಲ್ಲೂ ಕೊರತೆಯ ಬಾಧೆ ತಟ್ಟದಂತೆ ನಡೆದು ಬಂದಿದ್ದೇವೆ. ಅದು ಸ್ವಲ್ಪ ಅತಿಶಯೋಕ್ತಿಯೂ ಇರಬಹುದು. ಮುಖ್ಯವಾದ ಅಂಶಗಳನ್ನು ನಿರ್ಲಕ್ಷಿಸಿದ್ದೇವೆ ಎಂಬ ಭಾವನೆಯಂತೂ ಬರಬೇಕಾಗಿಲ್ಲ. ಎಷ್ಟೋ ವ್ಯಾಖ್ಯಾನಗಳು ಗೀತೆಯ ವಾಕ್ಯಗಳನ್ನು ಪಕ್ಕಕ್ಕಿರಿಸಿ ತಮ್ಮದೇ ತತ್ವಗಳನ್ನು ಗೀತೆಗೆ ಆರೋಪಿಸುವ ಹಾದಿ ಹಿಡಿದಿವೆ. ಗೀತೆಯಲ್ಲಿ ಏನೋ ಒಂದು ಗುಹ್ಯಜ್ಞಾನವಿದೆ, ಅದರ ನಿಗೂಢತೆಯನ್ನು ಅರಿಯಲಾಗದು, ಅದನ್ನು ಅರಿಯುವುದಕ್ಕಿಂತಲೂ ಅದನ್ನು ಆದರಿಸುವುದೇ ಮುಖ್ಯ, ಎಂಬ ಭಾವವನ್ನು ತಾಳಿರುವ ವ್ಯಾಖ್ಯಾನಗಳು ನಮ್ಮಲ್ಲಿವೆ. ಅಂತಹ ಅನಗತ್ಯ ಭ್ರಮೆ ಬೇಡವೆಂದೇ ನಾವು ಗೀತೆಯನ್ನು ಒಂದು ಒಳ್ಳೆಯ, ಆದರೆ ಸಾಮಾನ್ಯ ಗ್ರಂಥವೆಂಬಂತೆ, ಪರಿಶೀಲಿಸುತ್ತಾ ಬಂದಿದ್ದೇವೆ. ಅದಕ್ಕಾಗಿ ಗೀತೆಯ ಅಧ್ಯಾಯಗಳನ್ನು ಸಾವಧಾನವಾಗಿ ಅದರ ಶ್ಲೋಕಗಳ ಅರ್ಥಸಹಿತ ತಿಳಿಯುತ್ತಾ ಬಂದಿದ್ದೇವೆ. ತನ್ಮೂಲಕ ಗೀತೆಯ ನಿಜವಾದ ಹೇಳಿಕೆ ಮತ್ತು ತಾತ್ಪರ್ಯ ಗ್ರಹಿಸುತ್ತಾ ಬಂದಿದ್ದೇವೆ. ಅದರಲ್ಲಿ ಇಲ್ಲದ್ದನ್ನು ಅದಕ್ಕೆ ಹೇರುವ ಪ್ರಸಂಗ ಬಾರದಿರಲಿ ಎಂಬ ಉದ್ದೇಶವೂ ಅದರಲ್ಲಿದೆ. ಹತ್ತನೆಯ ವಿಭೂತಿ ಯೋಗವೆಂಬ ಅಧ್ಯಾಯವನ್ನಾಗಲಿ, ಹನ್ನೊಂದನೆಯ ವಿಶ್ವರೂಪ ದರ್ಶನದ ಅಧ್ಯಾಯವನ್ನಾಗಲಿ ದಂಗುಬಡಿದವರಂತೆ ಓದಿಕೊಳ್ಳಬೇಕಾಗಿಲ್ಲವೆಂಬುದು ನಮಗೆ ಸಾಕಷ್ಟು ಸ್ಪಷ್ಟವಾಯಿತು. "ವಿಭೂತಿ" ಎಂದರೆ ಸಮೃದ್ಧವಾದ್ದು, ಅತಿಮಾನುಷವಾದ ಶಕ್ತಿಯುಳ್ಳದ್ದು, ಎಂಬುದು ಸಾಮಾನ್ಯವಾದ ಅರ್ಥ. ಭಗವಾನನು ತನ್ನ ಶ್ರೇಷ್ಠತೆಯನ್ನು ತೋರ್ಪಡಿಸಿಕೊಳ್ಳಲು ವಿವಿಧ ವರ್ಗಗಳಿಗೆ ಸೇರುವಂತಹ ವಿಭಾಗಗಳಲ್ಲಿ ತಾನು ಏನಾಗಿ ಗುರುತಿಸಿಕೊಳ್ಳುತ್ತಾನೆಂಬುದನ್ನು ವಿಶದೀಕರಿಸಿದ. ಹಾಗೆ ನೋಡಿದರೆ ಅದರಲ್ಲೇನೂ ವಿಶೇಷವಿಲ್ಲ; ಅವನು ಬೇರೆ ತೆರನಾಗಿ ಗುರುತಿಸಿಕೊಂಡಿದ್ದರೂ ಅದೇ ಶ್ಲಾಘನೆ ಮತ್ತು ಸಮರ್ಥನೆ ದೊರೆಯುತ್ತಿತ್ತು. ಉದಾಹರಣೆಗೆ, ವೇದಗಳಲ್ಲಿ ಅವನು ಸಾಮವೇದವಂತೆ. ಆದರೆ, ವೇದಗಳಲ್ಲಿ ಋಗ್ವೇದಕ್ಕಿಂತಲೂ ಹೆಚ್ಚಿನ ಶೋಭೆ ಅಥವಾ ಪ್ರಾಶಸ್ತ್ಯ ಸಾಮವೇದಕ್ಕಿಲ್ಲ. ಏನೋ ಒಂದು ವಿವರಣೆ ನೀಡುವ ಜಾಣತನ ನಮ್ಮಲ್ಲಿದೆಯಾದ್ದರಿಂದ ನಾವು ಗೀತೆಯ ವಾಕ್ಯವನ್ನು ಸಮರ್ಥಿಸಿಬಿಡುತ್ತೇವೆ. ಭಗವಾನನು "ವೇದಗಳಲ್ಲಿ ನಾನು ಋಗ್ವೇದ" ಎಂದು ಹೇಳಿಕೊಂಡಿದ್ದರೆ ಅದನ್ನೇ ನಾವು ಸಮರ್ಥಿಸಿಬಿಡುತ್ತಿದ್ದೆವು ಎಂಬುದರಲ್ಲಿ ಸಂಶಯವಿಲ್ಲ. ಆದ್ದರಿಂದ ಅವನು ಹೇಳಿಕೊಂಡಿರುವ ವಿಭೂತಿಗಳಲ್ಲಿ ನಿಗೂಢವಾದ್ದು ಅಥವಾ ಅತ್ಯಂತ ಸಮರ್ಥನೀಯವಾದ್ದು ಎಂಬುದೇನೂ ಕಾಣದು. ವಿಚಾರ ಲಹರಿಗಳಲ್ಲಿ ಸಮುದಾಯದ ಪ್ರತಿಷ್ಠಿತ ಗುಂಪಿನ ಅಭಿಪ್ರಾಯಗಳಿಗೆ ಸರ್ವತ್ರ ವ್ಯಾಪಕವಾದ ಮಾನ್ಯತೆ ದೊರಕಿಸಿಕೊಡಲು ಗೀತೆಯು ಬದ್ಧವಾಗಿರುವುದರಿಂದ ತರ್ಕ ಬೆಳೆಸುವವರಿಗೆ ಅಥವಾ ವಾದ ಮಾಡಹೊರಡುವವರಿಗೆ ಹಾದಿಯು ಸುಗಮವಾಗಿರದಂತೆ ಮಾಡುವುದು ಅದಕ್ಕೆ ಅವಶ್ಯಕ. ಆ ಕಾರಣದಿಂದಾಗಿ ಕೇಳುಗನ ಮನಸ್ಸನ್ನು ನಿಶ್ಚೇಷ್ಟಿತಗೊಳಿಸಬೇಕು. ಅದೇ ದಂಗುಬಡಿಸುವ ಕ್ರಮ. ತತ್ವನಿರೂಪಣೆಯ ದೃಷ್ಟಿಯಿಂದ ಆ ಎರಡು ಅಧ್ಯಾಯಗಳಲ್ಲಿ (೧೦–೧೧) ವಿಶೇಷವಾದ್ದೇನೂ ಇಲ್ಲ, ಆದರೆ ದಂಗುಬಡಿಸುವ ಕ್ರಿಯೆಯಲ್ಲಿ ಅವು ಅಪಾರ ಯಶಸ್ಸು ಗಳಿಸಿವೆ. ಭಕ್ತಿ ಯಾರಲ್ಲಿರಿಸಬೇಕೋ ಆ ಶಕ್ತಿಯ ಅಗಾಧತೆಯು ಈ ಎರಡು ಅಧ್ಯಾಯಗಳಲ್ಲಿ ಮನದಟ್ಟಾಗುವಂತಿದೆ. ಅದೇ ಅವುಗಳ ಯಶಸ್ಸಿಗೆ ಮಾಪಕವೆನ್ನಬಹುದು. ಭಕ್ತನ ಮನೋಭೂಮಿಕೆಯು ಎಷ್ಟು ನಿರ್ಮಲ ಮತ್ತು ಎಷ್ಟು ಶಾಂತತೆಯಿಂದ ತುಂಬಿರುತ್ತದೆಯೆಂಬುದನ್ನು ೧೨ನೆಯ ಅಧ್ಯಾಯವು ನಿರೂಪಿಸುತ್ತದೆ. ಭಕ್ತನು ಶರಣಾಗಿರುವ ಶಕ್ತಿಯು ವಿಶ್ವವನ್ನೆಲ್ಲಾ ಆವರಿಸುವ ಮಹಾನ್ ಕ್ಷೇತ್ರಜ್ಞ ಅಥವಾ ಪರಮ ಬ್ರಹ್ಮನ್ ಸ್ವರೂಪ ಉಳ್ಳದ್ದು ಎಂದು ೧೩ನೆಯ ಅಧ್ಯಾಯವು ಪ್ರತಿಪಾದಿಸಿತು. ಸಾಮಾನ್ಯವಾಗಿ ಯಾವುದನ್ನು "ದೇವರು" ಎನ್ನಲಾಗುತ್ತದೋ ಅದರ ಲಕ್ಷಣಗಳೇ ಇವೆಲ್ಲಾ ಎನ್ನಲಡ್ಡಿಯಿಲ್ಲ. ನಮ್ಮಲ್ಲಿ ದೇವರನ್ನು ಮಾನ್ಯಮಾಡದ ಪಂಥಗಳಿಗೇನೂ ಕಡಿಮೆ ಇಲ್ಲ. ಸಾಂಖ್ಯ, ಬೌದ್ಧ, ಲೋಕಾಯತ, ವೈಶೇಷಿಕ, ಮುಂತಾದ ದರ್ಶನಗಳು ದೇವರ ಅಸ್ತಿತ್ವದ ಅಗತ್ಯವನ್ನು ಸಾರಾಸಗಟಾಗಿ ತಳ್ಳಿಹಾಕಿವೆ. ಪ್ರಕೃತಿಯ ಸ್ವಾಯತ್ತ ಶಕ್ತಿಯನ್ನು ಅವು ಎತ್ತಿಹಿಡಿಯುತ್ತವೆ. ಪ್ರಕೃತಿಗೆ ಬಾಹ್ಯವಾದ ಶಕ್ತಿಯೊಂದು ಪ್ರಕೃತಿಯನ್ನು ಪ್ರೇರೇಪಿಸುವುದಿಲ್ಲ ಮತ್ತು ನಿಯಂತ್ರಿಸುವುದಿಲ್ಲ. ಆದರೆ ಪ್ರಕೃತಿಯು ಸಹ ಯಥೇಚ್ಛವಾಗಿ ಅಥವಾ ಯಾದೃಚ್ಛಿಕವಾಗಿ ವರ್ತಿಸುವುದಿಲ್ಲ; ಅದರಲ್ಲಿ ಚಲನೆಯು ಅನಿರ್ಬಂಧಿತವಾಗಿದ್ದರೂ ಅದು ಅಡ್ಡಾದಿಡ್ಡಿಯಾಗಿ ಚಲಿಸುವುದಿಲ್ಲ. ಅದು ಸ್ವಾಯತ್ತ, ಆದರೆ ಅನಿಯಮಿತವಲ್ಲ. ಪ್ರಕೃತಿಯ ಮೂರು ಗುಣಗಳಿಂದಾಗಿ ಜೀವಿಗಳಲ್ಲಿ ವೈವಿಧ್ಯ ಇರುತ್ತದೆ; ಅದನ್ನು ವಿವರಿಸುವುದು ೧೪ನೆಯ ಅಧ್ಯಾಯದ ವಸ್ತು. ಶಂಕರನು ಹೇಳುವಂತೆ "ಪ್ರಕೃತಿಸ್ಥತ್ವಂ ಗುಣೇಷು ಚ ಸಂಗಃ ಸಂಸಾರಕಾರಣಂ."

ಭಗವಾನನು ಯಾವ ಅಧ್ಯಾಯದಲ್ಲಿ ಏನನ್ನು ಪ್ರತಿಪಾದಿಸಿದರೂ ಅದು "ಪರಮಜ್ಞಾನ" ಎಂಬ

ನೆಲೆಯಲ್ಲೇ ಬೋಧಿಸುತ್ತಾನೆ. ಕರ್ಮ, ಜ್ಞಾನ, ಭಕ್ತಿ, ಸ್ಥಿತಪ್ರಜ್ಞತ್ವ, ಇವನ್ನೆಲ್ಲಾ ಅವನು ಬೋಧಿಸಿರುವುದು ಹಾಗೆಯೇ ತಾನೆ? ಅದೇ ಧಾಟಿಯಲ್ಲಿ ಭಗವಾನನು ೧೪ನೆಯ ಅಧ್ಯಾಯದಲ್ಲಿ ಇನ್ನೊಂದು ಪ್ರಕಾರದ "ಉತ್ತಮ ಜ್ಞಾನವನ್ನು" ನೀಡಹೊರಡುತ್ತಾನೆ. "ಆ ಜ್ಞಾನವನ್ನು ಪಡೆದವರು (ಯಥಾಪ್ರಕಾರ) ಪರಮ ಸಿದ್ಧಿಯನ್ನು ಹೊಂದುತ್ತಾರೆ" (೧೪.೧ : ... ಯತ್ ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಂ ಇತೋ ಗತಾಃ). 'ಪರಮ' ಎಂದರೆ ಮೋಕ್ಷ ದೊರಕಿಸುವಂಥದು; ಯಜ್ಞಾದಿಗಳು ಅದನ್ನು ನೀಡಲಾರವು ಎನ್ನುತ್ತಾನೆ ಶಂಕರ : ಯಜ್ಞಾದಿಜ್ಞೇಯ–ವಸ್ತುವಿಷಯಾಃ ... ನ ಮೋಕ್ಷಾಯ. ಅಂತಹ ಜ್ಞಾನ ಪಡೆದವರು ಪರಾಶಕ್ತಿಯಲ್ಲಿ ಏಕೀಭವಿಸುತ್ತಾರೆ, ಅವರಿಗೆ ಮರುಹುಟ್ಟು ಎಂಬುದಿಲ್ಲ, ಪ್ರಲಯದ ಸಮಯದಲ್ಲಿ ನೋವೂ ಇಲ್ಲ (೧೪.೨ : ... ಸರ್ಗೇ ಅಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ). ಪರಮಪದಪ್ರಾಪ್ತಿಯು ಅಂತಹ ಮಹತ್ತರ ಭಗವಾನನನ್ನು ತಿಳಿಯುವುದರಿಂದ ಸಾಧ್ಯವೆಂದರೆ ಇಡೀ ಜಗತ್ತು ಅವನಿಂದ (ಅಥವಾ ಅದರಿಂದ) ಉದ್ಭವವಾಗಿರಬೇಕು. ಜಗತ್ತೆಂದರೆ ಪ್ರಕೃತಿ ಮತ್ತು ಪುರುಷ ಎರಡೂ ಸೇರುತ್ತವೆ. ಅವುಗಳೇ ಜಗತ್ತಿನ ಉಗಮಕ್ಕೆ ಕಾರಣ. ಸಾಂಖ್ಯದರ್ಶನಕ್ಕಿಂತಲೂ ಭಿನ್ನವಾದ ನಿಲುವು ಇದು. ಸಾಂಖ್ಯದ ಪ್ರಕಾರ ಪ್ರಕೃತಿಗೆ ಯಾರೂ ಕಾರಣರಲ್ಲ; ಅದರ ಅಸ್ತಿತ್ವ ಮತ್ತು ವಿಕಾಸ ಅದರ ಅಂತರ್ಗತ ಸ್ವಭಾವದಿಂದಲೇ ಆಗುತ್ತದೆ. ಗೀತೆಯಲ್ಲಿ ಭಗವಾನನು ಅಗ್ರವ್ಯಕ್ತಿ ಮತ್ತು ಶಕ್ತಿ; ಆದ್ದರಿಂದ ಎಲ್ಲವೂ ಅವನಿಂದ ಜನ್ಯ (೧೪.೩ : ಮಮ ಯೋನಿಃ ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಂ। ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ॥). ಅವನು "ಮಹತ್ ಬ್ರಹ್ಮ" ನಾದ್ದರಿಂದ ಕಾರ್ಯವಾದ ಜಗತ್ತಿಗಿಂತಲೂ ಉಚ್ಚ ಸ್ಥಾನದಲ್ಲಿರುವ ಮೂಲ ಕಾರಣ. ಗೀತೆಯ ಉದ್ದಕ್ಕೂ, ವಿಶೇಷತಃ ೧೧ನೆಯ ಅಧ್ಯಾಯದ ವಿಶ್ವರೂಪ ದರ್ಶನದ ಮೂಲಕ, ತಿಳಿಸುತ್ತಾ ಬಂದಿರುವ ತತ್ತ್ವವೇನೆಂದರೆ "ದೇವರನ್ನು ನಂಬು; ಹಾಗೆಂದರೆ ಅವನು ಮಾಡಿದ್ದಾನೆನ್ನಲಾದುವನ್ನೆಲ್ಲಾ ಒಪ್ಪಿಕೋ ಎಂದರ್ಥ. ಅದುವೇ ಮುಕ್ತಿಗೆ ಹಾದಿ," ಎಂಬುದು. ಪುರುಷನೂ ಸೇರಿದಂತೆ ಜಗತ್ತನ್ನೆಲ್ಲಾ "ಮಾಡಿರುವವನು" ಅವನು; ಅಂತೆಯೇ ಶ್ರೇಣೀಕೃತ ವರ್ಣ ವಿಭಜನೆಯನ್ನು ಸಹ ಮಾಡಿದ್ದಾನೆ. ಅದೆಲ್ಲವನ್ನೂ ಇಡಿಯಾಗಿ ಸ್ವಾಗತಿಸುವುದು ಮತ್ತು ಸ್ವೀಕರಿಸುವುದು ಮೋಕ್ಷದ ಹಾದಿ. ಈ ರೀತಿಯ ದೇವರನ್ನು ಒಪ್ಪದವರು ಮೋಕ್ಷಾರ್ಥಿಗಳಾಗುವಂತಿಲ್ಲ, ಗೀತೆಯಲ್ಲಿ ಅವರಿಗೆ ಪ್ರವೇಶವಿಲ್ಲ. ಈ ಅರ್ಥದಲ್ಲಿ ಗೀತೆಯು ಒಂದು ಮತಧರ್ಮದ ಪ್ರಣಾಲಿಕೆಯಾಗಿದೆ. ಹಾಗಾಗಲು ಅದು ಸಾಂಖ್ಯ ದರ್ಶನವನ್ನು ಭಾಗಶಃ ಸ್ವೀಕರಿಸಿ ಅದರ ಮೂಲತತ್ತ್ವವನ್ನು ತನ್ನ ಮನಬಂದಂತೆ ಬದಲಾಯಿಸಿಕೊಂಡಿದೆ. ಹಾಗೆ ಬದಲಾಯಿಸಿಕೊಂಡಾಗ ಹೇಳಬಹುದಾದ ಮಾತು ಮುಂದಿನ ಶ್ಲೋಕದಲ್ಲಿದೆ : "ಎಲ್ಲ ಯೋನಿಗಳಲ್ಲಿ ಹುಟ್ಟುವ ಸರ್ವಕ್ಕೂ ಮೂಲಯೋನಿಯು ನಾನು; ಆ ಯೋನಿಯಲ್ಲಿ ಬೀಜ ಹುದುಗಿಸುವವನೂ ನಾನೇ" (೧೪.೪ : ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ। ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ॥).

ಇಲ್ಲಿ ಗಮನಿಸಬೇಕಾದ ಅಂಶವೊಂದಿದೆ : ಭಗವಾನನ ಈ ಮಾತುಗಳಿಗೆ ತರ್ಕದ ಅಡಿಪಾಯವನ್ನು ರಚಿಸಿಕೊಡುವ ಉದ್ದೇಶವೂ ಇಲ್ಲ, ಯತ್ನವೂ ಇಲ್ಲ. ಅವನ ಪ್ರಭಾವಳಿಯೊಂದೇ ಅವನ ಮಾತುಗಳಿಗೆ ಆಧಾರ. ದೇವರ ಅಸ್ತಿತ್ವವು ತಾರ್ಕಿಕವಾಗಿ ಸಮರ್ಥನೀಯವೆಂದು ವಾದಿಸುವ ಗ್ರಂಥಗಳು ನಮ್ಮಲ್ಲಿವೆ. ಉದಾಹರಣೆಗೆ ನ್ಯಾಯದರ್ಶನವನ್ನು ನೋಡಬಹುದು. ಗೌತಮನ ನ್ಯಾಯಸೂತ್ರ ಮತ್ತು ಅದರ ಮೇಲಿನ ವಾತ್ಸ್ಯಾಯನ ಭಾಷ್ಯವು 'ಈಶ್ವರ' ಎಂಬ ತತ್ತ್ವವನ್ನು ಅಂಗೀಕರಿಸಲು ತರ್ಕಪದ್ಧತಿಯನ್ನು ಅನುಸರಿಸಿ ಪ್ರತಿಪಾದನೆಯನ್ನು ಮುಂದಿಡುತ್ತವೆ. ಈ ಪರಂಪರೆಗೆ ಸೇರಿದ ಉದಯನಾಚಾರ್ಯನು "ನ್ಯಾಯ ಕುಸುಮಾಂಜಲಿ" ಎಂಬ ಗ್ರಂಥವನ್ನು ಈಶ್ವರನ ಅಸ್ತಿತ್ವವನ್ನು ತಾರ್ಕಿಕ ಪ್ರಮೇಯಗಳಿಂದ ಸಮರ್ಥಿಸಲೆಂದೇ ಬರೆದಿದ್ದಾನೆ. ಆ ತರ್ಕಕ್ಕೆ ಪ್ರತಿತರ್ಕ ನೀಡಿರುವುದೂ ಉಂಟು. ಅಂತಹ ಯಾವ ಗೋಜಿಗೂ ಹೋಗದೆ ಗೀತೆಯು ಭಗವಾನನ ಅಸ್ತಿತ್ವ ಮತ್ತು ಮಹಿಮೆಯನ್ನು ಸಾರುತ್ತದೆ ಮತ್ತು ಅವನಿಗೆ ಶರಣಾಗಲು ಪ್ರೇರಿಸುತ್ತದೆ. ಅಂದರೆ, ತರ್ಕಕ್ಕಿಂತಲೂ ಭಾವೋದ್ರೇಕಕ್ಕೆ ಇಲ್ಲಿ ಹೆಚ್ಚಿನ ಮನ್ನಣೆ ಇದೆಯೆಂದಾಯಿತು.

ಸಾಂಖ್ಯವು ಗುಣಗಳ ಬಗ್ಗೆ ಹೇಳುವುದನ್ನು ಗೀತೆಯು ಅಳವಡಿಸಿಕೊಂಡಿದೆ. ಗುಣಗಳು ಸತ್ತ್ವ, ರಜಸ್ ಮತ್ತು ತಮಸ್; ಆದರೆ ಅವು ಪದಾರ್ಥಗಳ ವಿಶೇಷಣಗಳೆಂಬ ರೀತಿಯಲ್ಲಿ ಗುಣಗಳಲ್ಲ. ವೈಶೇಷಿಕ ದರ್ಶನದಲ್ಲಿ 'ಗುಣ'ಗಳನ್ನು ಹೇಳುವಾಗ ಅವು ಪದಾರ್ಥಗಳ ಗುಣಗಳು. ಉದಾಹರಣೆಗೆ, ರೂಪ–ರಸ–ಗಂಧ ಇತ್ಯಾದಿ ೨೪ ಗುಣಗಳಿವೆ. ಶಂಕರನು ಹೇಳುವಂತೆ ಗೀತೆಯಲ್ಲಿ ಗುಣಗಳು ಪಾರಿಭಾಷಿಕ ಪದಗಳೇ ವಿನಾ ದ್ರವ್ಯಗಳನ್ನು ಆಶ್ರಯಿಸುವ ಗುಣಗಳಲ್ಲ (ಪಾರಿಭಾಷಿಕಃ ಶಬ್ದಃ ನ ರೂಪಾದಿವತ್ ದ್ರವ್ಯಾಶ್ರಿತಾಃ). ಇದನ್ನು ಗ್ರಹಿಸುವುದು ಮುಖ್ಯ, ಏಕೆಂದರೆ ಮುಂದೆ ಇದೇ ಅಧ್ಯಾಯದಲ್ಲಿ ಮೂರು ಗುಣಗಳನ್ನು ವಿವಿಧ ವ್ಯಕ್ತಿಗಳ ಅಂತಸ್ಥ ಗುಣಗಳು ಅಥವಾ ವಿಶೇಷಣಗಳು ಎಂಬರ್ಥದಲ್ಲಿ ಗೀತೆಯು ಪ್ರತಿಪಾದಿಸುತ್ತದೆ. ಸಾಂಖ್ಯದ ತತ್ತ್ವವನ್ನು ಹೆಸರು ಮಾತ್ರಕ್ಕೆ ಬಳಸಿ, ಅದರ ಮೂಲಾರ್ಥವನ್ನು ಅವಗಣಿಸುವುದು ಗೀತೆಯ ಪದ್ಧತಿ! ಅಂತಹ ವೈರುಧ್ಯವನ್ನು ಪರಿಹರಿಸಿಕೊಳ್ಳಲು ಶಂಕರನದು ಒಂದು ಚಮತ್ಕಾರವಿದೆ : "ದೇಹಿಯನ್ನು ದೇಹಕ್ಕೆ ಕಟ್ಟಿಹಾಕಿದಂತೆ" (ನಿಬಧ್ನಂತಿ ಇವ) ಎಂದು ವ್ಯಾಖ್ಯಾನಿಸುವುದು ಅದು. "ಕಟ್ಟಿ ಹಾಕಿಲ್ಲ, ಕಟ್ಟಿ ಹಾಕಿರುವಂತೆ ತೋರುತ್ತದೆ" ಎಂದು ಹೇಳಿದಾಗ ವಿಶೇಷಣವಲ್ಲದ್ದು ವಿಶೇಷಣವಾಗಿಬಿಡುತ್ತದೆ!

ಈ ಅಧ್ಯಾಯದ ಇನ್ನುಳಿದ ಭಾಗವು ಸತ್ತ್ವ–ರಜಸ್–ತಮೋಗುಣಗಳು ವ್ಯವಹಾರದಲ್ಲಿ ಹೇಗೆ ಪ್ರವೃತ್ತವಾಗುತ್ತವೆಂಬುದನ್ನು ವಿಶದೀಕರಿಸುತ್ತದೆ. ಅದರಂತೆ, ಸತ್ತ್ವವು ನಿರ್ಮಲವಾದ್ದರಿಂದ ಪ್ರಕಾಶ ಮತ್ತು ದುಃಖರಹಿತ; ಸುಖ ಮತ್ತು ಜ್ಞಾನಗಳಿಗೆ ಸತ್ತ್ವ ಗುಣವುಳ್ಳವರು ಬದ್ಧರಾಗುತ್ತಾರೆ (೧೪.೬). ಅಂದರೆ, "ನಾನು ಸುಖಿ" ಎಂಬ ಅಂತಃಕರಣ ಭಾವವನ್ನು ಹೊಂದುತ್ತಾರೆ. ರಜಸ್ ಎಂಬುದು ಅನುರಾಗ ಲಕ್ಷಣವುಳ್ಳದ್ದು, ಆದ್ದರಿಂದ ಆಸೆ ಮತ್ತು ಆಸಕ್ತಿ ಮೂಡಿಸುವಂಥದು (೧೪.೭ : ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಂ). ಅದರಿಂದಾಗಿ ರಜೋಗುಣವುಳ್ಳವರು ಕ್ರಿಯೆಗೆ ಬದ್ಧರು. ತಮಸ್ ಎಂಬುದು ಅಜ್ಞಾನದಿಂದ ಉದ್ಭವವಾದ್ದು; ಅದು ಮೋಹವನ್ನು ಮೂಡಿಸುತ್ತದೆ. ಅನರ್ಥ, ಆಲಸ್ಯ ಮತ್ತು ನಿದ್ರಾಭಾವ ಅದರ ಪರಿಣಾಮ (೧೪.೮). ಮುಂದೆ ಗೀತೆಯು ತಿಳಿಸುವಂತೆ ತಮೋಗುಣವು ವೈಶ್ಯ–ಶೂದ್ರರ ಪ್ರಧಾನ ಲಕ್ಷಣ. ವಿಚಿತ್ರವೆಂದರೆ ಆಲಸ್ಯದಿಂದ ತುಂಬಿರುವ ಶೂದ್ರರಿಗೆ ಬೇರೆ ವರ್ಣದವರ ಸೇವೆಯನ್ನು ವಿಧಿಸಲಾಗಿದೆ ಮತ್ತು ಬೇರೆಲ್ಲರಿಗಿಂತಲೂ ಅವರು ಹೆಚ್ಚು ಶ್ರಮಿಸುತ್ತಾರೆ! ಈ ವೈರುಧ್ಯವನ್ನು ಗೀತೆಯು ಗಮನಿಸುವುದೇ ಇಲ್ಲ. "ತಮಸ್ಸು ಪ್ರಮಾದಕ್ಕೆ ಕಾರಣವಾಗುತ್ತದೆ" (೧೪.೯ : ...ತಮಃ ಪ್ರಮಾದೇ ಸಂಜಯತಿ). ಇದರ ಮೇಲಿನ ಶಂಕರ ಭಾಷ್ಯ ಹೇಳುತ್ತದೆ, "ಪ್ರಮಾದವೆಂದರೆ ಮಾಡಬೇಕಾದ ಕೆಲಸವನ್ನು ಮಾಡದಿರುವುದು" (ಪ್ರಮಾದೋ ನಾಮ ಪ್ರಾಪ್ತಕರ್ತವ್ಯ ಅಕರಣಂ), ಎಂದು. ನಿಜಜೀವನದಲ್ಲಿ ಶೂದ್ರನು ತನಗೆ ವಿಧಿಸಲಾದ ಕರ್ತವ್ಯವನ್ನು ಮಾಡದಿದ್ದರೆ ಅವನ ಮೇಲಿನ ವರ್ಣದವರು ಸುಖಲೋಲುಪರಾಗಿ ಜೀವಿಸುವುದೆಂತು! ಇಷ್ಟು ಸುಲಭಗ್ರಾಹ್ಯವಾದ ಅಂಶವನ್ನು ಗಮನಿಸದೆ ಗೀತೆಯ ಬಗ್ಗೆ ವ್ಯಾಖ್ಯಾನಗಳನ್ನು ನೀಡುವುದು ಉಪಹಾಸವಲ್ಲದೆ ಮತ್ತೇನು? ಮೊದ್ದುತನ, ನಿಷ್ಕ್ರಿಯತೆ, ಪ್ರಮಾದ (ಅಂದರೆ ನಿಯಮಿತ ಕೆಲಸ ಮಾಡದಿರುವುದು) ಮತ್ತು ನಿದ್ರಾಸ್ವಭಾವ ತಮಸ್ಸಿನ ಪ್ರಭಾವವೆಂದು ಗೀತೆಯೇ ಹೇಳುತ್ತದೆ (೧೪.೧೩ : ಅಪ್ರಕಾಶಃ ಅಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ। ತಮಸ್ಯೇತಾನಿ ಜಾಯಂತೇ...). ಚೆನ್ನಾಗಿ ದುಡಿಸಿ, ಆಮೇಲೆ ದುಡಿದವರನ್ನು ಸೋಮಾರಿಗಳೆಂದು ದಂಡಿಸುವುದು ವಿಚಿತ್ರವಲ್ಲವೆ? ಇದೆಂತಹ ತರ್ಕ? ತರ್ಕದ ಅಭಾವವು ಅಷ್ಟಕ್ಕೆ ಮುಗಿಯುವುದಿಲ್ಲ. ಆಯಾ ಗುಣಗಳು ಉಚ್ಛ್ರಾಯಸ್ಥಿತಿಯಲ್ಲಿದ್ದಾಗ ವ್ಯಕ್ತಿಗಳು ಗತಿಸಿದರೆ ಏನೇನು ಲಭ್ಯವಾಗುತ್ತದೆ ಎಂಬುದನ್ನು ಸಹ ಗೀತೆಯು ಉಲ್ಲೇಖಿಸುತ್ತದೆ. ಎಂಥವರಾಗಲಿ, ಯಾವ ಸ್ಥಿತಿಯಲ್ಲಾಗಲಿ, ಗತಿಸಿದವರಿಗೆ ಏನು ಲಭ್ಯವೆಂದು ಊಹಿಸುವುದೇ ಒಂದು ಬೌದ್ಧಿಕ ದುರಂತ. ಇನ್ನು ಪುರಾವೆ ಒದಗಿಸುವುದಂತೂ ಅಸಾಧ್ಯವಾದ ಮಾತು. ಹೆಚ್ಚೆಂದರೆ ಭಗವಾನನು ಹೇಳಿದ್ದಾನೆಂಬ ಒಂದು ಪೇಲವ ತರ್ಕವನ್ನು ಬಹಳ ಸಂಕೋಚದಿಂದ ಮುಂದಿಡಬಹುದು, ಅಷ್ಟೆ. ಸತ್ತ್ವ ಗುಣವು ಪ್ರವರ್ಧಮಾನಕ್ಕೆ ಬಂದಿರುವಾಗ ಸತ್ತರೆ ವ್ಯಕ್ತಿಯು ಮಲರಹಿತವಾದ ಲೋಕಕ್ಕೆ ಪ್ರಯಾಣಿಸುತ್ತಾನಂತೆ (೧೪.೧೪). ಇಂತಹ ಮೂಢ ಹೇಳಿಕೆಗಳನ್ನು ಕೇಳಿ ಸಾಕಾಗಿ ಲೋಕಾಯತರು ಒಂದು ಪ್ರಶ್ನೆ ಹಾಕಿದ್ದರು : "ಹೀಗೆ ಏನೇನೋ ಹೇಳುತ್ತೀರಲ್ಲ, ಸತ್ತ ವ್ಯಕ್ತಿ ಯಾರಾದರೂ

ಕ್ಷಣಕಾಲ ಹಿಂದಿರುಗಿ ಬಂದು ನಿಮಗೇನಾದರೂ ಹೇಳಿದ್ದುದುಂಟೆ ?" ಎಂದು. ಗೀತೆಯ ಕರ್ತೃವು ಆ ಪ್ರಶ್ನೆಯನ್ನು ಕೇಳಿಸಿಕೊಳ್ಳುವುದೇ ಇಲ್ಲ ! ರಜೋಗುಣವು ಅತಿಶಯ ಮಟ್ಟದಲ್ಲಿದ್ದಾಗ ಸತ್ತರೆ ವ್ಯಕ್ತಿಯು ಕ್ರಿಯಾವಂತರ ನಡುವೆ ಜನ್ಮ ತಾಳುತ್ತಾನೆ; ಅದೇ ತಮೋಗುಣದ ಸಂದರ್ಭದಲ್ಲಿ ವ್ಯಕ್ತಿಯ ಜನನವು ಮೂಢರ ನಡುವೆಯಂತೆ (೧೪.೧೫). ಇನ್ನೂ ಒಂದು ಹೆಜ್ಜೆ ಮುಂದೆಹೋಗಿ ಶಂಕರ ಹೇಳುವುದು ಹೀಗೆ : "ಮೂಢಯೋನಿಷು ಪಶ್ವಾದಿಯೋನಿಷು ಜಾಯತೇ." ಅಂದರೆ, ತಾಮಸಿಕರು ದನದ ಮಕ್ಕಳಾಗಿ ಹುಟ್ಟುತ್ತಾರೆ !! ಗಂಭೀರವಾಗಿ ಚಿಂತನೆ ಮಾಡಲು ಸಹ ಸೂಕ್ತ ಸಾಮಗ್ರಿಯಲ್ಲ ಇಂತಹ ಮಾತು. ಪುರಾವೆಯು ಅಸಾಧ್ಯವಿದ್ದಾಗ ಹೀಗೆ ನಿರೂಪಣೆ ಮಾಡುವುದುಂಟೆ ? ಅದಕ್ಕೇನೋ ಸಮಾಧಾನ ಹೇಳಿ ಕೊಳ್ಳಬಹುದು : ಇಂತಹ ಹೇಳಿಕೆಗಳನ್ನು ಪದಶಃ ತೆಗೆದುಕೊಳ್ಳಬಾರದು, ಅವನ್ನು ಪೂರ್ವಮೀಮಾಂಸಕರು ಹೇಳುವ ಅರ್ಥವಾದಗಳಂತೆ ಪರಿಗಣಿಸಬೇಕು, ಎಂದು. "ಹಾವುಗಳು ಯಜ್ಞ ಮಾಡಿದವು ಎಂದರೆ ನಿಜಕ್ಕೂ ಹಾವುಗಳು ಯಜ್ಞ ಮಾಡಿದವು ಎಂದಲ್ಲ, ಯಜ್ಞವು ಎಷ್ಟು ಪ್ರಶಸ್ತವೆಂಬುದನ್ನು ತಿಳಿಸಲು ಆ ರೀತಿ ಹೇಳಲಾಗಿದೆ; ಹಾವುಗಳೇ ಯಜ್ಞ ಮಾಡುವಂತಿ ರುವಾಗ ಮನುಷ್ಯ ಅದನ್ನು ಮಾಡಬೇಡವೆ ?" – ಇದು 'ಅರ್ಥವಾದ'. ಗೀತೆಯಲ್ಲಿ ಅರ್ಥವಾದದ ಅನ್ವೇಷಣೆ ಅನಗತ್ಯ ಮತ್ತು ಅಸಂಬದ್ಧ ಎನಿಸುತ್ತದೆ.

ಸಾತ್ವಿಕನ ಕರ್ಮವು ನಿರ್ಮಲವಾದ ಫಲ ನೀಡುತ್ತದೆ, ರಜೋಗುಣದವನ ಕರ್ಮವು ದುಃಖಕ್ಕೆ ಎಡೆಮಾಡಿಕೊಡುತ್ತದೆ ಮತ್ತು ತಾಮಸಿಕನ ಕರ್ಮವು ಅಜ್ಞಾನದ ಆಗರ (೧೪.೧೬). ವರ್ಣ ವಿಭಜನೆಯ ಮೂಸೆಯಿಂದ ಬಂದಿರುವ ಮಾತುಗಳಿವು ಎಂಬುದು ಸ್ಪಷ್ಟ. ಅವನ್ನು ಹಾಗೆ ಅರ್ಥೈಸಿಕೊಂಡರೂ ಸಹ, ಸಾಮಾಜಿಕರಿಗೆ ಚಲನೆಗೆ ಅವಕಾಶ ಬೇಡವೆ ? ತಾಮಸಿಕರು ಹಾಗೆಯೇ ಉಳಿಯುತ್ತಾರೆಯೆ ಅಥವಾ ಉಳಿಯಬೇಕೆ ? ಸಮಾಜದ ಇತಿಹಾಸವು ಚಲನೆಯೇ

ಕಾವ್ಯಲೋಕ

# ಕರ್ಮಯೋಗಿ

**ಒ**ಕ್ಕಲಿಗರ ಹೊಲದಲ್ಲಿ
ಬೆಳೆಯೆದ್ದು ನಗುತಿವೆ;
ತೆನೆತೆನೆಗೆ ಹಕ್ಕಿ ಕುಂತಿವೆ;
ತಿಂದುಳಿದ ತೆನೆಹಿಂದೆ
ಹಿರಿ ತತ್ವಗಳಡಗಿವೆ.
ಕರ್ಮಯೋಗಿಯು ಚೆಲ್ಲಿದ
ಚರಗ ತಿನ್ನುವ ಜೀವಕೋಟಿ,
ಇದು ನೋಡಿ ಸಂಭ್ರಮಿಸಿ,
ತೆನೆ ತಲೆಯ ಬಾಗಿಸಿ
ರವದಿ ಕೈಯ ಮುಗಿದಿವೆ.

ಮಣ್ಣೊಕ್ಕಲ ಮನೆತುಂಬ ಹೈನುಕ್ಕು;
ದನ, ಕರ, ಕುರಿ, ಮರಿ, ನಾಯಿ,
ನವಿಲು, ಪಾರಿವಾಳ, ಗಿಳಿ, ಬೆಕ್ಕು;
ಕಾರಹುಣ್ಣಿವೆಯ ಹೊನ್ನುಗ್ಗಿ ಖಿಚಡಿ
ಆಮೋದದ ಕರ್ಮಫಲ ಸವಿಯುತ
ಹಾಡು ಕಟ್ಟುವರು ಹೋರಿಯ ಮೇಲೆ;
ಹೃದಯದೆವೆ ಕಿವಿ ತೆರೆದೊಮ್ಮೆ ಕೇಳು :
ಮುತ್ತಿನಂತ ಒಂದು ಹೋರಿ ಕಟ್ಟಿ,
ಹೋರಿ ಕಾಲಾಗ ಗೆಜ್ಜಿ ಕಟ್ಟಿ,
ಕೊಂಬಿಗಣಸ, ಮೈಗೆ ಬಣ್ಣ,
ಇಣಿ ಕುಣಿವ ಬೆನ್ನಿಗೆ
ಬಣ್ಣ ಬಣ್ಣದ ಜೂಲ ಹಾಕಿ,
ತಾಳಕೆ ತಕ್ಕ ನಡಗಿ ಕಲಿಸಿ,
ಪೌಳ್ಯಾಗ ಮೆರಸದ್ರ ಏನ್ಚಂದ !
ನೋಡವ್ರ ಕಣ್ಣಿಗೆ ಆನಂದ.



ಎಳ್ಳಮಾಸಿಗೆ ದೀಪದ ಬುಟ್ಟಿ ,
ದೀಪದ ಬೆಳಕು ಸ್ವರ್ಗಕೆ ಮುಟ್ಟಿ ,
ಮರ-ಬಳ್ಳಿ-ಬೆಳೆಯ ಜರಡಿಯಲ್ಲಿಳಿದು
ಹುಲ್ಲೆಲೆ ತೊಟ್ಟಿಲಲಿ ಆಲೆಯಾಡಿ,
ಫಲಭರಿತ ಮಣ್ಣು ಶಯನದ ಮೇಲೆ
ಸ್ವರ್ಗವಿಳಿಯುವುದು ಹೊಲದಲ್ಲಿ.

ಎಡ-ಬಲದ ಸೀಮೆ ಸೀಮೆಯಲಿ
ಚೆಂಡಿಯಾಡುವ ಚದುರ-ಚೆದುರೇರು
ತುಂಬುವರುಡಿಯಲಿ ಕೊಯ್ದತೆನಿ;
ಶ್ರಮಹಿಂಗಲ್ಹಾಡುವರು ಲಾವಣಿ.

ದೈವದ ಕೈ ಬದಲಾಗಿ ಅನಾವೃಷ್ಟಿ :
ಮೇವಿಲ್ಲದೆ ನಿಂತಿವೆ ಜೋತು ದವಣಿಗೆ
ಎತ್ತು, ಆಕಳು, ಎಮ್ಮೆ, ಕರ, ಕುರಿ, ಮರಿ.
ಮಾರಿದರೆ ಕರಳು ಹಿಂಡುವ ಕೊರಗು;
ಬದುಕಬೇಕೆಂದರೆ ಮಾರಲೇಬೇಕಾದ
ಮರುಗು.

ಬೆಳೆದ ಬೆಳೆಗೆ ಬೆಲೆಯಿಲ್ಲ;
ದಲ್ಲಾಳಿಯ ಕಲ್ಲುಮನ ಕರಗುವುದಿಲ್ಲ;
ಮುಜರೆ ತಪ್ಪುವುದಿಲ್ಲ.
ತಲೆಯಲ್ಲಿ ಸಾಲಶೂಲದ ಚಿಂತೆ,
ಬಿದ್ದಿವೆ ಮುಂದೆ ಹತವಾಗಿ
ಮುಂದಿನ ದಿನಮಾನಗಳ ಕಂತೆ.

ಬಾಳಂಬು ನಂಬಿ ನಡೆಯಲು
ಮೂಡುತ್ತಿಲ್ಲ ಕರೆದು ನಡೆಸುವ
ಭರವಸೆಯ ಕೊರಳು;
ಮುಂಗುರುಹಾಗಿ ಕಾಣುತಿದೆ
ಆತ್ಮಹತ್ಯೆಗೆ ಹಗ್ಗದುರುಳು.

**ಸೋಮನಾಥ ಗೀತೆಯೋಗಿ**
ಮುಖ್ಯಪೋಸ್ಟ್ : ಸಾಲೋಟಗಿ, ತಾಲೂಕು ಇಂಡಿ, ವಿಜಯಪುರ ಜಿಲ್ಲೆ

ಇಲ್ಲದ ಮತ್ತು ಸಾಧ್ಯವಾಗದ ಮಣ್ಣುಮುದ್ದೆ ಎಂದು ಭಾವಿಸುವುದು ಶಕ್ಯವೆ ? ಇದಕ್ಕೆ ಸಂಬಂಧಿಸಿದಂತೆ ಸತ್ತ್ವ, ರಜಸ್ ಮತ್ತು ತಮಸ್ ಎಂಬ ಗುಣಗಳಿಂದ ರೂಪುಗೊಂಡ ಕ್ರಿಯೆಗಳನ್ನು ಆಧರಿಸಿ ಗೀತೆಯ ಪ್ರತಿಪಾದನೆ ನಡೆದಿದೆಯೆಂಬುದನ್ನು ನೆನಪಿನಲ್ಲಿಡಬೇಕು. ಅಂದರೆ, ಒಬ್ಬನೇ ವ್ಯಕ್ತಿಯು ವಿವಿಧ ಸಂದರ್ಭಗಳಲ್ಲಿ ಕ್ರಿಯೆಯಲ್ಲಿ ನಿರತನಾಗುವಾಗ ಮೂರು ಗುಣಗಳಲ್ಲಿ ಯಾವುದಾದರೊಂದು ಆ ಕ್ರಿಯೆಗೆ ಮೂಲವಾಗಿರ ಬಹುದು, ಎಂದರ್ಥ.

ಎಷ್ಟೇ ಆದರೂ ಗುಣಗಳು ಮೂಲತಃ ಪ್ರಕೃತಿಯವು, ಪುರುಷನದಲ್ಲ. ಪುರುಷನು ಅವುಗಳಿಂದ ಆವೃತನಾಗಿರಲು ಸಾಧ್ಯ. ದೇಹ, ಇಂದ್ರಿಯಗಳು, ಪದಾರ್ಥಗಳು, ಉದ್ಭವವಾಗುವುದು ಗುಣಗಳಿಂದ. ಜಗತ್ತಿನ ವ್ಯವಹಾರಗಳಿಗೆ ಇದೇ ಮೂಲ. ಆದರೆ ಗುಣಗಳನ್ನು ಮೀರಿದ ಪರಮತತ್ತ್ವ, ಗುಣಗಳಿಂದ ಲೇಪಿತವಾಗಿರದ ತತ್ತ್ವ, ಒಂದಿದೆ. ಅದು ಕ್ಷೇತ್ರಜ್ಞ, ಬ್ರಹ್ಮನ್, ಮುಂತಾದ ಹೆಸರುಗಳನ್ನು ಹೊಂದಿದೆ. ಅದು ಗುಣಾತೀತ. ಅದರ ತಿಳಿವು ಬರಬೇಕಾದರೆ ಗುಣಗಳನ್ನು, ಅಂದರೆ ಅವುಗಳಿಂದ ಉದ್ಭವ ವಾಗಿರುವ ಇಂದ್ರಿಯ, ಶರೀರ, ಮುಂತಾದುವನ್ನು ಮೀರುವಂತಹ ವಿವೇಕವನ್ನು ಪಡೆಯಬೇಕು. ಅದೇ ಅಮೃತತ್ವ, ಅದೇ ಭಗವಾನನಲ್ಲಿ ಸೇರ್ಪಡೆ (೧೪.೨೦ : ಗುಣಾನ್ ಏತಾನ್ ಅತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್ । ಜನ್ಮಮೃತ್ಯುಜರಾದುಃಖೈಃ ವಿಮುಕ್ತಃ ಅಮೃತಮಶ್ನುತೇ ॥). ಅಂತಹ ವಿವೇಕವು ಜೀವಿತಕಾಲದಲ್ಲಿಯೇ ಲಭ್ಯವಾಗಬಲ್ಲದು.

ಭಗವಾನನ ಈ ಮಾತನ್ನು ಕೇಳಿ ಅರ್ಜುನನಂತೆ ನಾವೂ ಚಕಿತರಾಗಬಹುದು. ಹಾಗೆ ವಿವೇಕ ಪಡೆದಿರುವವರಲ್ಲಿ ಕಾಣಬರುವ ಲಕ್ಷಣಗಳಾದರೂ ಯಾವುವು ? ಅದಕ್ಕಿಂತಲೂ ಹೆಚ್ಚಾಗಿ, ಈ ಮೂರು ಗುಣಗಳನ್ನು ಮೀರುವುದು ಹೇಗೆ ? (೧೪.೨೧). ಈ ಪ್ರಶ್ನೆಯು ಗೀತೆಯ ಕರ್ತೃವಿಗೆ ಸ್ಥಿತಪ್ರಜ್ಞನ ಲಕ್ಷಣಗಳನ್ನು ಇನ್ನೊಮ್ಮೆ, ಆದರೆ ಸ್ವಲ್ಪ ಭಿನ್ನವಾಗಿ, ಪ್ರತಿಪಾದಿಸಲು ಅವಕಾಶ ಕಲ್ಪಿಸಿಕೊಟ್ಟಿದೆ. ಗೀತೆಯಲ್ಲಿ ವರ್ಣಧರ್ಮ (ಅಥವಾ ಆಯಾ ವರ್ಣದವರ ಸ್ವ-ಧರ್ಮ) ಮತ್ತು ಸ್ಥಿತಪ್ರಜ್ಞತ್ವ, ಇವೆರಡೂ ಒಂದರ್ಥದಲ್ಲಿ ಮೂಲತತ್ತ್ವಗಳಾಗಿ ತೋರಿಬರುತ್ತವೆ. ಆದರೆ ಪರಮ ವಿವೇಕ ಪಡೆದ ಸ್ಥಿತಪ್ರಜ್ಞ ಸಹ ವರ್ಣಧರ್ಮವನ್ನು ಮೀರುವುದಿಲ್ಲ. ಅದನ್ನು 'ಲೋಕ ಸಂಗ್ರಹ'ದ ಹೆಸರಿನಲ್ಲಿ ಗೀತೆಯು ಸಮರ್ಥಿಸುತ್ತದೆ ಎಂಬುದನ್ನು ಈಗಾಗಲೆ ನಾವು ನೋಡಿದ್ದೇವೆ. ಪ್ರಸ್ತುತ ೧೪ನೆಯ ಅಧ್ಯಾಯದಲ್ಲಿ ಚಿತ್ರಿತನಾಗಿರುವ 'ವಿವೇಕಿ'ಯು ಮೂರು ಗುಣಗಳನ್ನು ಅನಾದರದಿಂದ ಕಾಣುವುದಿಲ್ಲ; ಆದರೆ ಅವಿಲ್ಲದಾಗ, ಅವುಗಳಿಂದ ಆಕರ್ಷಿತನಾಗಿ, ಅವಕ್ಕಾಗಿ ಹಂಬಲಿಸುವುದೂ ಇಲ್ಲ (೧೪.೨೨ : ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ । ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥). ಇದು ವ್ಯಕ್ತಿಗತವಾದ ಲಕ್ಷಣ, ಸ್ವಾನುಭವದ ಪರಿಣಾಮ; ಪ್ರತಿಯೊಬ್ಬರೂ ತಮ್ಮ ತಮ್ಮ ನೆಲೆಯಲ್ಲಿ ಅದನ್ನು ಸಿದ್ಧಿಸಿಕೊಳ್ಳಬೇಕು. ಭಗವಾನನು ಅಧರ್ಮದಿಂದ




ಗ್ಲಾನಿಯು ಹೆಚ್ಚಿದಾಗ ಅವತರಿಸಿ ಬರುತ್ತಾನೆ, ಧರ್ಮ ಸಂಸ್ಥಾಪನೆ ಮಾಡುತ್ತಾನೆ (ಮತ್ತು ಭಗವಾನನೇ ನಿರ್ಮಿಸಿದ ಧರ್ಮವು ಮತ್ತೆ ಕ್ಷೀಣಿಸುತ್ತದೆ, ಅಧರ್ಮ ವಾಗಿ ಪರಿವರ್ತನೆ ಹೊಂದುತ್ತದೆ); ಆದರೆ ವಿವೇಕ ಪಡೆಯಬೇಕಾದ್ದು ಮಾತ್ರ ವೈಯ್ಯಕ್ತಿಕ ನೆಲೆಯಲ್ಲಿಯೇ.

ಇದನ್ನು ಸಮಕಾಲೀನ ಸಂಗತಿಗಳಿಗೆ ಅನ್ವಯಿಸಿ ಹೇಳಬಹುದೆ ? ಬಹುಶಃ ಸಾಧ್ಯ. ಸಮಷ್ಟಿಯ ನೆಲೆಯಲ್ಲಿ ಕ್ರಾಂತಿಯು ನೂತನ ಸಾಮಾಜಿಕ ಸಂಬಂಧಗಳನ್ನು ಸೃಷ್ಟಿಸುತ್ತದೆ. ಸಹಬಾಳ್ವೆ, ಸಮಾನತೆ, ಸಮಾನಾವಕಾಶ, ಇತ್ಯಾದಿಗಳು ಕ್ರಾಂತಿಯ ಫಲ. ಅಲ್ಲಿಯೂ ಮತ್ತೆ ಗ್ಲಾನಿಯು ಮರುಕಳಿಸಲು ಸಾಧ್ಯ; ಏಕೆಂದರೆ, ವೈಯ್ಯಕ್ತಿಕ ನೆಲೆಯಲ್ಲಿ 'ವಿವೇಕ'ವು ಸ್ಥಿರವಾಗಿ ಅಂಕುರಿಸಿಲ್ಲ. ವಿವೇಕದ ಹಾನಿಯಾದರೆ ಗ್ಲಾನಿಯು ಶತಸ್ಸಿದ್ಧ ಮತ್ತು ವಿವೇಕವನ್ನು ಪ್ರತಿಹಂತದಲ್ಲೂ, ಪ್ರತಿಯೊಬ್ಬರೂ, ವ್ಯಕ್ತಿಗತ ನೆಲೆಯಲ್ಲಿ ನಿತ್ಯನೂತನವಾಗಿ ಪಡೆಯುತ್ತಿರಬೇಕು. ಭಗವಂತನು ಅವತರಿಸಿ ನೆಲೆ ಗೊಳಿಸಿದ ಧರ್ಮವು ನಶಿಸಿಹೋಗುವುದಾದರೆ ಯಃಕಶ್ಚಿತ್ ಮಾನವರು ನಡೆಸಿದ ಕ್ರಾಂತಿಯು ಚಿರವಾಗಿ ಉಳಿಯದಿದ್ದರೆ ಏನಾಶ್ಚರ್ಯ ? ಅಂದರೆ, ಸಮುದಾಯದ ಪ್ರಜ್ಞೆಗೆ ವೈಯ್ಯಕ್ತಿಕ ಪ್ರಜ್ಞೆಯು ಅಡಿಪಾಯ. ಈ ಅಡಿಪಾಯವು ಸದಾ ನವೀಕರಣ ಗೊಳ್ಳುತ್ತಲೇ ಇರಬೇಕು.

ಗುಣಗಳಿಂದ ಬಾಧಿತನಲ್ಲದ ವಿವೇಕಿಯ ಲಕ್ಷಣ ಗಳತ್ತ ಮತ್ತೆ ಹೊರಳೋಣ : ಗುಣಗಳಿವೆ ಎಂಬುದು ಅವನಿ(ಳಿ)ಗೆ ಗೊತ್ತು, ಆದರೆ ಅವುಗಳಿಂದ ವಿಚಲಿತ ನಾ(ಳಾ)ಗದೆ ಉಳಿಯುವುದು ವಿಶೇಷ (೧೪.೨೩ : ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ। ಗುಣಾ ವರ್ತಂತ ಇತ್ಯೇವಂ ಯೋಽವತಿಷ್ಠತಿ ನೇಂಗತೇ ॥). ಗುಣಗಳಿಂದ ಬಾಧಿತರಾಗದಿರುವುದು ಅವರ ಮೂಲ ಲಕ್ಷಣ; ಅದು ಅವರ "ಸ್ವರೂಪಾವಸ್ಥೆ" ಎಂಬುದು ಶಂಕರರ ವ್ಯಾಖ್ಯಾನ. ವಿವೇಕಿಗೆ ಸುಖವೂ ಒಂದೇ ದುಃಖವೂ ಒಂದೇ, ಮಣ್ಣೂ ಒಂದೇ ಚಿನ್ನವೂ ಒಂದೇ, ಪ್ರಿಯವಾದ್ದು – ಅಪ್ರಿಯವಾದ್ದು ಒಂದೇ, ನಿಂದೆಯೂ ಒಂದೇ ಸ್ತುತಿಯೂ ಒಂದೇ (೧೪.೨೪ : ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ । ತುಲ್ಯಪ್ರಿಯಾಪ್ರಿಯೋ ಧೀರಃ ತುಲ್ಯನಿಂದಾತ್ಮ ಸಂಸ್ತುತಿಃ ॥). ಗುಣಾತೀತನಿಗೆ ಮಾನ–ಅಪಮಾನ, ಮಿತ್ರ–ಶತ್ರು, ಎಲ್ಲಾ ಒಂದೇ (೧೪.೨೫). ಅಂಥವರಿಗೂ ಶತ್ರುಗಳಿರುತ್ತಾರೆಯೆ ? ಎಲ್ಲವನ್ನೂ ತ್ಯಾಗ ಮಾಡಿದ ವನಿಗೂ ಶತ್ರುಗಳಿರುತ್ತಾರೆಂದರೆ ಏನು ಹೇಳುವುದು ! ಅವನು ಸ್ವತಃ 'ಬ್ರಹ್ಮನ್' ಆಗಿಬಿಟ್ಟಿರುತ್ತಾನೆ (೨೬) ಮತ್ತು ಸ್ವತಃ ಭಗವಾನನೇ ಆ ಬ್ರಹ್ಮನ್. ಅದು ಶಾಶ್ವತ ಮತ್ತು ನಾಶರಹಿತ; ಅದೇ ಧರ್ಮ ಮತ್ತು ಏಕಾಂತಿಕ ಸತ್ಯ. ಅಷ್ಟು ನಿರಪೇಕ್ಷವಾದ್ದು ಅದು (೨೭ : ಬ್ರಹ್ಮಣೋ ಹಿ ಪ್ರತಿಷ್ಠಾಹಂ ಅಮೃತಸ್ಯ ಅವ್ಯಯಸ್ಯ ಚ । ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯ ಏಕಾಂತಿಕಸ್ಯ ಚ ॥). ತನ್ನ ಅಪಾರ ಮಹಿಮೆಯನ್ನು ಮುಂಚೆಯೇ ವಿವರಿಸಿದ್ದ ಭಗವಾನನು ಈ ಅಧ್ಯಾಯದಲ್ಲಿ ತಾನೇ ಪರಬ್ರಹ್ಮನ್ ಎಂದು ಹೇಳಿ ಕೊಂಡಿದ್ದಾನೆ. ನಿರ್ಗುಣ, ನಿರವಯವ, ನಿರಾಕಾರ ಎನ್ನಲಾದ 'ಬ್ರಹ್ಮನ್' ಇಲ್ಲಿ ಭಗವಾನನ ರೂಪ ಧರಿಸಿದೆ, ಆ ಭಗವಾನನಿಗೆ ಯುದ್ಧದಲ್ಲಿ ಶತ್ರುಗಳನ್ನು ಸದೆಬಡಿಸುವ ಕೆಲಸವಿದೆ ! ಅದನ್ನು ಶಂಕರ ಸಂಗ್ರಹಿಸಿ ಹೇಳುವುದು ಹೀಗೆ : ಯಯಾ ಚ ಈಶ್ವರಶಕ್ತ್ಯಾ ಭಕ್ತಾನುಗ್ರಹಾದಿ ಪ್ರಯೋಜನಾಯ ಬ್ರಹ್ಮ ಪ್ರತಿಷ್ಠತೇ ಪ್ರವರ್ತತೇ ಸಾ ಶಕ್ತಿಃ ಬ್ರಹ್ಮ ಏವ ಅಹಂ ಶಕ್ತಿಶಕ್ತಿಮತೋಃ ಅನನ್ಯತ್ವಾತ್ ಇತಿ ಅಭಿಪ್ರಾಯಃ ॥ ಒಟ್ಟಿನಲ್ಲಿ ನೇರವಾಗಿ ಗೀತೆಯನ್ನು ಓದಿ ತಿಳಿಯುವುದೇ ಬೇರೆ, ಉದ್ದುದ್ದ ಪ್ರವಚನಗಳಲ್ಲಿ ಗೀತೆಯ ಅತಿಪ್ರಶಂಸೆಯನ್ನು ಕೇಳುತ್ತಿರುವುದೇ ಬೇರೆ. ಜಗತ್ತಿಗೆ ಅಂಟಿಕೊಳ್ಳುವುದು ಗುಣಗಳಿಂದಾಗಿ ಎಂದ ಭಗವಾನ್, ತಾನು ನಿರ್ಗುಣಿ ಬ್ರಹ್ಮನ್ ಆದರೂ ಸದ್ಯಕ್ಕೆ ಜಗತ್ತಿಗೆ ಅಂಟಿಕೊಂಡಿದ್ದಾನೆ : ಸಾಧುಗಳನ್ನು ರಕ್ಷಿಸಿ ದುಷ್ಕರ್ಮಿಗಳನ್ನು ನಾಶ ಮಾಡಲು. ಈಗದನ್ನು ಮಾಡಿ ಹೋಗುತ್ತಾನೆ, ಮುಂದಿನ ಕ್ಷಣದಲ್ಲಿ ಜಗತ್ತು ಮತ್ತೆ ಪೂರ್ವಸ್ಥಿತಿಗೆ ಬಂದಿರುತ್ತದೆ ! ಅವತಾರ ಪುರುಷನೇ ಬಂದರೂ ಜಗತ್ತು ತನ್ನದೇ ನಿಯಮದಿಂದ ಮುಂದಕ್ಕೆ ಸಾಗುತ್ತಿರುತ್ತದೆ – ಹಾಗಿದ್ದರೆ ಅವನೇಕೆ ಬೇಕು?

ಮುಂದಿನ, ಅಂದರೆ ೧೫ನೆಯ, ಅಧ್ಯಾಯವು ಸ್ವತಃ 'ಬ್ರಹ್ಮನ್' ಆದ ಭಗವಾನನ ವ್ಯಾಪ್ತಿಯನ್ನು ಇನ್ನಷ್ಟು ವಿಸ್ತರಿಸಿ ಹೇಳುತ್ತದೆ. ಗೀತೆಯ ಭಗವಾನನು ಒಬ್ಬ ಮಾನವ; ಅವನು ಹೇಗೆ ತಾನೆ ನಿರ್ಗುಣ ಬ್ರಹ್ಮನ್ ಆಗಿರಲು ಸಾಧ್ಯ ? ಇಂತಹ ಸಂದೇಹಕ್ಕೆ ತಾರ್ಕಿಕ ವಿಶ್ಲೇಷಣೆಯನ್ನೇನೂ ನೀಡದೆ ಪುನರಪಿ ತನ್ನ ಸರ್ವಾಂತರ್ಯಾಮಿತ್ವವನ್ನು ಭಗವಾನನು ಘೋಷಿಸಿ ಕೊಳ್ಳುತ್ತಾನೆ. ಅದಕ್ಕೆ ಒಂದು ರೂಪಕವನ್ನು ಬಳಸಿದ್ದಾನೆ: ತಾನೊಂದು ಅನನ್ಯ ಅರಳಿ ಮರವಿದ್ದಂತೆ ಎನ್ನುತ್ತಾನವನು; ಅದಾದರೋ, ತನ್ನ ಬೇರುಗಳನ್ನು ಮೇಲ್ಭಾಗದಲ್ಲಿ ಮತ್ತು ರೆಂಬೆಗಳನ್ನು ಕೆಳಭಾಗದಲ್ಲಿ ಹೊಂದಿದೆ. ಆ ಮರದ ಎಲೆಗಳೆಂದರೆ ವೇದಗಳು. ಅಂಥವನ್ನು ತಿಳಿದರೆ ಎಲ್ಲವನ್ನೂ ತಿಳಿದಂತೆಯೇ ಸರಿ (೧೫.೧ : ಊರ್ಧ್ವಮೂಲಂ ಅಧಃಶಾಖಂ ಅಶ್ವತ್ಥಂ ಪ್ರಾಹುರವ್ಯಯಂ । ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥). ಇದನ್ನು ತಿಳಿಯಲು

ಮೊದಲಿಗೆ ವ್ಯಕ್ತಿಯು ಜಗತ್ತಿನ ಬಗ್ಗೆ ಸಂಪೂರ್ಣ ನಿರಾಸಕ್ತಿ ಬೆಳೆಸಿಕೊಂಡಿರಬೇಕಂತೆ. ಅರಳಿ ಮರವೇ ವಿಶ್ವದ ಒಂದು ರೂಪಕ. ಭಗವಾನನ ಮಧ್ಯಪ್ರವೇಶ ದಿಂದಾಗಿ ಪ್ರಕೃತಿ–ಪುರುಷ ಸಂಯೋಗದಿಂದ ಜಗತ್ತು ಅಸ್ತಿತ್ವಕ್ಕೆ ಬಂದಿದೆ. ಹಾಗೆ ಹೇಳುವುದು ಸಾಂಖ್ಯ ದರ್ಶನವನ್ನು ಬುಡಮೇಲು ಮಾಡಿದಂತೆಯೇ ಸರಿ. ಬ್ರಹ್ಮನ್ ಎಂಬುದು ಸರ್ವಾಧಿಕ್ಯ ಹೊಂದಿರುವ ವಸ್ತು ವಾದ್ದರಿಂದ ಅದು ಬುಡವಾದರೂ ಮೇಲ್ಭಾಗದಲ್ಲಿದೆ; ಅದು ಎಲ್ಲಕ್ಕೂ ಬೇರು (ಮೂಲ), ಆದರೆ ಅದು ಎತ್ತರಕ್ಕೆ ಮೇಲಿದೆ (ಊರ್ಧ್ವ). ಮೇಲಿರುವುದರಿಂದ, ತಾನು ಬೇರಾದರೂ ಜಗತ್ತನ್ನು ಸ್ಪರ್ಶಿಸಿಕೊಳ್ಳದೆ ಉಳಿಯಬಲ್ಲದು. ಅದೇ ಬಹುಶಃ ಶಂಕರನ ಅದ್ವೈತ ಸಿದ್ಧಾಂತದ "ಮಾಯೆ." ಬ್ರಹ್ಮಾದಿ ದೇವತೆಗಳು ಮರದ ರೆಂಬೆಗಳಾಗಿ ಹರಡಿಕೊಂಡಿದ್ದಾರೆಂದು ಬೇಕಾದರೆ ಕಲ್ಪಿಸಿ ಕೊಳ್ಳಬಹುದು. ಅರಳಿಗೆ ಸಂಸ್ಕೃತ ಪದ "ಅಶ್ವತ್ಥ." ಅದರ ವ್ಯುತ್ಪತ್ತಿ (ಅಂದರೆ, ಹೇಗೆ ಪದ ರೂಪಿತವಾಗಿದೆ ಎಂಬುದು) ಸ್ವಾರಸ್ಯಕರ. ಶಂಕರನು ಅದನ್ನು ಹೇಳಿರು ವುದು ಹೀಗೆ : "ನ ಶ್ವಃ ಅಪಿ ಸ್ಥಾತಾ ಇತಿ ಅಶ್ವತ್ಥಃ" – ಅರ್ಥಾತ್, ನಾಳೆಗೆ ಸಹ ಉಳಿಯದಂಥದು. ಜಗತ್ತು ನಾಶವಾಗುತ್ತದೆ, ಆದರೆ ಅದರ ಬೇರು ನಾಶವಾಗದು; ಆದ್ದರಿಂದಲೇ ಅದು ಮೇಲಕ್ಕೆ ಚಾಚಿಕೊಂಡಿದೆ. ರೂಪಕದ ಮೂಲಕ ತಿಳಿಸುವುದು ಇಷ್ಟೇ : ಜಗತ್ತು ಅನಿತ್ಯ, ಅದು ನಷ್ಟವಾಗಿಹೋಗುತ್ತದೆ; ಆದರೆ ಅದು ಯಾವುದರಿಂದ ಉಂಟಾಗಿದೆಯೋ ಆ 'ಬ್ರಹ್ಮನ್' ಎಂಬುದು ನಿತ್ಯ, ಅದಕ್ಕೆಂದಿಗೂ ನಾಶವಿಲ್ಲ. ಕ್ಷಣಕಾಲ ಇದ್ದು ನಷ್ಟವಾಗಿಹೋಗುವ (ಕ್ಷಣಪ್ರಧ್ವಂಸಿನಂ) ಜಗತ್ತು ಅಥವಾ 'ಸಂಸಾರ'ವನ್ನು ಸಲಹಲು ವೇದಗಳೆಂಬ ಎಲೆಗಳಿವೆ. ಆ ಎಲೆಗಳು ಧರ್ಮಾಧರ್ಮಗಳ ರಕ್ಷಣೆ ಮಾಡುತ್ತವಂತೆ (ಶಂಕರ : ಧರ್ಮಾಧರ್ಮ ತತ್ ಹೇತುಫಲ ಪ್ರಕಾಶನಾರ್ಥತ್ವಾತ್). ಹೀಗೆ ನಷ್ಟವಾಗಿ ಹೋಗುವ ಜಗತ್ತಿನಲ್ಲಿ ವರ್ಣ ವಿಭಜನೆ ಇದೆ, ವಿವಿಧ ಶ್ರೇಣಿಗಳವರಿಗೆ ತಮ್ಮದೇ ನಿಗದಿತ ಶ್ರೇಷ್ಠ ಮತ್ತು ಕನಿಷ್ಠ ಕರ್ತವ್ಯಗಳಿವೆ, ಸಂಘರ್ಷಗಳಿವೆ, ಏರುಪೇರಾದಾಗ ಎಲ್ಲವನ್ನೂ ರಿಪೇರಿ ಮಾಡಲು ಭಗವಾನನ ಅವತಾರ ಇದೆ, ಅವನು ತೆರಳಿದ ನಂತರ ಮತ್ತೆ ಯಥಾಪ್ರಕಾರ ಗೋಜಲುಗೋಜಲಾಗುವ ಸಮಾಜವಿದೆ. ಭಗವಾನನ ಸ್ಮರಣೆ ಮಾಡುತ್ತಾ ಭಕ್ತಿಯಿಂದ ಅದನ್ನೆಲ್ಲಾ ಅದಿರುವಂತೆಯೇ ಸವಿಯಬೇಕು ಮತ್ತು ಸಹಿಸಬೇಕು, ಅದಕ್ಕಾಗಿ ಸ್ಥಿತಪ್ರಜ್ಞತ್ವ ಬೆಳೆಸಿಕೊಂಡರೆ ಮುಕ್ತಿಯೂ ದೊರಕುತ್ತದೆ, ಎಂಬುದು ಸಂಕ್ಷಿಪ್ತ ಗೀತಾರ್ಥ ಎನ್ನೋಣವೆ?

ಇಡೀ ಅರಳಿ ಮರವು ಜಗತ್ತಿಗೆ ರೂಪಕವಾದರೆ ಅದರ ಅಂಗಾಂಗಗಳನ್ನು ಗುರುತಿಸಬೇಕಲ್ಲವೆ ? ಮರಕ್ಕೆ ಶಕ್ತಿ ತುಂಬುವುದು ಗುಣಗಳ ಕೆಲಸ, ಇಂದ್ರಿಯಗ್ರಾಹ್ಯ ವಾದ ವಸ್ತುಗಳು ಮರದ ಚಿಗುರೆಲೆಗಳು. ಮರದ ಕೆಲವು ಬೇರುಗಳು ಕೆಳಕ್ಕೂ ಹಬ್ಬಿವೆ; ಅವು ಮಾನವನ ಕ್ರಿಯೆಗಳಿಗೆ ಸಂವಾದಿಯಾದುವು. ಕೆಳಕ್ಕೆ ಹಬ್ಬಿರು ವುದರಿಂದ ಅವು ಅಷ್ಟು ಶ್ರೇಷ್ಠವಲ್ಲ; ಮೇಲಕ್ಕೆ ಬೆಳೆದಿರುವುದು 'ಬ್ರಹ್ಮನ್' ಕಡೆಗೆ ಸಾಗುವುದರಿಂದ ಅವುಗಳೊಡನೆ ಸಂಪರ್ಕವು ಶ್ರೇಷ್ಠ (೧೫.೨). ನಿಜವಾದ ಗುರಿಯು ಅಶ್ವತ್ಥ ವೃಕ್ಷವನ್ನು ದಾಟಿಹೋಗುವುದು, ಆದ್ದರಿಂದ ಆ ಮರವನ್ನು ಕಡಿದುಹಾಕಬೇಕು; ಹೇಗೂ ಮರವು ಅನಿತ್ಯ. ಆದ್ದರಿಂದ ಅದನ್ನು ಮೀರಿ ಬ್ರಹ್ಮನ್‌ನತ್ತ ಬೆಳೆಯಬೇಕು. ಮರವನ್ನು ಕಡಿಯುವುದೆಂದರೆ ಜಗತ್ತಿನೊಡನೆ ನೆಂಟಸ್ತನ ಕಡಿದುಕೊಳ್ಳುವುದು ಅಥವಾ ಸಂಗವನ್ನು ತುಂಡರಿಸುವುದು (೩ : ... ಅಶ್ವತ್ಥಮೇನಂ ಸುವಿರೂಢಮೂಲಂ ಅಸಂಗ ಶಸ್ತ್ರೇಣ ದೃಢೇನ ಛಿತ್ವಾ). ಸಂಗವನ್ನು ಬಿಡುವುದು ಸುಲಭವಲ್ಲ, ಏಕೆಂದರೆ ಅದು ಬಹಳ ದೃಢವಾದ ಸಂಬಂಧ. ಜಗತ್ತಿಗೆ ವಿಮುಖ ವಾಗುವುದು ಒಂದು ದೊಡ್ಡ ಸವಾಲು. ಆ ಸವಾಲಿನಲ್ಲಿ ಗೆದ್ದರೆ ಪರಮಪದದ ಪ್ರಾಪ್ತಿಯು ನಿಶ್ಚಿತ. ಅಲ್ಲಿಗೆ ತಲುಪಿದರೆ ಮತ್ತೆ ಹಿಂದಕ್ಕೆ ಬರುವ ಪ್ರಶ್ನೆಯೇ ಇಲ್ಲ (೪ : ... ಯಸ್ಮಿನ್ ಗತಾ ನ ನಿವರ್ತಂತಿ ಭೂಯಃ). ಈಗಾಗಲೇ ನಾವು ಗಮನಿಸಿರುವಂತೆ ಇದೊಂದು ವಿಚಿತ್ರ ಅಭಿಲಾಷೆ : ಜಗತ್ತನ್ನು ಉತ್ತಮಗೊಳಿಸಲು ಭಗವಂತನಿಂದಲೂ ಸಾಧ್ಯವಾಗಿಲ್ಲ, ಆದ್ದರಿಂದ ಜಗತ್ತಿನಿಂದ ಪರಾರಿಯಾಗೋಣ; ಮತ್ತೆ ಈ ಕಡೆ ತಲೆ ಹಾಕುವುದು ಬೇಡ ! ಅದೇನೋ ಸರಿ, ಅದೆಲ್ಲಿಗೋ ಶೂನ್ಯಕ್ಕೆ ಹೋಗಿ ಮಾಡುವುದೇನು ? "ಸದಾಕಾಲಕ್ಕೂ ಇಲ್ಲವಾಗುವುದು." ಇಂತಹ ವ್ಯಾಮೋಹವು ಜಗತ್ತನ್ನು ಎದುರಿಸಲಾಗದೆ ಸೋಲನ್ನು ಒಪ್ಪಿಕೊಂಡಂತಾಗುವು ದಿಲ್ಲವೆ? ಇದಕ್ಕಿಂತಲೂ ಪುನರ್ಜನ್ಮವನ್ನು ಬಯಸುವುದೇ ಲೇಸು. ಆದರೆ ಮತ್ತೆ ಮತ್ತೆ ನಾವೇ ಹಿಂದಿರುಗುತ್ತಿದ್ದರೆ ಬೇರೆಯವರಿಗೆ ಅವಕಾಶ ಇಲ್ಲದೆ ಹೋಗುತ್ತದೆಯಾದ್ದರಿಂದ ಪುನರ್ಜನ್ಮದ ಯೋಚನೆಯೂ ಬೇಡ. ಆತ್ಮವಿದ್ದರೆ ತಾನೆ ಪುನರ್ಜನ್ಮ ! ದೇಹಾತ್ಮವಾದಿ ಗಳು ಈ ಜಂಜಾಟದಿಂದ ಮುಕ್ತರಾಗಿ ಜಗತ್ತನ್ನು ಚೆನ್ನಾಗಿ ಸರಿಪಡಿಸಿಕೊಂಡು ಸುಖಿಸೋಣವೆಂದು ತೀರ್ಮಾನಿ ಸಿದಂತೆ ಕಾಣುತ್ತದೆ. ಪ್ರಗತಿಪರ ಚಿಂತನೆಯು ಜೀವಪರ ಎನ್ನುವುದು ಈ ಅರ್ಥದಲ್ಲಿ. ಎಲ್ಲಿಗೋ ಓಡಿಹೋಗಿಬಿಡಬೇಕು ಮತ್ತು ಮತ್ತೆ ಈ ಕಡೆ ಬರಬಾರದು ಎಂಬುದು ಸೋಲಿನ ಪ್ರತೀಕ. ಅದು ಪ್ರತಿಗಾಮಿತ್ವ ಮತ್ತು ಜೀವವಿರೋಧಿ ಎನಿಸಿಕೊಳ್ಳುತ್ತದೆ.

ಸ್ಥಿತಪ್ರಜ್ಞ, ಅಚಲ ಭಕ್ತ, ನಿರ್ಗುಣಿ, ಇವರೆಲ್ಲಾ ಹೇಗೆ ಪರಮಸುಖಿಗಳೋ ಹಾಗೆ ಅರಳಿ ಮರದಾಚೆಗೆ ಹೋಗಿಬಿಡುವವನು ಸಹ ಪರಮಸುಖಿಯೇ ಎನ್ನುತ್ತದೆ ಗೀತೆ. ಹಾಗೆ ಪಾರಾಗುವವರಿಗೆ ಅಹಂ ಎಂಬ ಮದವಾಗಲಿ, ಮುದವಾಗಲಿ ಇಲ್ಲ; ಸಂಗ ತ್ಯಜಿಸಿದ್ದರಿಂದ ಯಾವ ಆಕಾಂಕ್ಷೆಯೂ ಇಲ್ಲದೆ ಅಧ್ಯಾತ್ಮ ನಿರತರಾಗುತ್ತಾರೆ. ಅವರಿಗೆ ಸುಖ–ದುಃಖ ಇತ್ಯಾದಿ ದ್ವಂದ್ವಗಳೂ ಇಲ್ಲ. ಸಂಪೂರ್ಣವಾಗಿ ಕ್ರಿಯಾರಹಿತರು ಅವರು (೧೫.೫ : ನಿರ್ಮಾನ ಮೋಹಾ ಜಿತಸಂಗ ದೋಷಾ ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ। ದ್ವಂದ್ವೈಃ ವಿಮುಕ್ತಾಃ ಸುಖದುಃಖಸಂಜ್ಞೈಃ ಗಚ್ಛಂತಿ ಅಮೂಢಾಃ ಪದಮವ್ಯಯಂ ತತ್॥). ಇದು ನಿರುಪದ್ರವೀ ಸ್ಥಿತಿ ಎನಿಸುತ್ತದೆಯೋ ಅಥವಾ ನಿರರ್ಥಕ ಸ್ಥಿತಿ ಎನಿಸು ತ್ತದೆಯೋ? ಈಸಬೇಕು ಇದ್ದು ಜೈಸಬೇಕು ಎನ್ನುವುದು ಇದಕ್ಕಿಂತಲೂ ಹೆಚ್ಚು ಅರ್ಥಪೂರ್ಣವೆನಿಸಿದರೆ ತಪ್ಪೇನು? ಲೋಕಾಯತ ಮಾರ್ಗದ ನಿಶ್ಚಲ ನಿಲುವು ಅದು. ಗೀತೆಗೆ ಅದು ಅಪಥ್ಯ. ಹೋಗಲಿ, ಅರಳಿ ಮರವನ್ನು ದಾಟಿ ಹೋಗುತ್ತಾರಲ್ಲಾ, ಅಲ್ಲಿ ಏನಿದೆ ? ಏನೂ ಇಲ್ಲ : ಸೂರ್ಯನಿಲ್ಲ, ಚಂದ್ರನಿಲ್ಲ, ಅಗ್ನಿಯಿಲ್ಲ; ಹೋಗಲಿ ಎಂದರೆ ಅಲ್ಲಿಂದ ಹಿಂದಕ್ಕೆ ಬರುವಂತೆಯೂ ಇಲ್ಲ ! ಅದೊಂದು ಕಣ್ಣಿಗೆ ಕೆಲಸವಿಲ್ಲದ ನಾಡಿಗೆ ಪಯಣ ಎನಿಸಿದರೆ ಆಶ್ಚರ್ಯವಿಲ್ಲ. ಆದರೆ ಭಗವಾನನ ಭವ್ಯಮನೆ ಇರುವುದು ಅಲ್ಲೇ (೬ : ... ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ). ಕೆಲವರು ಅಲ್ಲಿಗೆ ಹೋದರೂ ಸರಿಯೇ, ಇಲ್ಲಿರುವುದು ಮತ್ತು ಅದರ ವ್ಯವಹಾರ ಮುಂದುವರಿಯುತ್ತದೆ ಎಂಬುದು ಸಮಾಧಾನದ ಸಂಗತಿ. ಭಗವಾನನ ಒಂದು ಅಂಶವು ಇಲ್ಲೇ ಜೀವವಾಗಿ ಉಳಿಯುತ್ತದೆ, ಅದಕ್ಕೆ ಇಂದ್ರಿಯಗಳು ಮತ್ತು ಮನಸ್ಸು ಇವೆ. ಅವು ಪ್ರಕೃತಿನಿಷ್ಠವಾಗಿವೆ. ಅವೆಲ್ಲಾ ಇಲ್ಲವಾಗುವುದು ಶರೀರವನ್ನು ತೊರೆದಾಗ ಮಾತ್ರ (೮). ಇಲ್ಲವಾದಲ್ಲಿ ಇಂದ್ರಿಯಗಳ ಚಟುವಟಿಕೆ ಗಳು ಅವಿಶ್ರಾಂತವಾಗಿ ಸಾಗುತ್ತಿರುತ್ತವೆ (೯). ಹಾಗೆ ಸಾಗುತ್ತಿರುವುದನ್ನು ಕಂಡು ಸಂಭ್ರಮಿಸುವ ಜೀವಿಗಳು ಒಂದು ವಿಧವಾದರೆ ಜ್ಞಾನದ ಕಣ್ಣು ತೆರೆದಿರುವವರಿಗೆ ಈ ವ್ಯಾಪಾರ–ವ್ಯವಹಾರಗಳೆಲ್ಲಾ ಗೋಚರಿಸುವುದೇ ಇಲ್ಲ, ಅವರು ಇಲ್ಲಿದ್ದೇ ಮುಕ್ತರಾಗಿಬಿಟ್ಟಿದ್ದಾರೆ (೧೫.೧೦ : ... ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ). ಸಾಮಾನ್ಯ ವ್ಯವಹಾರಗಳಲ್ಲಿ ನಿರತ ರಾಗಿರುವವರು ಮೂಢರು, ಅದರಿಂದ ಮೇಲೇರಿರು ವವರು ಯೋಗಿಗಳು; ತಮ್ಮಲ್ಲಿರುವ ಸುಪ್ತಚೇತನದ ಮಹಾನ್ ಸಾಧ್ಯತೆಗಳ ಅರಿವು ಆ ಯೋಗಿಗಳಿಗೆ ಮಾತ್ರ ಉಂಟು (೧೧). ಕನ್ನಡಕ್ಕೆ ಅನುವಾದಿಸ ದಿದ್ದರೂ ಈ ಅರ್ಥವನ್ನು ಸೂಚಿಸುವ ಶಂಕರನ ಮಾತುಗಳನ್ನು ಸಂಸ್ಕೃತದಿಂದಲೇ ತಿಳಿಯಬಹುದು : ಯತಂತಃ ಅಪಿ ಶಾಸ್ತ್ರಾದಿಪ್ರಮಾಣೈಃ ಅಕೃತಾತ್ಮಾನಃ ಅಸಂಸ್ಕೃತಾತ್ಮಾನಃ ತಪಸಾ ಇಂದ್ರಿಯಜಯೇನ ಚ ದುಶ್ಚರಿತಾತ್ ಅನುಪರತಾ (ದುಶ್ಚರಿತೆಗಳಿಂದ ಹಿಂದೆ ಸರಿದಿಲ್ಲದಿರುವವರು) ಅಶಾಂತದರ್ಪಾತ್ಮಾನಃ ಪ್ರಯತ್ನಂ ಕುರ್ವಂತಃ ಅಪಿ ನ ಏನಂ ಪಶ್ಯಂತಿ ಅಚೇತಸಃ ಅವಿವೇಕಿನಃ !!

'ಬ್ರಹ್ಮನ್' ಅಥವಾ ಭಗವಾನ್ ಅರಳಿಮರದ (ಅಂದರೆ ಜಗತ್ತಿನ) ಬುಡವನ್ನು ಮೇಲಕ್ಕೆ ತಿರುಗಿಸಿದ್ದರೂ, ಮರದಲ್ಲಿನ ಚಲನೆಯು ನಿರಂತರ. ಭಗವಾನನ ಅಂಶಗಳಾದ ಸೂರ್ಯ, ಚಂದ್ರ, ಅಗ್ನಿ, ಎಲ್ಲಾ ಜಗತ್ತನ್ನು ಮುನ್ನಡೆಸುತ್ತಿವೆ : ಸೂರ್ಯ–ಚಂದ್ರರು ಬೆಳಕು ನೀಡುತ್ತಾರೆ; ಪೃಥ್ವಿಯು ಫಸಲು ನೀಡುತ್ತದೆ, ಓಷಧಿ ಸಸ್ಯಗಳನ್ನು ಕರುಣಿಸುತ್ತದೆ. ಜಠರಾಗ್ನಿಯು ಪಚನಕ್ರಿಯೆಗೆ ಸಹಕಾರ ನೀಡುತ್ತದೆ (೧೨–೧೪). ಅಷ್ಟೇ ಏಕೆ, ಭಗವಾನನೇ ಎಲ್ಲರ ಹೃದಯಗಳನ್ನೂ ಆಕ್ರಮಿಸಿ ಅವರ ಸಕಲ ಬೌದ್ಧಿಕ ಕ್ರಿಯೆಗಳಿಗೆ ಇಂಬು ನೀಡುತ್ತಾನೆ : ನೆನಪು, ತಿಳಿವು, ತಿಳಿವಿನ ಅಭಾವ, ಎಲ್ಲಕ್ಕೂ ಅವನೇ ನಿಯಂತ್ರಕ. ವೇದ–ವೇದಾಂತಗಳು ನೀಡುವ ತಿಳಿವೂ ಅದೇ (೧೫).

ಸಾರಾಂಶವಿಷ್ಟೇ : ಎರಡು ವಿಧದ ಪುರುಷರಿದ್ದಾರಂತೆ; ಒಂದು ನಶಿಸಿಹೋಗುವಂಥದು, ಇನ್ನೊಂದು ಅವಿನಾಶಿ. ನಾಶಹೊಂದುವುದೆಂದರೆ ಸಮಸ್ತ ಜಗತ್ತು,

ಅವಿನಾಶಿಯಾದ್ದು 'ಕೂಟಸ್ಥ.' ಕೂಟ ಎಂದರೆ ವಸ್ತುವಿನ ನೈಜತೆಯನ್ನು ಮುಚ್ಚಿಹಾಕಿ ಅದಲ್ಲದಿರುವುದನ್ನು ಅದೆಂದು ತೋರಿಸುವುದು. ಅದನ್ನು ಶಂಕರನ 'ಮಾಯಾ' ಎನ್ನುವುದುಂಟು. ಅದನ್ನು 'ಅವಿದ್ಯೆ' ಎಂದೂ ಕರೆಯಬಹುದು. "ಅತಸ್ಮಿನ್ ತತ್ ಬುದ್ಧಿಃ" ಎಂಬುದು ಶಂಕರನ ವ್ಯಾಖ್ಯಾನ. ಅಲ್ಲದ ಅಥವಾ ಇಲ್ಲದ ಜಗತ್ತು ಜಗತ್ತಿನಂತೆ ತೋರುವುದು "ಕೂಟಸ್ಥ" ಎಂದಾಯಿತು. ಅದು ಸಂಸಾರಬೀಜ, ಅದಕ್ಕೆ ಅಂತ್ಯವಿಲ್ಲ. ಆದ್ದರಿಂದ ಅದು ಅವಿನಾಶಿ. ಇವೆರಡನ್ನೂ ಮೀರಿ ನಿಲ್ಲುವ ಪುರುಷನು ಪರಮಾತ್ಮ ಅಥವಾ ಉತ್ತಮ ಪುರುಷ. ಮೂರು ಲೋಕಗಳ ಧಾರಕ ಶಕ್ತಿ ಅವನದು (೧೫.೧೭ : ಉತ್ತಮಃ ಪುರುಷಸ್ತು ಅನ್ಯಃ ಪರಮಾತ್ಮಾ ಇತಿ ಉದಾಹೃತಃ। ಯೋ ಲೋಕತ್ರಯಂ ಆವಿಶ್ಯ ಬಿಭರ್ತಿ ಅವ್ಯಯಃ ಈಶ್ವರಃ॥). ಅದನ್ನು ಇನ್ನೊಂದು ರೀತಿಯಲ್ಲಿ ಒತ್ತುಕೊಟ್ಟು ಹೇಳುತ್ತಾನೆ ಭಗವಾನ್ : "ನಾನು ನಾಶವಾಗುವಂಥದರಿಂದ ಭಿನ್ನ ಮತ್ತು ಕೂಟಸ್ಥವಾದುದಕ್ಕಿಂತಲೂ ಉತ್ತಮ; ಆದ್ದರಿಂದಲೇ ಲೋಕದಲ್ಲಿ ಮತ್ತು ವೇದದಲ್ಲಿ ನನ್ನನ್ನು ಪುರುಷೋತ್ತಮ ಎನ್ನುತ್ತಾರೆ" (೧೮ : ... ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ). ಲೋಕದಲ್ಲಿ ಹಾಗೆ ಕರೆಯುವುದುಂಟು, ಆದರೆ ನಾಲ್ಕು ವೇದಗಳಲ್ಲಿ ಎಲ್ಲೂ 'ಪುರುಷೋತ್ತಮ' ಎಂಬ ನಾಮಧೇಯವಿಲ್ಲ. ಉಪನಿಷತ್ತುಗಳಲ್ಲಿ 'ಬ್ರಹ್ಮನ್' ಉಂಟು, ಪುರುಷೋತ್ತಮನಿಲ್ಲ. ಋಗ್ವೇದದ ಪುರುಷಸೂಕ್ತದಲ್ಲಿ (೧೦.೯೦) ಪುರುಷನಿಗೆ ಸಾವಿರ ತಲೆ, ಸಾವಿರ ಕಣ್ಣು, ಸಾವಿರ ಕಾಲುಗಳು; ಇಡೀ ಭೂಮಿಯನ್ನು ಆವರಿಸಿ ಅದಕ್ಕಿಂತಲೂ ಹತ್ತು ಅಂಗುಲ ಮೇಲೆ ಉಳಿಯುತ್ತಾನವನು (ಅತ್ಯತಿಷ್ಠತ್ ದಶಾಂಗುಲಂ). ಅವನು ವಿಶಿಷ್ಟ ಪುರುಷನೇ ವಿನಾ ಭಗವಂತನಲ್ಲ. ಭಕ್ತಿ ಸಂಪ್ರದಾಯದ ಭಗವಂತನು ಋಗ್ವೇದದ ಪುರುಷನಲ್ಲ, ಉಪನಿಷತ್ತುಗಳ 'ಬ್ರಹ್ಮನ್' ಸಹ ಅಲ್ಲ. ಹೊಸದಾಗಿ ನಿರ್ಮಾಣಗೊಂಡ ದೇವರು ಅವನು. ಅವನನ್ನು ಗೀತೆಯು ಬ್ರಹ್ಮನ್‌ಗೆ ಪರ್ಯಾಯ ಪದವೆಂಬಂತೆ ವಿವರಿಸಿದೆ. ಆ ಉತ್ತಮ ಪುರುಷನನ್ನು ತಿಳಿದವನು ಅವನನ್ನು ಸದಾ ಭಜಿಸುತ್ತಾನೆ (೧೫.೧೯), ಆದರೆ ಬ್ರಹ್ಮನ್‌ಅನ್ನು ತಿಳಿದವರು ಅದನ್ನು ಭಜಿಸುವುದಿಲ್ಲ, ಸುಮ್ಮನೆ ತಿಳಿಯುತ್ತಾರೆ, ಅಷ್ಟೆ. ಗೀತೆಯ ಪ್ರಕಾರ ಪುರುಷೋತ್ತಮನ ಬಗೆಗಿನ ತಿಳಿವಳಿಕೆಯು ಉತ್ಕೃಷ್ಟವಾದ್ದು, ನಿಗೂಢವಾದ್ದು; ಅದನ್ನು ತಿಳಿದವನು ಧನ್ಯ, ಕೃತಕೃತ್ಯ. ಅಂದರೆ ಮಾಡಬೇಕಾದ್ದನ್ನು ಮಾಡಿದ್ದೇನೆಂಬ ಭಾವವು ಅವನದಾಗುತ್ತದೆ (೧೫.೨೦).

ಇಲ್ಲಿಗೆ ಭಗವಾನನ ಮಹಿಮೆಯ ವರ್ಣನೆ ಗೀತೆಯಲ್ಲಿ ಬಹುಮಟ್ಟಿಗೆ ಮುಗಿದಂತೆ ಎನ್ನಬಹುದು. ಆರಂಭದಲ್ಲಿ ನಾವು, ಗೀತೆಯನ್ನು ರಚಿಸಲು ಅದರ ಕರ್ತೃವಿಗೆ ಒತ್ತಡ ಏನಿತ್ತು ಎಂಬ ಪ್ರಶ್ನೆಯನ್ನು ಹಾಕಿಕೊಂಡಿದ್ದೆವು. ಹಾಗೆ ರಚಿಸುವುದಕ್ಕೆ ಕುರುಕ್ಷೇತ್ರದ ಯುದ್ಧವು ಅವನಿಗೊಂದು ನೆಪವಾಗಿತ್ತು. ನಿಜವಾದ ಕಾರಣವು ಸಾಮಾಜಿಕ ಮತ್ತು ಬೌದ್ಧಿಕ ಒತ್ತಡಗಳೇ. ಮುಂದಿನ ಅಧ್ಯಾಯವು ಅದಕ್ಕೆ ದೃಷ್ಟಾಂತವನ್ನು ಒದಗಿಸುತ್ತದೆ. ಸ್ಥಿತಪ್ರಜ್ಞನ ಲಕ್ಷಣಗಳನ್ನು ಸಮಾಧಾನಚಿತ್ತದಿಂದ ಬಣ್ಣಿಸುವ ಗೀತೆಯ ಕರ್ತೃವು ಸಹನೆಯನ್ನು ಕಳೆದುಕೊಂಡು ಕೋಪಾವಿಷ್ಟನಾದಂತೆ ಕಾಣಿಸುತ್ತಾನೆ ಹದಿನಾರನೆಯ ಅಧ್ಯಾಯದಲ್ಲಿ. ಯಾವ ಸಿದ್ಧಾಂತ, ಆಚರಣೆ, ವರ್ಣ ವಿಭಜನೆ, ಮುಂತಾದುವನ್ನು ಇಡೀ ಸಮುದಾಯವು ಮಾನ್ಯ ಮಾಡಬೇಕೆಂದು ಗೀತೆಯ ಕರ್ತೃವು ಬಗೆಯುತ್ತಾನೋ ಅವನ್ನು ಪ್ರಶ್ನಿಸುವವರನ್ನು ಕಂಡು ಕೆಂಡಾಮಂಡಲವಾಗಿಬಿಡುತ್ತಾನೆ ನಮ್ಮ ತತ್ತ್ವಕೋವಿದ. ಅವನ ಪ್ರತಿಕೃತಿಗಳು ನಮ್ಮ ನಡುವೆ ಇಂದು ಸಾವಿರದಷ್ಟಿವೆ.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ,
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

## ಸಾದರ ಸ್ವೀಕಾರ

**ಕಂಪ್ಯೂಟರ್‌ಗೆ ಪಾಠ ಹೇಳಿ...** *ಟಿ. ಜಿ. ಶ್ರೀನಿಧಿ*
***ಪುಟ : ೯೨*** ***ಬೆಲೆ : ರೂ. ೬೦***

**ಗೃಹಸಾಲ** (ಸಮಗ್ರ ಮಾಹಿತಿ ಕೈಪಿಡಿ)
*ಬಿ. ಆರ್. ರವೀಂದ್ರನಾಥ್*
***ಪುಟ : ೧೦೦*** ***ಬೆಲೆ : ರೂ. ೬೦***

**ನೈಸರ್ಗಿಕ ಸಂಪನ್ಮೂಲಗಳು**
*ಡಾ|| ಎಚ್. ಆರ್. ಕೃಷ್ಣಮೂರ್ತಿ*
***ಪುಟ : ೧೦೪*** ***ಬೆಲೆ : ರೂ. ೬೫***

**ನೆರೆಯ ಬಿಂಬಗಳು** (ಕಥಾ ಸಂಕಲನ)
*ಬಿ. ಎಸ್. ಮಯೂರ*
***ಪುಟ : ೯೬*** ***ಬೆಲೆ : ರೂ. ೭೫***

**ಚಿವ್ ಚಿವ್ ಗುಬ್ಬಿ** (ಶಿಶು ಗೀತೆಗಳು)
*ಎಸ್. ಮಂಜುನಾಥ*
***ಪುಟ : ೪೮*** ***ಬೆಲೆ : ರೂ. ೫೦***

**ಶ್ರಮಿಕ ಸಂಗಾತಿ ಎಂ ಸಿ ನರಸಿಂಹನ್**
*ವಿವಿಧ ಸಂಪಾದಕರು*
***ಪುಟ : ೧೫೨*** ***ಬೆಲೆ : ರೂ. ೧೨೫***

*ಮೇಲಿನ ಆರು ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ಭಾರತವನದ ಅರಳೀಮರ** (೭ನೇ ತರಗತಿಯ ವಿದ್ಯಾರ್ಥಿ ಬರೆದ ಕಾಡಿನ ಕಥೆಗಳು) *ಅಂತಃಕರಣ*
***ಪುಟ : ೫೬*** ***ಬೆಲೆ : ರೂ. ೪೦***

**ಗ್ವಾಲಿಮಾರ್ ರಹಸ್ಯ** (೭ನೇ ತರಗತಿಯ ವಿದ್ಯಾರ್ಥಿ ಬರೆದ ಕಾದಂಬರಿ) *ಅಂತಃಕರಣ*
***ಪುಟ : ೮೮*** ***ಬೆಲೆ : ರೂ. ೭೦***

**ಆಟವಿಲ್ಲದ ಮೈದಾನ** (೭ನೇ ತರಗತಿಯ ವಿದ್ಯಾರ್ಥಿ ಬರೆದ ಕಥೆಗಳು) *ಅಂತಃಕರಣ*
***ಪುಟ : ೫೬*** ***ಬೆಲೆ : ರೂ. ೪೦***

*ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು*
**ಬೆನಕ ಬುಕ್ಸ್ ಬ್ಯಾಂಕ್,** ಯಳಗಲ್ಲು, ಕೋಡೂರು – ೫೭೭ ೪೧೮, ಹೊಸನಗರ ತಾ||, ಶಿವಮೊಗ್ಗ ಜಿಲ್ಲೆ

**ಮುಂಗಾರುಮಳೆ** *ಅಪ್ಪಾಸಾಹೇಬ ಅಲಿಬಾದಿ*
***ಪುಟ : xv+ ೫೨ = ೬೭*** ***ಬೆಲೆ : ರೂ. ೭೦***

**ಜೇನ ಹನಿ** *ಅಪ್ಪಾಸಾಹೇಬ ಅಲಿಬಾದಿ*
***ಪುಟ : ೭೩*** ***ಬೆಲೆ : ರೂ. ೭೦***

**ಚುಟುಕು ಚಂದನ** *ಅಪ್ಪಾಸಾಹೇಬ ಅಲಿಬಾದಿ*
***ಪುಟ : ೬೭*** ***ಬೆಲೆ : ರೂ. ೭೦***

*ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು*
**ವಿನೂತನ ಪ್ರಕಾಶನ,** 'ಶಾಂತಿನಿಕೇತನ' ಜಯನಗರ, ಕ್ಲಬ್ ರಸ್ತೆ, ಅಥಣಿ – ೫೯೧ ೩೦೪, ಬೆಳಗಾವಿ ಜಿಲ್ಲೆ.

**ಅಭಿಮತ** *ಶಾರದಾ ಎ. ಅಂಚನ್*
***ಪುಟ : xiv+ ೯೮ = ೧೧೨*** ***ಬೆಲೆ : ರೂ. ೧೫೦***

**ನಿರೀಕ್ಷೆ** (ಕವನ ಸಂಕಲನ)
*ಶಿಮಂತೂರು ಚಂದ್ರಹಾಸ ಸುವರ್ಣ*
***ಪುಟ : xiv+ ೮೮ = ೧೦೨*** ***ಬೆಲೆ : ರೂ. ೧೫೦***

*ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು*
**ಪೂಜಾ ಪ್ರಕಾಶನ,** ಸಿ/೧, ಜಲಕೀರ್ತಿ ಸಿ. ಎಚ್. ಎಸ್. ಲಿ., ಜಯರಾಜ ನಗರ, ಎಲ್.ಟಿ. ರಸ್ತೆ, ಬೊರಿವಲಿ (ಪ), ಮುಂಬಯಿ – ೪೦೦ ೦೯೧

**ಆಯ್ದ ಕವನಗಳು** *ಡಾ|| ಮೈನುದ್ದೀನ ರೇವಡಿಗಾರ*
***ಪುಟ : ೧೦೦*** ***ಬೆಲೆ : ರೂ. ೧೨೫***
**ಹಂಬಲ ಪ್ರಕಾಶನ,** ಪ್ರಧಾನ ಅಂಚೆ ಕಚೇರಿ ಹಿಂದೆ, ಬಾಗಲಕೋಟೆ – ೫೮೭ ೧೦೧.

**ನೈನ್‌ಟೀನ್ ಎಯ್ಟೀಫೋರ್ (೧೯೮೪)**
*ಸಿದ್ಧಾರೂಢ ಗು. ಕಟ್ಟಿಮನಿ*
***ಪುಟ : ೧೫೨*** ***ಬೆಲೆ : ರೂ. ೧೦೦***
**ಕಾವ್ಯಕಲಾ ಪ್ರಕಾಶನ,** ೧೨೭೩, ೭ನೇ ಕ್ರಾಸ್, ಚಂದ್ರಾ ಬಡಾವಣೆ, ವಿಜಯನಗರ, ಬೆಂಗಳೂರು – ೪೦.

**ನಾಥಪಂಥ – ಸಿದ್ಧಾಂತಗಳು ಮತ್ತು ಆಚರಣೆಗಳು**
*ಉದಯಕುಮಾರ ಹಬ್ಬು*
***ಪುಟ : ೧೪೮*** ***ಬೆಲೆ : ರೂ. ೧೦೦***
**ದುರ್ಗಾ ಬುಕ್ ಹೌಸ್,** ಗೋವಿಂದರಾಜನಗರ, ಬೆಂಗಳೂರು – ೫೬೦ ೦೪೦.

**ಭೂಮಿಯ ಸುತ್ತ** (ಈಶಾನ್ಯ ಭಾರತದ ಜಾನಪದ ಕಥೆಗಳು) *ಉದಯಕುಮಾರ ಹಬ್ಬು*
***ಪುಟ : ೮೮*** ***ಬೆಲೆ : ರೂ. ೬೦***
**ಜಿಎನ್‌ಸಿ ಪಬ್ಲಿಷರ್ಸ್,** ವಿಜಯನಗರ, ಬೆಂಗಳೂರು–೪೦.

**ಕೂಡು** (ಕವನ ಸಂಕಲನ) *ಸ. ರಘುನಾಥ*
***ಪುಟ : xiv+ ೧೩೦ = ೧೪೪*** ***ಬೆಲೆ : ರೂ. ೧೦೦***
**ಎಸ್.ಎಲ್.ಎನ್. ಪಬ್ಲಿಕೇಷನ್,** ನಂ.೩೪೩೭, ೪ನೇ ಮುಖ್ಯರಸ್ತೆ, ೯ನೇ ಅಡ್ಡರಸ್ತೆ, ಶಾಸ್ತ್ರೀನಗರ, ಬನಶಂಕರಿ ೨ನೇ ಹಂತ, ಬೆಂಗಳೂರು–೨೮.

**ನಮ್ಮ ಕನಸಿನ ಕರ್ನಾಟಕ ಏನಾಯ್ತು ?** ***ಕೋಚೆ***
***ಪುಟ : x+ ೬೮ = ೭೮*** ***ಬೆಲೆ : ರೂ. ೬೦***
**ಶ್ರೀ ಅರವಿಂದ ಪ್ರಕಾಶನ,** # ೧೨೭, ವೆಸ್ಟ್ ಆಫ್ ಕಾರ್ಡ್ ರಸ್ತೆ, ಬೆಂಗಳೂರು – ೫೬೦ ೦೮೬

# ನಿಲ್ಲದ ನೀರಾದ ಗೌರಿ

**ನೂರ್ ಶ್ರೀಧರ್**

ವಿಚಾರವಾದಿಗಳಾದ ದಾಭೋಲ್ಕರ್, ಪಾನ್ಸರೆ, ಕಲಬುರ್ಗಿಯವರೊಂದಿಗೆ ಸರಣಿ ಹತ್ಯೆಯಲ್ಲಿ ಗೌರಿಯವರ ಹೆಸರು ಇತ್ತೀಚಿನ ಸೇರ್ಪಡೆ. ತಮ್ಮ ಸ್ವತಂತ್ರ ವಿಚಾರವಾದಕ್ಕೆ, ಸತ್ಯದ ಅನ್ವೇಷಣೆಗೆ ಬಲಿಯಾದ ಹೋರಾಟಗಾರ್ತಿ ಗೌರಿ ಲಂಕೇಶ್ ಹತ್ಯೆಯ ಹಂತಕರು ಯಾರೆಂದು ಬೆರಳಿಟ್ಟು ತೋರಿಸಲಾಗದಿದ್ದರೂ, ಅವರ ಹತ್ಯೆಯ ಕಾರಣವಂತೂ ಸ್ಪಷ್ಟವಾಗಿದೆ. ಫ್ಯಾಸಿಸ್ಟ್ ಶಕ್ತಿಗಳಿಗೆ ಬಲಿಯಾದ ಗೌರಿಯ ಧೀಮಂತ ಬದುಕಿನ ಪರಿಚಯ ಇಲ್ಲಿದೆ.

## ಬೋಲ್ಡ್ ಲವ್ – ಮೆಚೂರ್ಡ್ ಸಿಂಗಲ್

ಇಂಗ್ಲಿಷ್ ಮೀಡಿಯಮ್ಮಿನಲ್ಲೆ ಶಾಲಾ ಶಿಕ್ಷಣವನ್ನು ಮುಗಿಸಿದ ಗೌರಿ, ವಿಜ್ಞಾನದಲ್ಲಿ ಪಿಯುಸಿ ಮಾಡಿದರು ಬಸವನಗುಡಿ ಕಾಲೇಜಿನಲ್ಲಿ. ನಂತರ ಜರ್ನಲಿಸಂ ಬಿಎ ಮತ್ತು ದೆಹಲಿಯ ಐಐಎಂಸಿಯಲ್ಲಿ ಎಂಎ ಮುಗಿಸಿದರು. ಪಿಯುಸಿಯಲ್ಲಿದ್ದಾಗಲೇ ಆರಂಭವಾದ ಚಿದಾನಂದ ರಾಜಘಟ್ಟರೊಂದಿಗಿನ ಸ್ನೇಹ, ಪ್ರೀತಿ, ಪ್ರಣಯವಾಗಿ ೭–೮ ವರ್ಷದ ತರುವಾಯ ಅವರನ್ನೇ ವಿವಾಹವಾದರು. ಅಮ್ಮ–ಅಪ್ಪರ ಬಲವಂತಕ್ಕೂ ಬಾಗದೆ ಸ್ನೇಹವನ್ನು ಕಾಯ್ದುಕೊಂಡರು. ಆ ಕಾಲದ ಹೊಸ ತಲೆಮಾರಿನ ಮಾದರಿಗೆ ತಕ್ಕಂತೆ ೧೫ ರೂ. ಖರ್ಚಿನಲ್ಲಿ ರಿಜಿಸ್ಟ್ರೇಷನ್ ಮದುವೆ ಮಾಡಿಕೊಂಡರು. ಐದು ವರ್ಷದ ವೈವಾಹಿಕ ಜೀವನದ ನಂತರ ಹೊಂದಾಣಿಗೆ ಸಮಸ್ಯೆ ಬಂದಿದ್ದರಿಂದ ವಿವಾಹ ಸಂಬಂಧವನ್ನು ಅಂತ್ಯಗೊಳಿಸಿ ಒಬ್ಬಂಟಿಯಾಗೇ ಬದುಕು ಕಟ್ಟಿಕೊಂಡರು. ವಿವಾಹ ಸಂಬಂಧ ಮುರಿದುಕೊಂಡರೂ ಮಾಜಿ ಪತಿ ಜೊತೆ ಸ್ನೇಹ ಸಂಬಂಧವನ್ನು ಕಳೆದುಕೊಳ್ಳಲಿಲ್ಲ. ಅಷ್ಟೇ ಅಲ್ಲ ಅವರ ಹೊಸ ಪತ್ನಿ ಜೊತೆ ಹಾಗೂ ಅವರ ಮಕ್ಕಳ ಜೊತೆ ಆತ್ಮೀಯ ಒಡನಾಟವನ್ನು ಬೆಳೆಸಿಕೊಂಡು ಹೊಸ ಮಾದರಿಯನ್ನೇ ಹುಟ್ಟುಹಾಕಿದರು. ಹೊಸ ಕಾಲಕ್ಕೆ ತಕ್ಕಂತೆ ವಿವಾಹವಾದರು, ಹೊಸ ಕಾಲದವರಿಗೆಲ್ಲಾ ಮಾದರಿಯಾಗುವಂತೆ ವಿವಾಹೇತರ ಜೀವನ ಸಾಗಿಸಿದರು.

ಜರ್ನಲಿಸಂನಲ್ಲಿ ಸ್ನಾತಕೋತ್ತರ ಡಿಗ್ರಿ ಪಡೆದ ನಂತರ ಮೊದಲು ಟೈಮ್ಸ್ ಆಫ್ ಇಂಡಿಯಾದಲ್ಲಿ, ನಂತರ ಸಂಡೆ ವಾರ ಪತ್ರಿಕೆಯಲ್ಲಿ, ಕೊನೆಗೆ ಈ ಟಿವಿಯಲ್ಲಿ, ಹೀಗೆ ೧೬ ವರ್ಷ ಇಂಗ್ಲಿಷ್ ಪತ್ರಕರ್ತೆಯಾಗಿ ಕೆಲಸ ಮಾಡಿದರು. ವಸ್ತುನಿಷ್ಠ ಕಾರ್ಗಿಲ್ ವರದಿ ಇವರ ಪತ್ರಿಕೋದ್ಯಮದ ಹೆಗ್ಗಳಿಕೆಗಳಲ್ಲೊಂದಾಗಿದೆ.

## ಅಪ್ಪನ ಆಶಯಗಳಿಗೆ ಹೆಗಲಾಗಿ

೨೦೦೦ದಲ್ಲಿ ತಂದೆ ಲಂಕೇಶರು ನಿಧನ ಹೊಂದಿದ ನಂತರ ಪತ್ರಿಕೆಯನ್ನು ಮುನ್ನಡೆಸುವ ಜವಾಬ್ದಾರಿ ಇತ್ತು. ತಂದೆ ಪತ್ರಿಕೆಯನ್ನು ಮಗ ಇಂದ್ರಜಿತ್ ಲಂಕೇಶ್ ಹೆಸರಿಗೆ ಬರೆದಿದ್ದರು. ಅಪ್ಪನನ್ನು ಅತ್ಯಂತ ಪ್ರೀತಿಸುತ್ತಿದ್ದ, ಅಭಿಮಾನಿಸುತ್ತಿದ್ದ ಗೌರಿ ಸಂಪಾದಕಿಯಾಗಿ ಕಾರ್ಯನಿರ್ವಹಿಸಲು ಮುಂದಾದರು. ಇಂಗ್ಲಿಷ್ ಮೀಡಿಯಮ್ಮಿನಲ್ಲಿ ಓದಿ, ಇಂಗ್ಲಿಷ್ ಜರ್ನಲಿಸಮ್ಮಿನಲ್ಲೇ ಪಳಗಿದ್ದ ಗೌರಿಯವರಿಗೆ ಕನ್ನಡದಲ್ಲಿ ವಾಕ್ಯ ರಚನೆಯೇ ಕಷ್ಟವಾಗಿತ್ತು. ಆದರೂ ಅದನ್ನೊಂದು ಸವಾಲಾಗಿ ಸ್ವೀಕರಿಸಿದರು. ತಪಸ್ಸಿನಂತೆ 'ಅಪ್ಪನ' ಛೇಂಬರಿನಲ್ಲಿ ಕೂತರು. [ಕೊನೆಯವರೆಗೂ, ತಾನದಕ್ಕೆ ಅರ್ಹಳಲ್ಲವೆಂದು, ಅಪ್ಪನ ಕುರ್ಚಿಯಲ್ಲಿ ಕೂರಲಿಲ್ಲ]. ಪದ ಪದ ಜೋಡಿಸಿ ವಾಕ್ಯ ರೂಪಿಸಿದರು. ಇಂಗ್ಲಿಷಿನಲ್ಲಿ ಬರುತ್ತಿದ್ದ ಆಲೋಚನೆಗಳನ್ನು ಬಲವಂತವಾಗಿ ಕನ್ನಡಕ್ಕಿಳಿಸಿದರು. ಬರೆದದ್ದನ್ನು ಮತ್ತೆ ಮತ್ತೆ ತಿದ್ದಿ ತಿದ್ದಿ ಬರೆದರು. ಈ ಸಂದರ್ಭದಲ್ಲಿ ಮತ್ತೊಬ್ಬ ಜನಪರ ಪತ್ರಕರ್ತ ಪಾರ್ವತೀಶ್ ಗೌರಿಯವರಿಗೆ ಬಹಳ ಸಾತ್ ಕೊಟ್ಟರು. ಕನ್ನಡವನ್ನು, ಕರ್ನಾಟಕವನ್ನು, ಕರ್ನಾಟಕದ ತಲ್ಲಣಗಳನ್ನು ಅರ್ಥಮಾಡಿಕೊಳ್ಳಲು ಅವರಿಗೆ ನೆರವಾದರು. ಯಾವ ಭಿಡೆಯೂ ಇಲ್ಲದೆ ದಕ್ಷ ವಿದ್ಯಾರ್ಥಿಯಂತೆ ಎಲ್ಲರಿಂದ ಕೇಳಿಸಿಕೊಳ್ಳುತ್ತಾ, ಬರೆದದ್ದನ್ನು ಸ್ವಲ್ಪ ಸರಿ ಇದೆಯೇ ನೋಡಿ ಎಂದು ಕೇಳುತ್ತಾ, ಸರಿಯೆನಿಸಿದ ತಿದ್ದುಪಡಿಯನ್ನು ಮತ್ತೆ ಕೂತು ಮಾಡುತ್ತಾ ತಮ್ಮ ಬರವಣಿಗೆಯಲ್ಲಿ ಕ್ರಮೇಣ ಸಹಜತೆ ಮತ್ತು ಪ್ರಖರತೆಯನ್ನು ತಂದುಕೊಂಡರು. ಅವರು ಲಂಕೇಶ್ ಜವಾಬ್ದಾರಿ ಹೊತ್ತುಕೊಂಡ ಮೊದಲ ಸಂಚಿಕೆಯಿಂದ ಹಿಡಿದು ಅವರು ಕೊನೆಯುಸಿರೆಳೆದ ಕೊನೆ ಸಂಚಿಕೆಯ ತನಕ ಒಂದೇ ಒಂದು ಲೇಖನವನ್ನೂ ಓದದೆ, ತಿದ್ದುಪಡಿ ಮಾಡದೆ ಕಳುಹಿಸಿದ್ದಿಲ್ಲ ಎಂದರೆ ನಂಬುವುದು ಕಷ್ಟವಾದರೂ ಸತ್ಯ. ಪ್ರತಿ ವಾರದ ಸವಾಲನ್ನು ಅವರು ಶಿಸ್ತಿನ ಸಿಪಾಯಿಯ ರೀತಿಯಲ್ಲಿ ಕೈಗೆತ್ತಿಕೊಂಡರು. ಪತ್ರಿಕೆಯನ್ನೂ ಬೆಳೆಸುತ್ತಾ ತಾನೂ ಬೆಳೆದರು.






*ಗೌರಿ ಲಂಕೇಶ್ 'ಹೊಸತು' ಕಛೇರಿಗೆ ಭೇಟಿ ನೀಡಿದ ಸಂದರ್ಭದಲ್ಲಿ*



*'ನವಕರ್ನಾಟಕ' ಸಿಬ್ಬಂದಿಯೊಂದಿಗೆ ಗೌರಿ ಲಂಕೇಶ್*

**ಕಾಡಿದ ನರಹತ್ಯೆ**

೨೦೦೨ರ ಕಾಲ ಮತ್ತೊಂದು ಜವಾಬ್ದಾರಿಯನ್ನು ನಮ್ಮೆಲ್ಲರ ಮುಂದೊಡ್ಡಿತು. ಅದು ಗುಜರಾತ್ ಹತ್ಯಾಕಾಂಡ. ಆ ಕ್ರೌರ್ಯವನ್ನು, ಕಪಟತೆಯನ್ನು, ಕ್ರೂರ ರಾಜಕಾರಣವನ್ನು ಕಂಡು ಗೌರಿ ದಿಗ್ಭ್ರಾಂತರಾದರು. ಅಷ್ಟರಲ್ಲಾಗಲೇ "ಬಾಬಾ ಬುಡನ್‌ಗಿರಿಯನ್ನು ಕರ್ನಾಟಕದ ಅಯೋಧ್ಯೆ ಮಾಡುತ್ತೇವೆ" ಎಂದು ಕೋಮುವಾದಿಗಳು ಷಡ್ಯಂತ್ರ ಆರಂಭಿಸಿದ್ದರು ಮತ್ತು ಅದರ ವಿರುದ್ಧ ಚಳವಳಿ ಆರಂಭವಾಗಿತ್ತು. ಗುಜರಾತ್ ನರಮೇಧ ಕಂಡ ಗೌರಿ ಈ ರಕ್ತಪಿಪಾಸು ರಾಜಕಾರಣ ಕರ್ನಾಟಕದಲ್ಲಿ ಬೆಳೆಯುವುದನ್ನು ತಡೆಯಬೇಕೆಂದು ಬಾಬಾ ಬುಡನ್‌ಗಿರಿ ಹೋರಾಟದಲ್ಲಿ ಸಂಪೂರ್ಣ ತನ್ಮಯತೆಯಿಂದ ತೊಡಗಿಸಿಕೊಂಡರು. ೨೦೦೨ರಲ್ಲಿ ಈ ಸಂಬಂಧ ನಡೆದ ಹೋರಾಟದಲ್ಲಿ ದಿಟ್ಟ ಪಾತ್ರ ವಹಿಸಿ ಜೈಲಿಗೂ ಹೋಗಿಬಂದರು. ನಂತರ ರೂಪಗೊಂಡ "ಕರ್ನಾಟಕ ಕೋಮುಸೌಹಾರ್ದ ವೇದಿಕೆ"ಯ ಸಂಸ್ಥಾಪಕ ಸದಸ್ಯೆಯಾದರು. ಎಷ್ಟೋ ಜನ ಅವರೇ ಅದನ್ನು ಮುನ್ನಡೆಸುತ್ತಿರುವ ನಾಯಕಿ ಎಂದುಕೊಳ್ಳುವಷ್ಟರಮಟ್ಟಿಗೆ ಅದರ ಎಲ್ಲಾ ಹೋರಾಟ ಮತ್ತು ಚಟುವಟಿಕೆಗಳ ಅವಿಭಾಜ್ಯ ಅಂಗವಾದರು.

ಸೂರತ್ಕಲ್ ಗಲಭೆಗಳನ್ನು ಪ್ರತಿಭಟಿಸಿ, ಹಾಜಬ್ಬ ಬೆತ್ತಲೆ ಪ್ರಕರಣ ಖಂಡಿಸಿ, ಸಿಂದಗಿಯಲ್ಲಿ ಭಜರಂಗಿಗಳೇ ಪಾಕಿಸ್ತಾನ ಬಾವುಟ ಹಾರಿಸಿ ಬೆಂಕಿ ಹಚ್ಚಲು ಪ್ರಯತ್ನಿಸಿದ್ದನ್ನು ಬಯಲುಗೊಳಿಸಿ, ಚರ್ಚ್ ಮೇಲಿನ ದಾಳಿಗಳನ್ನು ಪ್ರತಿರೋಧಿಸಿ, ಮಾಲೆಗಾಂವ್ ಸ್ಫೋಟದ ಹಿಂದಿನ ಕೇಸರಿ ಭಯೋತ್ಪಾದಕರ ಬಣ್ಣ ಬಯಲುಗೊಳಿಸಿ, ಅಮಾಯಕ ಮುಸ್ಲಿಂ ಯುವಕರ ಬಂಧನವನ್ನು ಬಲವಾಗಿ ವಿರೋಧಿಸಿ – ಹೀಗೆ ಕಳೆದ ೧೫ ವರ್ಷಗಳಲ್ಲಿ ಲೆಕ್ಕವಿಲ್ಲದಷ್ಟು ಹೋರಾಟಗಳ ಜೊತೆ ದನಿಗೂಡಿಸಿದರು. ತನ್ನ ಪತ್ರಿಕೆಯನ್ನು ಈ ಭಾರತೀಯ ಫ್ಯಾಸಿಸ್ಟರಿಗೆ ತಡೆಗೋಡೆಯಾಗಿ ಮಾರ್ಪಡಿಸಲು ಬಯಸಿದರು. ಮೋದಿ ಪ್ರವರ್ಧಮಾನಕ್ಕೆ ಬಂದ ನಂತರ, ಆತನ ಢೋಂಗಿಯನ್ನು ಮನವರಿಕೆ ಮಾಡಿಸಲು "ಬೂಸಿ ಬಸ್ಯ" ಎಂಬ ಅಂಕಣವನ್ನು ಆರಂಭಿಸಿದರು. ತಮ್ಮ ಸಂಪಾದಕೀಯ 'ಕಂಡ ಹಾಗೆ'ಯಲ್ಲಿ ನಿರಂತರವಾಗಿ ಬರೆದರು. ಕೋಮುವಾದವನ್ನು ವಿರೋಧಿಸುವುದೇ ಪತ್ರಿಕೆಯ ಗೀಳು ಎನ್ನುವಷ್ಟರಮಟ್ಟಿಗೆ ಅದರ ಸುತ್ತವೇ ಪತ್ರಿಕೆಯನ್ನು ಹೆಣೆದರು. ಪತ್ರಿಕೆಯ ವಿತರಣೆ ಮತ್ತು ಮಾರಾಟಕ್ಕೆ ಅದೊಂದು ಸಮಸ್ಯಾತ್ಮಕ ವಿಚಾರವಾದರೂ ತಲೆಕೆಡಿಸಿಕೊಳ್ಳದೆ ನಂಬಿದ್ದನ್ನೇ ಬರೆಯುತ್ತಾ ಸಾಗಿದರು. ಹಾಗಾಗಿಯೇ ಅಲ್ಪಸಂಖ್ಯಾತರು ಕೊಂಡು ಓದಿದ್ದು ಕಡಿಮೆಯೇ ಆದರೂ "ಇದು ನಮ್ಮ ಪತ್ರಿಕೆ" ಎಂದು ಅಭಿಮಾನಿಸುವಂತೆ ಅವರ ಹೃದಯಗಳಲ್ಲಿ ಜಾಗಮಾಡಿಕೊಂಡರು.

**ಲೀಚ್ ಟ್ರೀಟ್‌ಮೆಂಟ್**

೨೦೦೪ರಲ್ಲಿ ಕರ್ನಾಟಕದ ಮತ್ತೊಂದು ವಿದ್ಯಮಾನ ಅವರ ಮನದಾಳದೊಳಗೆ ಇಳಿದು ಅವರ ವ್ಯಕ್ತಿತ್ವದ ಭಾಗವಾಯಿತು. ಅದು ಕಾಡೊಳಗೆ ನಡೆದ ಕಾಮ್ರೇಡ್ ಪ್ರೇಮ್ ಸಂದರ್ಶನ. "ಲೀಚ್ ಟ್ರೀಟ್‌ಮೆಂಟ್" ಎಂದು ಕೆಲವರದನ್ನು ತಮಾಷೆ ಮಾಡುವುದೂ ಉಂಟು. ಮಲೆನಾಡಿನಲ್ಲಿ ಆಗ ತಾನೆ ನಕ್ಸಲ್ ಚಟುವಟಿಕೆ ಆರಂಭಗೊಂಡಿದ್ದವು. ಕಾಮ್ರೇಡ್ ಪಾರ್ವತಿ ಮತ್ತು ಹಾಜಿಮರ ಎನ್ಕೌಂಟರ್ ಹತ್ಯೆ ಸಹ ನಡೆದಿತ್ತು. ಪೊಲೀಸರು ಮತ್ತು ನಕ್ಸಲೀಯರ ನಡುವಿನ ಸಂಘರ್ಷಕ್ಕೆ ವೇದಿಕೆ ಸಜ್ಜಾಗಿತ್ತು. ಈ ಸಂದರ್ಭದಲ್ಲಿ ನಕ್ಸಲೀಯರು ಏಕೆ ಬಂದೂಕು ಕೈಗೆತ್ತಿಕೊಂಡಿದ್ದಾರೆ ಎಂಬುದನ್ನು ವಿವರಿಸಲು ನಕ್ಸಲ್ ನಾಯಕ ಕಾಮ್ರೇಡ್ ಸಾಕೇತ್ ರಾಜನ್‌ರವರು ಮಲೆನಾಡಿನ ಕಾಡುಗಳಲ್ಲಿ ರಹಸ್ಯ ಪತ್ರಿಕಾ ಗೋಷ್ಠಿಯೊಂದನ್ನು ನಡೆಸಿದರು. ಆಗವರು ತಮ್ಮನ್ನು ಪ್ರೇಮ್ ಹೆಸರಿನಲ್ಲಿ ಗುರುತಿಸಿಕೊಂಡಿದ್ದರು. ಕರ್ನಾಟಕದ ಸುಮಾರು ೧೧ ಜನ ಪತ್ರಕರ್ತರ ತಂಡದೊಂದಿಗೆ ಗೌರಿಯವರು ಸಹ ಇದರಲ್ಲಿ ಪಾಲ್ಗೊಂಡರು. ನಕ್ಸಲೀಯರು ಅನುಸರಿಸಲು ಹೊರಟಿರುವ ಮಾರ್ಗದ ಬಗ್ಗೆ ಒಪ್ಪಿಗೆ ಇಲ್ಲವಾದರೂ ಆ ಮಳೆ, ಚಳಿ, ಇಂಬಳಗಳ ನಡುವೆ, ಸಮಾಜ ಬದಲಾಯಿಸಬೇಕೆಂಬ ಸಂಕಲ್ಪದೊಂದಿಗೆ, ಪ್ರಾಣಕೊಡಲೂ ಸಿದ್ಧರಾಗಿ ನಿಂತ ಯುವಕ-ಯುವತಿಯರ ಅಚಲತೆ ಹಾಗೂ ಬದ್ಧತೆ ಅವರ ಮನಸೂರೆಗೊಂಡವು.

"ಎಲ್ಲಾ ಸರಿ, ಸಶಸ್ತ್ರ ಹೋರಾಟ ಈಗೇಕೆ ಅಗತ್ಯ" ಎಂದು ಸಾಕೇತ್ ರಾಜನ್ ಜೊತೆ ಆ ಪತ್ರಿಕಾ ಗೋಷ್ಠಿಯಲ್ಲೇ ಅವರು ಚರ್ಚೆಗಿಳಿದರು. "ಸರ್ಕಾರ ಮಾತುಕತೆಯ ಮೂಲಕವೇ ಸಮಸ್ಯೆ ಬಗೆಹರಿಸಲು ಮುಂದಾಗುವುದಾದರೆ ನಾವದಕ್ಕೂ ಬದ್ಧ" ಎಂಬ ಅವರ ಮಾತು ಗೌರಿಯವರ ಮೇಲೆ ಪ್ರಭಾವ ಬೀರಿತು. ಕಾಡಿನಿಂದ ಹೊರಬಂದ ನಂತರ ಈ ಕುರಿತು ಮುಖಪುಟದ ವರದಿ ಪ್ರಕಟಿಸಿದ್ದಷ್ಟೇ ಅಲ್ಲದೆ ಅನೇಕ ಸಮಾನಮನಸ್ಕರ ಜೊತೆಗೂಡಿ "ಶಾಂತಿಗಾಗಿ ನಾಗರಿಕರ ವೇದಿಕೆ" ಎಂಬ ತಂಡವೊಂದನ್ನು ಕಟ್ಟಿಕೊಂಡು ಮಾತುಕತೆಗೆ ಮುಂದಾಗಬೇಕೆಂದು ಸರ್ಕಾರದ ಮೇಲೆ ಒತ್ತಡ ಹೇರಲಾರಂಭಿಸಿದರು. ಆಗ ಮುಖ್ಯಮಂತ್ರಿಯಾಗಿದ್ದ ಧರಂ ಸಿಂಗ್ ನಕ್ಸಲ್ ಪ್ರದೇಶಗಳಲ್ಲಿ ನಡೆಯುತ್ತಿದ್ದ ಕೂಂಬಿಂಗ್ ಕಾರ್ಯಾಚರಣೆ ನಿಲ್ಲಿಸಿ ಮಾತುಕತೆಗೆ ಆಹ್ವಾನಿಸುವುದಾಗಿ ಮಾತುಕೊಟ್ಟರು.

**ನಂಬಿದ ನಿಲುವಿಗಾಗಿ ಹೊಸ ಪತ್ರಿಕೆ**

ಕೆಲವು ತಿಂಗಳು ಕೂಂಬಿಂಗ್ ನಿಂತಿತಾದರೂ ಬಹು ಬೇಗನೆ ಸರ್ಕಾರ ಮಾತು ಮರೆಯಿತು. ಮತ್ತೆ ನಕ್ಸಲ್ ಬೇಟೆ ಆರಂಭವಾಯಿತು, ಎನ್ಕೌಂಟರ್‌ಗಳು ಮುಂದುವರೆದವು. ಇದರ ಭಾಗವಾಗಿ ಕಾಮ್ರೇಡ್ ೨೦೦೫ರ ಏಪ್ರಿಲ್ ತಿಂಗಳಿನಲ್ಲಿ ಕಾಮ್ರೇಡ್ ಸಾಕೇತ್ ರಾಜನ್ ಸಹ ಪೊಲೀಸರ ಕಪಟ ಎನ್ಕೌಂಟರಿನಲ್ಲಿ ಹತರಾದರು. ಮೇಧಾವಿತನಕ್ಕೆ ಮಾದರಿಯಂತಿದ್ದ, ಬದ್ಧತೆಗೆ ಪ್ರತಿರೂಪದಂತಿದ್ದ ಸಾಕೇತ್ ರಾಜನ್‌ರವರ ಈ ಕಗ್ಗೊಲೆ ಗೌರಿಯವರನ್ನು ಬಹಳಷ್ಟು ವಿಚಲಿತ ಗೊಳಿಸಿತು. ಆಗಿನ ಕಾಂಗ್ರೆಸ್ ಸರ್ಕಾರದ ಕೊಳೆಗಡುಕ ನೀತಿಯನ್ನು ತಮ್ಮ ಪತ್ರಿಕೆಯಲ್ಲಿ ಕಟುವಾಗಿ ಖಂಡಿಸಿ ಬರೆದರು. ಲಂಕೇಶ್ ಪತ್ರಿಕೆಯ ಮಾಲಿಕ ಇಂದ್ರಜಿತ್ ಲಂಕೇಶ್‌ಗೂ, ಸಂಪಾದಕಿ ಗೌರಿ ಲಂಕೇಶರಿಗೂ ನಡುವೆ ಈ ವಿಚಾರದಲ್ಲಿ ತೀವ್ರ ಭಿನ್ನಾಭಿಪ್ರಾಯ ಬೆಳೆದು ರಾತ್ರೋರಾತ್ರಿ ಇಂದ್ರಜಿತ್ ಗೌರಿಯವರನ್ನು ಪತ್ರಿಕೆಯಿಂದ ಹೊರಹಾಕಿದರು. ಸ್ನೇಹಿತರ ನೆರವು ಹಾಗೂ ಪ್ರೋತ್ಸಾಹದೊಂದಿಗೆ "ಗೌರಿ ಲಂಕೇಶ್" ಹೆಸರಿನಲ್ಲಿ ಮರು ವಾರದಿಂದಲೇ ಗೌರಿಯವರು ಹೊಸ ಪತ್ರಿಕೆಯನ್ನು ಆರಂಭಿಸಿಬಿಟ್ಟರು. ಕರ್ನಾಟಕದ ಸಂದಿಗ್ಧ ಕಾಲಘಟ್ಟದಲ್ಲಿ ಮತ್ತೆ ರಾಜಿಮಾಡಿಕೊಳ್ಳದೆ ತಮ್ಮ ದಿಟ್ಟ ನಿಲುವಿಗೆ ಬದ್ಧವಾಗಿದ್ದುಕೊಂಡು ಹೊಸ ಪತ್ರಿಕೆಯ ಹುಟ್ಟಿಗೆ ಕಾರಣರಾದರು. ಸರ್ಕಾರ ಮತ್ತು ಸಂಘಪರಿವಾರ ಇಬ್ಬರನ್ನು ಎದುರು ಹಾಕಿಕೊಂಡು ಪತ್ರಿಕೆ ಮುನ್ನಡೆಸಿದರು.

**ಡೇರ್ 'ಡೆವಿಲ್'**

ಗೌರಿಯವರ ಈ ದಿಟ್ಟ ತಾತ್ವಿಕ ನಿಲುವನ್ನು ಸಂಘಪರಿವಾರ 'ನಕ್ಸಲ್ ಬೆಂಬಲಗಿ' ಎಂದು ಜರಿಯಿತು. ಗೌರಿಯವರ ಸುತ್ತ ಅಪಪ್ರಚಾರದ ಸರಮಾಲೆಯನ್ನೇ ಹರಿಬಿಟ್ಟಿತು. ೨೦೦೮ರಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಾತನಾಡಲು

ಅವಕಾಶ ಕೊಡಬಾರದೆಂದು ಎಬಿವಿಪಿ ಪುಂಡರು ದಾಂಧಲೆ ನಡೆಸಿ ಜನಪರ ಯುವಕರಿಂದ ಇಕ್ಕಿಸಿಕೊಂಡರು. ೨೦೦೮ರಲ್ಲಿ ಮೆಣಸಿನಹಾಡ್ಯ ಎನ್ಕೌಂಟರ್ ಸ್ಥಳಕ್ಕೆ ಭೇಟಿ ನೀಡಿ ಹಿಂತಿರುಗುತ್ತಿದ್ದಾಗ ಕೊಪ್ಪ ಬಳಿ ಭಜರಂಗಿಗಳು ಗೌರಿಯವರ ಕಾರನ್ನು ಅಡ್ಡಗಟ್ಟಿದರು. ಕಾರಿನಿಂದ ಇಳಿದು, ಸಪೂರ ದೇಹದ ದಿಟ್ಟಗಿತ್ತಿ ಒಡ್ಡಿದ ಪ್ರತಿರೋಧಕ್ಕೆ, ಸ್ವಂತಬುದ್ಧಿ ಇಲ್ಲದ ದಾಂಡಿಗರು ಕಕ್ಕಾಬಿಕ್ಕಿಯಾಗಿದ್ದರು. ೨೦೦೮ರಲ್ಲಿ ಬಿಜೆಪಿ ಅಧಿಕಾರಕ್ಕೆ ಬಂದ ನಂತರ ಅನೇಕ ಪ್ರಗತಿಪರರ ನಾಲಿಗೆ ಮತ್ತು ಪೆನ್ನುಗಳು ಸ್ವಯಂ ಸೆನ್ಸಾರನ್ನು ವಿಧಿಸಿಕೊಂಡರೆ ಗೌರಿಯವರ ಮಾತು ಮತ್ತು ಬರಹ ಮತ್ತಷ್ಟು ನೇರ ಮತ್ತು ಸ್ಪಷ್ಟ ಮುಖಾಮುಖಿಗೆ ಮುಂದಾದವು. ಕೋಮುವಾದಿಗಳ ಬೆದರಿಕೆಗಳಿಗೆ ಕೇರ್ ಮಾಡದೆ ಗೌರಿ ಬರೆದರು, ಬದುಕಿದರು.

**ಮುಖ್ಯವಾಹಿನಿಗೆ ಕರೆತರುವ ವಾಹಕವಾಗಿ ಗೌರಿ**

೨೦೧೩ರಲ್ಲಿ ಬಿಜೆಪಿ ಸೋತು ಸಿದ್ದರಾಮಯ್ಯ ಮುಂದಾಳತ್ವದ ಕಾಂಗ್ರೆಸ್ ಅಧಿಕಾರಕ್ಕೆ ಬಂದಾಗ ಇನ್ನು ಮುಂದೆ ಪತ್ರಿಕೆಯ ನಿಲುವು "ರಚನಾತ್ಮಕ ವಿಮರ್ಶೆಯದಾಗಿರುತ್ತದೆ" ಎಂದು ಬರೆದರು. ಸರ್ಕಾರದ ಮೇಲೆ ಒತ್ತಡ ಹೇರಿ ಜನಪರ ಚಳುವಳಿಗೆ ನೆರವಾಗುವ ಧೋರಣೆಯನ್ನು ತಾಳಿದರು. ಅದರ ಭಾಗವಾಗಿಯೇ ನಕ್ಸಲರ ಜೊತೆ ಮಾತುಕತೆಗೆ ಮುಂದಾಗಬೇಕೆಂದು "ಶಾಂತಿಗಾಗಿ ನಾಗರಿಕರ ವೇದಿಕೆ" ಮತ್ತೊಮ್ಮೆ ಸರ್ಕಾರಕ್ಕೆ ಮನವಿ ಮಾಡಿಕೊಂಡಿತು. ಸಿದ್ದರಾಮಯ್ಯನವರು ಸಕಾರಾತ್ಮಕವಾಗಿ ಸ್ಪಂದಿಸಿದರು. ನಾನು ಮತ್ತು ಸಿರಿಮನೆ ನಾಗರಾಜ್ ಸರ್ಕಾರ ನಮ್ಮ ಮೇಲಿನ ಸುಳ್ಳು ಕೇಸುಗಳನ್ನು ಹಿಂತೆಗೆದುಕೊಂಡಲ್ಲಿ ಪ್ರಜಾತಾಂತ್ರಿಕ ಮುಖ್ಯವಾಹಿನಿಗೆ ಬರಲು ಸಿದ್ಧ ಎಂದು ಹೇಳಿಕೆ ಕೊಟ್ಟೆವು. ಆದರೆ ಹೋರಾಟಗಾರರ ಘನತೆಗೆ ತಕ್ಕದಲ್ಲದ ಸರೆಂಡರ್ ಪ್ಯಾಕೇಜನ್ನು ತಿರಸ್ಕರಿಸಿದೆವು. ಗೌರಿ ಮತ್ತು ಶಾಂತಿಗಾಗಿ ನಾಗರಿಕರ ವೇದಿಕೆಯ ಹಿರಿಯರು ಮುಖ್ಯಮಂತ್ರಿಗಳನ್ನು ಬೆನ್ನುಬಿಡದೆ ಫಾಲೋಅಪ್ ಮಾಡಿ ಇಡೀ ದೇಶದಲ್ಲೇ ಇಲ್ಲದ ರೀತಿಯ ಮಾರ್ಪಾಡನ್ನು ಸರ್ಕಾರದ ನೀತಿಯಲ್ಲಿ ತಂದರು. ಸರೆಂಡರ್ ಯೋಜನೆಯನ್ನು ಮುಖ್ಯವಾಹಿನಿಗೆ ಕರೆತರುವ ಯೋಜನೆಯಾಗಿ ಮಾರ್ಪಡಿಸಿದರು. ಕರ್ನಾಟಕದ ಎಲ್ಲಾ ಪ್ರಗತಿಪರ ಸಂಘಟನೆಗಳ ಮತ್ತು ಸಂಗಾತಿಗಳ ಬೆಂಬಲದೊಂದಿಗೆ ೨೦೧೪ ಡಿಸೆಂಬರಿನಲ್ಲಿ ನಾವು ಘನತೆಯೊಂದಿಗೆ ಮುಖ್ಯವಾಹಿನಿಗೆ ಬರಲು ಕಾರಣರಾದರು. ಹೊರಬಂದ ನಂತರ ನಾನು ಮತ್ತು ನಾಗರಾಜ್ ತೊಡಗಿಸಿಕೊಂಡ ಹೋರಾಟಗಳ ಹೆಚ್ಚಿನ ಶ್ರೇಯಸ್ಸು ಗೌರಿಯವರಿಗೆ ಸಲ್ಲುತ್ತದೆ ಎಂದೇ ಹೇಳಬೇಕು. ನಾವಲ್ಲದೆ ನಮ್ಮ ನಂತರ ಇನ್ನು ೭ ಜನ ಮುಖ್ಯವಾಹಿನಿಗೆ ಬಂದಿರುವುದನ್ನೂ ನಾವು ಗಮನಿಸಬೇಕು. ಈ ಎಲ್ಲಾ ಪ್ರಕ್ರಿಯೆಯಲ್ಲಿ ಹಿರಿಯ ಚೇತನಗಳಾದ ಹೆಚ್. ಎಸ್. ದೊರೆಸ್ವಾಮಿ ಮತ್ತು ಎ.ಕೆ. ಸುಬ್ಬಯ್ಯರ ಜೊತೆ ಗೌರಿಯವರ ಪಾತ್ರ ಗುರುತರವಾದುದು. ಸಿ.ಟಿ. ರವಿ ಮತ್ತು ಪಟಾಲಂನ ಟೀಕೆಗಳಿಗೆ ಸೊಪ್ಪು ಹಾಕದೆ ಗೌರಿ ನಮ್ಮ ರಾಜಕೀಯ ಬದುಕಿನ ಹೊಸ ಪರ್ವಕ್ಕೆ ಕಾರಣರಾದರು.

**ಯುವ ದಮನಿಗೆ ಕಿವಿ ನೀಡಿ**

೨೦೧೬ರಲ್ಲಿ ರೋಹಿತ್ ವೇಮುಲ ಪ್ರಾಣಕೊಟ್ಟು ದಮನಿತ ಜನ ಚಳವಳಿಗೆ ಹೊಸ ಜೀವ ಕೊಟ್ಟರು. ರೋಹಿತ್ ಸಹಸ್ರಾರು ಎದೆಗಳಲ್ಲಿ ಸ್ವಾಭಿಮಾನದ ಸ್ಫೋಟಕ್ಕೆ ಕಾರಣರಾದರು. ಈ ಹೊಸ ಗಾಳಿಗೆ ಮೈ ಒಡ್ಡಿದವರಲ್ಲಿ ಗೌರಿ ಸಹ ಒಬ್ಬರು. ರೋಹಿತ್ ಪ್ರತಿರೋಧದ ಹಿನ್ನೆಲೆಯಲ್ಲೇ ಜೆಎನ್‌ಯು ಯುವಜನತೆ ಸರ್ಕಾರಕ್ಕೆ ಸೆಡ್ಡು ಹೊಡೆದುನಿಂತರು. ಕನ್ಹಯ್ಯ, ಉಮರ್ ಖಾಲಿದ್, ಶೆಹ್ಲಾ ಹೊಸತಲೆಮಾರಿನ ಯುವಜನತೆಗೆ ಸ್ಫೂರ್ತಿ ಮತ್ತು ಮಾದರಿಯಾಗುವಂತೆ ಮಾತನಾಡತೊಡಗಿದರು. ಗೌರಿ ತಕ್ಷಣವೇ ಈ ಹೊಸ ತಲೆಮಾರಿನ ಜೊತೆ ತಮ್ಮನ್ನು ಬೆಸೆದುಕೊಂಡರು. ೨೦೧೬ರ ಮಾರ್ಚ್ ತಿಂಗಳಿನಲ್ಲಿ ನಡೆಯುವ 'ಲಂಕೇಶ್ ದಿನ'ವನ್ನು ಈ ಯುವ ಪೀಳಿಗೆಗೆ ಅರ್ಪಿಸಿದರು. ಭಾರತ ಮತ್ತು ಕರ್ನಾಟಕದ ಯುವ ಪೀಳಿಗೆಯನ್ನು ಕರೆದು, ವೇದಿಕೆ ಮೇಲೆ ಕೂರಿಸಿ, ಅನೇಕ ಹಿರಿಯರ ಜೊತೆ ಭಾಷಣ ಕೇಳಲು ವೇದಿಕೆ ಎದುರು ಕುರ್ಚಿಯಲ್ಲಿ ಕೂತರು. ಈ ಗೋಷ್ಠಿಗೆ ನಾನು ಚಾಲನೆ ನೀಡಿದೆ. ಅನೇಕ ವಿದ್ಯಾರ್ಥಿ ಮುಖಂಡರು ಮಾತನಾಡಿದ ನಂತರ ಶೆಹ್ಲಾ ರಶೀದ್ ನಮ್ಮೆಲ್ಲರ ಮನಸೂರೆಗೊಂಡ ಭಾಷಣ ಮಾಡಿದ್ದರು. ಗೌರಿ ಹೊಸ ಕಾಲದ ಯುವ ದನಿಯ ಮಹತ್ವವನ್ನರಿತು ಈ ಕಾರ್ಯಕ್ರಮ ಸಂಘಟಿಸಿದ್ದರು.

**ನವ ದಲಿತ–ದಮನಿತ ಬಂಡಾಯದ ನಿರೀಕ್ಷೆಯಲ್ಲಿ**

ಊನಾ ಹೋರಾಟದ ನಂತರ ಮತ್ತೊಂದು ಸುತ್ತಿನ ಸಂಚಲನ ಆರಂಭವಾಯಿತು. ಜಿಗ್ನೇಶ್ ಮೇವಾನಿ ಯುವ ದಲಿತ ನೇತಾರನಾಗಿ ಹೊರಹೊಮ್ಮಿದರು. ಅದರ ಪ್ರಭಾವದಲ್ಲಿ ಕರ್ನಾಟಕದಲ್ಲಿ ಸಂಚಲನ ಮೂಡಿಸಿದ 'ಚಲೋ ಉಡುಪಿ' ಹೋರಾಟ ನಡೆಯಿತು. ತದ ನಂತರ ಉತ್ತರ ಪ್ರದೇಶದಲ್ಲಿ ಚಂದ್ರಶೇಖರ್ ನೇತೃತ್ವದ "ಜೈ ಭೀಮ್ ಆರ್ಮಿ" ಮುನ್ನೆಲೆಗೆ ಬಂದಿತು. ಈ ಎಲ್ಲಾ ದಲಿತ ದನಿಯ ಜೊತೆಯೂ ಗೌರಿ ಇದ್ದರು. ದಲಿತ ಚಳವಳಿಯನ್ನಷ್ಟೇ ಅಲ್ಲದೆ ಅಂಬೇಡ್ಕರ್ ಜೀವನವನ್ನು ಮತ್ತು ಚಿಂತನೆಯನ್ನು ತನ್ನದಾಗಿಸಿಕೊಳ್ಳುತ್ತಾ ಸಾಗಿದರು. ಬಿವಿಎಸ್ ಯುವಕರ ಜೊತೆಯೂ ಆಪ್ತ ಸ್ನೇಹವನ್ನಿಟ್ಟುಕೊಂಡಿದ್ದರು. ಮೇಲ್ಜಾತಿ ಹಿನ್ನೆಲೆಯ ಕುಟುಂಬದಲ್ಲಿ ಹುಟ್ಟಿದರೂ ಅಲ್ಪಸಂಖ್ಯಾತ ಮತ್ತು ದಲಿತ ಸಮುದಾಯಗಳು ನೋವು ಮತ್ತು ಹೋರಾಟದಲ್ಲಿ ತನ್ನನ್ನು ಗುರುತಿಸಿಕೊಂಡರು. ಕೆಂಪು–ನೀಲಿ–ಹಸಿರು ಒಂದಾಗಬೇಕೆಂದು ತಹತಹಿಸಿದರು.



**ನಾಲ್ಕು ಸಂತಾನದ ಮಾನಸ 'ಮಾಯಿ'**

ಕನ್ಹಯ್ಯ, ಜಿಗ್ನೇಶ್, ಉಮರ್ ಮತ್ತು ಚಂದ್ರಶೇಖರ ಅವರನ್ನು ತನ್ನ ಮಕ್ಕಳೆಂದು ಕರೆಯುತ್ತಿದ್ದರು. ಕೆಲವರಿಗೆ ಕಿರಿಕಿರಿಯೆನಿಸುವಷ್ಟು ಮಟ್ಟಕ್ಕೆ ಇದನ್ನು ಬರೆದುಕೊಳ್ಳುತ್ತಿದ್ದರು ಮತ್ತು ಅವರುಗಳು ಬಂದರೆ ಅವರೊಟ್ಟಿಗೆ ಓಡಾಡುತ್ತಿದ್ದರು. ಆದರೆ ಈ ಖಾಸಗಿ ಎನಿಸುವ ವರ್ತನೆಯ ಹಿಂದೆ ಬಲವಾದ ಭವಿಷ್ಯದ ಬಯಕೆ ಇತ್ತು. ಈ ಯುವ ಪೀಳಿಗೆಯೇ ಭಾರತದ ಬಹುತ್ವವನ್ನು ಕಾಪಾಡಬಲ್ಲದು ಎಂಬ ನಂಬಿಕೆ ಅವರದಾಗಿತ್ತು. ನಾಲ್ಕು ಮಕ್ಕಳು ಭರವಸೆಯ ಯುವ ಪೀಳಿಗೆಯ ಸಂಕೇತವಾಗಿದ್ದರು. ಭವಿಷ್ಯದ ಜೊತೆ ಬದುಕಲು ಬಯಸಿದ್ದರು. ತನ್ನಿಂದಾಗದ ಹೊಸ ಸಮಾಜದ ನಿರ್ಮಾಣವನ್ನು ಈ ಮಕ್ಕಳ ಮೂಲಕ ಕಾಣಲು ಬಯಸುತ್ತಿದ್ದರು.

**ಕಾಲದ ಕರೆ ನಮ್ಮ ಗೌರಿ**

ಗೌರಿ ನಿಲ್ಲದ ನೀರಾಗಿದ್ದರು, ಕಾಲದ ಕರೆಯಾಗಿದ್ದರು, ಭವಿಷ್ಯದ ಬಯಕೆಯಾಗಿದ್ದರು, ಸಂದಿಗ್ಧ ಸಂದರ್ಭದ ಸ್ಥೈರ್ಯವಾಗಿದ್ದರು, ಕಷ್ಟಕಾಲದ ಭರವಸೆಯಾಗಿದ್ದರು, ಹೋರಾಟದ ಹೊಸಗಾಳಿಯಲ್ಲಿ ಹಾರಾಡುವ ವಸಂತದ ಚಿಗುರಾಗಿದ್ದರು.

ಗೌರಿ ಕಾಲದ ಕರೆಗೆ ಓಗೊಟ್ಟು ಬದುಕಿದರು. ಹಾಗಾಗಿಯೇ ಸತ್ತರೂ ಶಕ್ತಿಯಾಗಿ ನಮ್ಮ ಮುಂದೆ ನಿಂತಿದ್ದಾರೆ. ಈಗ ಗೌರಿ ನಮಗೆ ಕರೆ ನೀಡುತ್ತಿದ್ದಾರೆ. "ರಾಜಿ ಮಾಡಿಕೊಳ್ಳದೆ, ಹಿಂದಡಿ ಇಕ್ಕದೆ, ಒಂದಾಗಿ." "ಒಂದಾಗಿ ಹೋರಾಡಿ." ಈ ಕಾಲದ ಕರೆಗೆ ಓಗೊಟ್ಟು ಹೊಸ ಪ್ರವಾಹದ ಹುಟ್ಟಿಗೆ ಕಾರಣವಾಗುತ್ತೀವೋ ಅಥವಾ ಬಗೆಹರಿಯದ ಅವೇ ಸವಕಲು ಸೋಕಾಲ್ಡ್ ಸೈದ್ಧಾಂತಿಕ ವಾಗ್ವಾದಗಳಲ್ಲೇ ಕಾಲಹರಣ ಮಾಡುತ್ತೀವೋ ಎಂಬ ಆಯ್ಕೆ ಈಗ ನಮ್ಮ ಮುಂದಿದೆ.

ನೂರ್ ಶ್ರೀಧರ್
ಬೆಂಗಳೂರು

# ಶುಕ್ರ – ಮಂಗಳ ಸಮಾಗಮ

ಮುಂಜಾವಿನ ಆಕಾಶದಲ್ಲಿ ಪೂರ್ವದಲ್ಲಿ ಕಾಣುವ ಪ್ರಖರ ಚುಕ್ಕೆಯೇ ಶುಕ್ರ. ಸೂಕ್ಷ್ಮವಾಗಿ ಗಮನಿಸಿದರೆ ಇದರ ಪಕ್ಕ ಕಾಣುವ ಕೆಂಪು ಚುಕ್ಕೆ ಮಂಗಳವನ್ನೂ ಗುರುತಿಸಬಹುದು. ತಿಂಗಳ ಮೊದಲ ವಾರ ಇವೆರಡರ ಆಟವನ್ನು ತಪ್ಪದೇ ನೋಡಿ. ೬ರಂದು ಇವೆರಡರ ನಡುವೆ ಕನಿಷ್ಠ ಕೋನವಿದೆ. ೫, ೬ ಮತ್ತು ೭ ರಂದು ಚಿತ್ರ ತೆಗೆದಿಟ್ಟುಕೊಂಡರೆ, ಅವುಗಳ ಚಲನೆಯನ್ನು ಗುರುತಿಸಬಹುದು. ಮಂಗಳದ ಚಲನೆ ನಿಧಾನ; ಶುಕ್ರದ್ದು ವೇಗ ಎಂದೂ ತಿಳಿಯಬಹುದು.

ಆಟ ಮುಂದುವರೆಯುತ್ತದೆ; ೧೮ – ೧೯ರ ಅವಧಿಯಲ್ಲಿ ಚಂದ್ರ ಇವೆರಡರ ಸಮೀಪ ಹಾದುಹೋಗುವ ದೃಶ್ಯವೂ ಕ್ಯಾಮರಾಗಳಿಗೆ ಕೆಲಸ ಒದಗಿಸಬಲ್ಲುದು.

ಈ ತಿಂಗಳ ಸಂಜೆಯ ಆಕಾಶದಲ್ಲಿ ಗ್ರಹಗಳೇ ಇಲ್ಲವೇನೋ ಎಂದೆನಿಸುತ್ತದೆ. ಪಶ್ಚಿಮ ದಿಗಂತದ ಅಂಚಿಗೆ ಸರಿದ ಗುರು ಸಂಜೆಗೆಂಪಿನಲ್ಲಿ ಕಾಣದಂತಾಗುತ್ತದೆ. ೨೭ರಂದು ಸೂರ್ಯನೊಡನೆ ಯುತಿ.

ಶನಿ ಅಷ್ಟೇನೂ ಪ್ರಕಾಶವಾಗಿರದಿದ್ದರೂ ಗುರುತಿಸಬಹುದು. ಅದು ಇರುವ "ರಾಶಿ" ಯಾವುದು? ಇದನ್ನು ತಿಳಿಯಲು ನಕ್ಷತ್ರ ಲೋಕದ ಪರಿಚಯ ಮಾಡಿಕೊಳ್ಳೋಣ. ಗ್ರಹಗಳಿಲ್ಲದಂತೆ ಕಾಣುವ ಆಕಾಶ ನಕ್ಷತ್ರಗಳಿಂದಲೇ ಶ್ರೀಮಂತವಾಗಿ ಕಾಣುತ್ತದೆ. ನೆತ್ತಿಯ ಮೇಲೆಯೇ ಕಾಣುವ ಭೀಮ (ಹರ್‌ಕ್ಯುಲಿಸ್) ನೆತ್ತಿಯಿಂದ ಸ್ವಲ್ಪ ದಕ್ಷಿಣಕ್ಕೆ ಭವ್ಯವಾದ ವೃಶ್ಚಿಕ, ಅದರ ಪಕ್ಕದ ಧನು ಇವುಗಳ ಪರಿಚಯಕ್ಕೆ ಇದು ಸದವಕಾಶ. ಆಕಾಶಗಂಗೆ ಈ ಭಾಗದಲ್ಲಿ ಮತ್ತು ಗರುಡ ಮತ್ತು ರಾಜಹಂಸ ಪುಂಜಗಳ ಮೂಲಕ ಹರಿದಿದೆ. ಗೆಲಾಕ್ಸಿಯ ಕೇಂದ್ರ ಈ ಭಾಗದಲ್ಲಿರುವುದರಿಂದ ಅಸಂಖ್ಯಾತ ನೆಬ್ಯುಲಾಗಳು, ನಕ್ಷತ್ರ ಗುಚ್ಛಗಳು ಇಲ್ಲಿವೆ. ನಕ್ಷತ್ರ ಗುಚ್ಛ ಎಂದರೆ ಅರ್ಧ ಡಿಗ್ರಿಗಿಂತಲೂ ಕಡಿಮೆ ವ್ಯಾಪ್ತಿಯಲ್ಲಿ ಸುಮಾರು ೧೦೦೦ ಅಥವಾ ೧೦೦೦೦ ನಕ್ಷತ್ರಗಳೇ ಒತ್ತಟ್ಟಿಗೆ ಸೇರಿಕೊಂಡಿರುವುದರಿಂದ ಬರಿಗಣ್ಣಿಗೆ ಹತ್ತಿಯ ಪದರದ ಹಾಗೆ ಅಂದರೆ ನೆಬ್ಯುಲಾದ ಹಾಗೆಯೇ ಕಾಣಿಸುತ್ತವೆ. ದುರ್ಬೀನು ಅಥವಾ ದೂರದರ್ಶಕದಿಂದ ನೋಡಿದಾಗ ಮಾತ್ರ ಬಿಡಿಬಿಡಿಯಾಗಿ ನಕ್ಷತ್ರಗಳು ಕಾಣಬಹುದು. ನೆಬ್ಯುಲಾ ಎಂಬುದು ಅನಿಲ ಮತ್ತು ಅಯಾಣುಗಳ ಮೋಡ. ದುರ್ಬೀನು ದೂರದರ್ಶಕಗಳಿಂದಲೂ ಮೋಡದ ಹಾಗೆಯೇ ಕಾಣುತ್ತದೆ. ಇಂತಹ ವೈವಿಧ್ಯಮಯ ಕಾಯಗಳೆಲ್ಲ ವೃಶ್ಚಿಕ ಮತ್ತು ಧನು ರಾಶಿ (ನಕ್ಷತ್ರಪುಂಜ)ಗಳಲ್ಲಿ ಹೇರಳವಾಗಿವೆ. ಇವುಗಳಿಗೆ ಎಂ ಕಾಯಗಳು ಎಂಬ ಹೆಸರೂ ಇದೆ. ಇವನ್ನು ಮೊದಲು ಪಟ್ಟಿ ಮಾಡಿದಾತ ಚಾರ್ಲ್ಸ್ ಮೆಸಿಯೆ. ಅವನ ಪಟ್ಟಿಯ ನಮೂದು ಸಂಖ್ಯೆಯಿಂದಲೇ ಇವನ್ನು ಗುರುತಿಸಲಾಗುತ್ತದೆ.




ವೃಶ್ಚಿಕ ಮತ್ತು ಧನು ಎರಡರ ನಡುವೆ ಸ್ವಲ್ಪ ಉತ್ತರಕ್ಕಿದೆ – ಉರಗಧರ (ಒಫಿಯೂಕಸ್). ವಾಸ್ತವದಲ್ಲಿ ಸೂರ್ಯ, ಚಂದ್ರ ಮತ್ತು ಗ್ರಹಗಳೆಲ್ಲವೂ ಈ ಪುಂಜದ ಮೂಲಕ ಹಾದು ಹೋಗುತ್ತವೆ. ಆದರೆ ಇದು ರಾಶಿ ಚಕ್ರದಲ್ಲಿಲ್ಲ. ಈಗ ಶನಿ ಈ ಪುಂಜದ ವ್ಯಾಪ್ತಿಯೊಳಗಿದೆ. ೨೫ರಂದು ಚಂದ್ರ ಶನಿಯ ಪಕ್ಕ ಕಂಡಾಗ ಅದು ವೃಶ್ಚಿಕದಲ್ಲಾಗಲೀ ಧನುವಿನಲ್ಲಾಗಲೀ ಇರುವುದಿಲ್ಲ. ಉರಗಧರದಲ್ಲಿ ಇರುತ್ತದೆ.

ಬುಧ ಗ್ರಹ ತಿಂಗಳ ಮೊದಲಲ್ಲಿ ಮುಂಜಾವಿನಲ್ಲಿ ಕಾಣುವಂತಿದ್ದರೂ ಅರುಣೋದಯದ ಕೆಂಪಿನಲ್ಲಿ ಕರಗಿಹೋಗುತ್ತದೆ. ತಿಂಗಳ ಕೊನೆಗೆ ಸಂಜೆಯ ಆಕಾಶಕ್ಕೆ ಬರುತ್ತದೆ. ೮ರಂದು ಸೂರ್ಯನ ಆಚೆ ಬದಿಯಿಂದ ಹಾದು ಬರುತ್ತದೆ. ಸೋಹೋ ಬಾಹ್ಯಾಕಾಶ ವೀಕ್ಷಣಾಲಯದ ಸೂರ್ಯನ ಚಿತ್ರಗಳನ್ನು ೮ ರಿಂದ ೧೨ರ ಅವಧಿಯಲ್ಲಿ ನೋಡಿದರೆ ಬುಧದ ಚಲನೆ ತಿಳಿಯುತ್ತದೆ. ಅಷ್ಟೇ ಅಲ್ಲ; ಸೂರ್ಯನ ಪಕ್ಕದಲ್ಲಿಯೇ ಚಿತ್ರಾ ನಕ್ಷತ್ರವೂ ಕಾಣುತ್ತದೆ. ಈ ಕಾರಣದಿಂದ ಈ ತಿಂಗಳ "ಮಳೆ" ನಕ್ಷತ್ರ ಚಿತ್ರಾ ಎಂದು ಚಾಂದ್ರಮಾನ ಪಂಚಾಂಗಗಳಲ್ಲಿ ನಮೂದಿತವಾಗಿರುತ್ತದೆ. ೧೮ ರಂದು ಗುರು ಮತ್ತು ಬುಧ ಕನಿಷ್ಠ ಕೋನದಲ್ಲಿರುವುದನ್ನು ಸೋಹೋ ಚಿತ್ರಗಳಲ್ಲಿ ಮಾತ್ರ ನೋಡುವುದು ಸಾಧ್ಯ. ತಿಂಗಳ ಕೊನೆಗೆ ಬುಧ ಇನ್ನೂ ಎತ್ತರಕ್ಕೆ ಏರಿದಾಗ ಸುಲಭವಾಗಿ ಗುರುತಿಸಬಹುದು.

ಹ್ಯಾಲೀ ಧೂಮಕೇತುವಿನ ತುಣುಕುಗಳು ಭೂಮಿಯನ್ನು ಪ್ರವೇಶಿಸಿ ಉರಿದು ಹೋಗುವ ಉಲ್ಕಾವೃಷ್ಟಿ ಈ ತಿಂಗಳು ನಡೆಯಲಿದೆ. ಇದು ಮಹಾ ವ್ಯಾಧ ನಕ್ಷತ್ರಪುಂಜದಿಂದ ಹೊರಟಂತೆ ಕಾಣುವುದರಿಂದ ಇದಕ್ಕೆ ಒರಿಯನಿಡ್ಸ್ ಎಂದು ಹೆಸರಿದೆ. ತಿಂಗಳುದ್ದಕ್ಕೂ ಮುಂಜಾವಿನಲ್ಲಿ ಹತ್ತಿಪ್ಪತ್ತು ಉಲ್ಕೆಗಳು ಕಾಣಬಹುದಾದರೂ ೨೧ರಂದು ಗರಿಷ್ಠ ಸಂಖ್ಯೆಯಲ್ಲಿ ಕಾಣುತ್ತವೆ.



೨೪ರ ಸಂಜೆ ಶನಿ ಮತ್ತು ಚಂದ್ರ ಉರಗಧರ ನಕ್ಷತ್ರಪುಂಜದಲ್ಲಿ

**ಖಗೋಳ ದಿನಚರಿ**

೬ ಶುಕ್ರ – ಮಂಗಳ ನಡುವೆ ಕನಿಷ್ಠ ಕೋನ ಹುಣ್ಣಿಮೆ
೮ ಬುಧ ಗ್ರಹದ ಯುತಿ
೯ ಭೂಮಿ ಚಂದ್ರ ನಡುವೆ ಕನಿಷ್ಠ ದೂರ ರೋಹಿಣಿ ಆಚ್ಛಾದನೆ (ಭಾರತಕ್ಕೆ ಕಾಣುವುದಿಲ್ಲ)
೧೨ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡು ರಾತ್ರಿಗೆ)
೧೫ ಮಘ ನಕ್ಷತ್ರದ ಆಚ್ಛಾದನೆ (ಭಾರತಕ್ಕೆ ಕಾಣುವುದಿಲ್ಲ)
೧೭ ಚಂದ್ರ ಮಂಗಳ ಜೋಡಿ (ಮುಂಜಾವು)
೧೮ ಶುಕ್ರ ಮಂಗಳ ಜೋಡಿ (ಮುಂಜಾವು) ಬುಧ – ಗುರು ಜೋಡಿ (ಸಂಜೆ)
೨೦ ಅಮಾವಾಸ್ಯೆ
೨೧ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೨೫ ಭೂಮಿ ಚಂದ್ರ ನಡುವೆ ಗರಿಷ್ಠ ದೂರ
೨೬ ಗುರುಗ್ರಹದ ಯುತಿ
೨೭ ಚಾಂದ್ರಮಾಸದ ಮೊದಲ ಪಾದ


**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

‘ಹಿಂದೂಗಳು ಇರುವೆಗೆ ಸಕ್ಕರೆ ನೀಡುವ, ಆದರೆ ಮನುಷ್ಯರಿಗೆ ನೀರು ಕೊಡದೆ ಕೊಲ್ಲುವ ಜನ. ಇವರು ಡಾಂಭಿಕರು. ಹಿಂದೂಧರ್ಮ ಹೆಸರಿಗೆ ಮಾತ್ರ ಸಹನೆ ತೋರಿಸುತ್ತದೆ. ಅಂತರಾಳದಲ್ಲಿ ಅದು ಕ್ರೂರಿಯೂ, ಅಸಹ್ಯಕರವೂ ಆಗಿದೆ. ಇಷ್ಟೆಲ್ಲಾ ಕೊಳಕುಗಳಿದ್ದರೂ ತಮ್ಮ ಧರ್ಮ ಕೀಳು ಧರ್ಮ ಎಂದು ಹಿಂದೂಗಳು ಒಪ್ಪಿಕೊಳ್ಳುವುದಿಲ್ಲ. ಬದಲಿಗೆ ಅದು ದೇವರಿಂದ ಸೃಷ್ಟಿಯಾದ ಧರ್ಮವೆಂದು ಹೇಳುತ್ತಾರೆ.’ ಹೀಗೆ ಹೇಳಿ ಅಂಬೇಡ್ಕರರು ದಲಿತರನ್ನು ಹಿಂದೂಧರ್ಮ ತ್ಯಜಿಸಲು ಉತ್ತೇಜನ ನೀಡುತ್ತಾರೆ. ಅಂಬೇಡ್ಕರರ ಮಾತುಗಳು ಕೇವಲ ಹೇಳಿಕೆಗಳಲ್ಲ. ವೈಯಕ್ತಿಕ ನೋವು, ಒಂಟಿತನ, ತನ್ನ ಸಮುದಾಯದ ನರಕಸದೃಶ ಬದುಕನ್ನು ನೋಡಿ ಮೂಡಿದ ಅನುಭವೋಕ್ತಿಗಳು.

# ಅಂಬೇಡ್ಕರ್ ಮತ್ತು ಗಾಂಧಿ

ಎಸ್. ಮಾಲತಿ



ಅಂಬೇಡ್ಕರ್ ಮತ್ತು ಗಾಂಧಿ ಇಬ್ಬರೂ ನನ್ನ ತಲೆಮಾರಿನವರು ಹುಟ್ಟುವುದಕ್ಕಿಂತ ಮೊದಲು ಹುಟ್ಟಿ, ಬದುಕಿ, ಬಾಳಿ ಹೋರಾಟಗಳನ್ನು ನಡೆಸಿ, ಜನಮಾನಸದಲ್ಲಿ ಇಂದಿಗೂ ಹೋರಾಟದ ಸಂಕೇತಗಳಾಗಿ ಬದುಕಿ ಉಳಿದಿರುವವರು. ಇವರಿಬ್ಬರೂ ಎಂತಹ ಹೋರಾಟಗಳನ್ನು ಮಾಡಿದ್ದರು ? ಇವರಿಬ್ಬರ ನಡುವೆ ಸಾಮ್ಯವಿತ್ತೇ ಅಥವಾ ವೈಷಮ್ಯವಿತ್ತೇ ? ಒಬ್ಬರನ್ನೊಬ್ಬರು ಯಾವ ರೀತಿ ಪ್ರಭಾವಿಸಿದ್ದರು ? ಇಂತಹ ಪ್ರಶ್ನೆಗಳನ್ನು ನಾವು ಇಂದು ವಿಶ್ಲೇಷಿಸಿದರೆ ಅಂಬೇಡ್ಕರ್‌ವಾದಿಗಳು ಮತ್ತು ಗಾಂಧೀವಾದಿಗಳು ಪರಸ್ಪರ ಗುಮಾನಿಯಿಂದ ನೋಡಿಕೊಳ್ಳುವುದಕ್ಕೆ ಕಾರಣಗಳು ಸ್ಪಷ್ಟವಾಗಬಹುದೇನೋ....

ಅಂಬೇಡ್ಕರ್ ಹುಟ್ಟಿದ್ದು ಮಹಾರಾಷ್ಟ್ರದಲ್ಲಿ. ರಾಮ್‌ಜೀ ಮತ್ತು ಭೀಮಾಬಾಯಿಯ ೧೪ನೇ ಮಗನಾಗಿ ಏಪ್ರಿಲ್ ೧೪, ೧೮೯೧ರಂದು ಅಂಬೇಡ್ಕರ್ ಜನಿಸಿದರು. ಆರು ವರ್ಷದವರಿರುವಾಗ ತಾಯಿಯನ್ನು ಕಳೆದುಕೊಂಡರು. ಇವರು ಜಾತಿಯಲ್ಲಿ ಮಹಾರರು – ಅಸ್ಪೃಶ್ಯರು. ಗಾಂಧಿಯವರು ೧೮೬೯ರಲ್ಲಿ ಗುಜರಾತಿನ ಪೋರ್‌ಬಂದರಿನಲ್ಲಿ ಜನಿಸಿದರು. ಇವರದು ಬನಿಯಾ ಜಾತಿ. ಇವರು ಕರಮಚಂದ್ ಮತ್ತು ಪುತಳೀಬಾಯಿಯವರ ಪುತ್ರ.

ಅಂಬೇಡ್ಕರ್ ಬಡಕುಟುಂಬದಲ್ಲಿ ಜನಿಸಿದರೆ, ಗಾಂಧಿಯವರು ದಿವಾನರ ಮನೆತನದಲ್ಲಿ ಶ್ರೀಮಂತ ಪರಿಸರದಲ್ಲಿ ಬೆಳೆದರು. ಅಂಬೇಡ್ಕರರು "ಅಸ್ಪೃಶ್ಯ"ರಾದುದರಿಂದ ಬಾಲ್ಯದಿಂದಲೂ ಹಲವು ಅವಮಾನಗಳನ್ನುಂಡು ಬೆಳೆದರು. ಗಾಂಧಿ ಅವಮಾನಗಳನ್ನುಂಡದ್ದು ಭಾರತದಲ್ಲಲ್ಲ, ದಕ್ಷಿಣ ಆಫ್ರಿಕೆಗೆ ಕೆಲಸಕ್ಕಾಗಿ ಹೋದಾಗ. ಬಿಳಿಯರ ಸಾಮ್ರಾಜ್ಯಶಾಹಿ ಆಡಳಿತದಲ್ಲಿ ಗಾಂಧೀಜಿ ಕರಿಯನೆಂದು ರೈಲ್ವೆ ಬೋಗಿಯಿಂದ ಹೊರಗೆ ತಳ್ಳಲ್ಪಟ್ಟರು, ಸಾರೋಟಿನಲ್ಲಿ – ಮೊದಲ ದರ್ಜೆಯ ಟಿಕೆಟ್ ಇದ್ದರೂ ಗಾಡಿ ಹೊಡೆಯುವವನ ಕಾಲ ಕೆಳಗೆ ಕೂರಿಸಲ್ಪಟ್ಟರು. ಹೀಗೆಯೇ, ಅಂಬೇಡ್ಕರರು ತಾವು ಹುಟ್ಟಿದ ದೇಶದಲ್ಲಿಯೇ ಅಸ್ಪೃಶ್ಯರೆಂಬ ಕಾರಣಕ್ಕಾಗಿ ಚಲಿಸುವ ಗಾಡಿಯಿಂದ ಇಳಿಸಲ್ಪಟ್ಟರು, ಬಾಯಾರಿಕೆ ಇಂಗಿಸಲು ಸಾರ್ವಜನಿಕ ಸ್ಥಳದಲ್ಲಿದ್ದ ನೀರು ಕುಡಿದಾಗ ಬಡಿಯಲ್ಪಟ್ಟರು, ಕ್ಷೌರಿಕನಿಂದ ಹೇರ್‌ಕಟ್ ಮಾಡುವುದಿಲ್ಲವೆಂದು ಹೇಳಿಸಿಕೊಂಡರು.

ಅಂಬೇಡ್ಕರ್ ಮತ್ತು ಗಾಂಧಿ ಇಬ್ಬರದೂ ಬಾಲ್ಯವಿವಾಹ. ಅಂಬೇಡ್ಕರ್ ೧೭ ವರ್ಷದವರಿರುವಾಗ ರಮಾಬಾಯಿಯನ್ನು ಮದುವೆಯಾದರು. ಗಾಂಧಿ ೧೩ ವರ್ಷದವರಿರುವಾಗ ಕಸ್ತೂರಿ ಬಾ ಅವರನ್ನು ಮದುವೆಯಾದರು.

ಬಾಲ್ಯದಲ್ಲಿ ಅಂಬೇಡ್ಕರ್ ಅತ್ಯಂತ ಶಿಸ್ತಿನ ಜೀವನ ನಡೆಸಿದ್ದರು. ಇದಕ್ಕೆ ಕಾರಣವೆಂದರೆ ತಂದೆ ರಾಮ್‌ಜಿಯ ಶಿಸ್ತಿನ ಜೀವನ. ತಂದೆ ಜ್ಯೋತಿಬಾ ಫುಲೆಯವರ ಅಭಿಮಾನಿಯೂ, ಕಬೀರ್ ಪಂಥದ ಅನುಯಾಯಿಯೂ ಆಗಿದ್ದರು. ಹಾಗಾಗಿ, ಮನೆಯಲ್ಲಿ ಕಬೀರರ ಹಾಡುಗಳನ್ನೂ, ಭಕ್ತಿಗೀತೆಗಳನ್ನೂ ಸಾಮೂಹಿಕವಾಗಿ ಹಾಡುವುದು ನಿತ್ಯಕರ್ಮವಾಗಿತ್ತು.

ಗಾಂಧೀಜಿ ಸನಾತನ ಹಿಂದೂಧರ್ಮದ ನೆರಳಿನಲ್ಲಿ ಬೆಳೆದವರು. ಮನೆಯಲ್ಲಿ ರಾಮಾಯಣ, ಮಹಾಭಾರತ, ಭಗವದ್ಗೀತೆಗಳ ಪಠಣ ನಡೆಯುತ್ತಿತ್ತು. ತಾಯಿ ಪುತಳೀಬಾಯಿ ಅತ್ಯಂತ ಧಾರ್ಮಿಕ ಹೆಂಗಸು. ಉಪವಾಸ–ವ್ರತಗಳ ಪಾಲನೆಯಲ್ಲಿ ಎತ್ತಿದ ಕೈ.

ಅಂಬೇಡ್ಕರ್ ಭಾರತದಲ್ಲಿ ಬಿ.ಎ. ಮಾಡಿ, ಅಮೆರಿಕಾದಲ್ಲಿ ಎಂ.ಎ. ಮಾಡಿದರು. ತಮ್ಮ ಪ್ರೌಢ ಪ್ರಬಂಧವನ್ನೂ ಬರೆದರು. ನಂತರ ಲಂಡನ್ನಿನಲ್ಲಿ ಬ್ಯಾರಿಸ್ಟರ್ ಪದವಿಯನ್ನೂ ಪಡೆದರು.

ಅಂಬೇಡ್ಕರ್ ತುಂಬ ಬುದ್ಧಿವಂತ ವಿದ್ಯಾರ್ಥಿಯಾಗಿದ್ದರು. ಆದರೆ, ಗಾಂಧಿ ಅತಿ ಸಾಮಾನ್ಯ ವಿದ್ಯಾರ್ಥಿಯಾಗಿದ್ದರು. ಲಂಡನ್ನಿಗೆ ಹೋಗಿ ಬ್ಯಾರಿಸ್ಟರ್ ಪದವಿ ಪಡೆದುಬಂದರು. ಸಮುದ್ರ ದಾಟಿದ್ದರಿಂದ ಅವರು ಅವರ ಜಾತಿಯಿಂದ ಬಹಿಷ್ಕೃತರೂ ಆಗಬೇಕಾಯಿತು.

ಬ್ಯಾರಿಸ್ಟರ್ ಆಗಿ ಭಾರತಕ್ಕೆ ಬಂದ ಅಂಬೇಡ್ಕರ್ ಖ್ಯಾತ ವಕೀಲರೆನ್ನಿಸಿಕೊಂಡರು. ಅದೇ, ಗಾಂಧೀಜಿ ವಕೀಲರಾಗಿ ಜಯಶಾಲಿಯಾಗಲಿಲ್ಲ. ಅಸ್ಪೃಶ್ಯರ ವಿಮೋಚನೆಗಾಗಿ ಪಣತೊಟ್ಟ ಅಂಬೇಡ್ಕರ್ ಹಲವು ಸಂಘಟನೆಗಳನ್ನು ಹುಟ್ಟುಹಾಕಿದರು. ಚುನಾವಣೆಗೂ ನಿಂತರು. ಒಮ್ಮೆ ಗೆದ್ದರೆ ಮತ್ತೊಮ್ಮೆ ಸೋತರು. ನೆಹರು ಮಂತ್ರಿಮಂಡಲದಲ್ಲಿ ಕಾನೂನು ಮಂತ್ರಿಯಾದರು. ಸಂವಿಧಾನದ ಕರ್ತೃ ಆದರು.

೧೯೨೪ರಲ್ಲಿ ಅಂಬೇಡ್ಕರರು ಬಹಿಷ್ಕೃತ ಹಿತಕಾರಿಣಿ ಸಭಾವನ್ನು ಆರಂಭಿಸಿದರು. ೧೯೩೬ರಲ್ಲಿ ಇಂಡಿಪೆಂಡೆಂಟ್ ಲೇಬರ್ ಪಾರ್ಟಿ ಆರಂಭಿಸಿದರು. ೧೯೪೨ರಲ್ಲಿ ಇಂಡಿಪೆಂಡೆಂಟ್ ಲೇಬರ್ ಪಾರ್ಟಿಯು ಆಲ್ ಇಂಡಿಯಾ ಶೆಡ್ಯೂಲ್ಡ್ ಕಾಸ್ಟ್ ಫೆಡರೇಶನ್ ಎಂದಾಯಿತು. ಕೊನೆಯಲ್ಲಿ ರಿಪಬ್ಲಿಕನ್ ಪಾರ್ಟಿ ಆಫ್ ಇಂಡಿಯಾ ಎಂಬ ರಾಜಕೀಯ ಪಕ್ಷವನ್ನು ಕಟ್ಟಿದರು. ತನ್ನ ಜನಾಂಗದ ಬಡತನ, ಹಸಿವೆ, ಅಸ್ಪೃಶ್ಯತೆ, ಕೀಳರಿಮೆಗಳಿಗೆ ರಾಜಕೀಯ ಶಕ್ತಿಯೊಂದೇ ಪರಿಹಾರ ಎಂದು ಹೇಳುತ್ತಿದ್ದ ಅಂಬೇಡ್ಕರರು ರಾಜಕೀಯದಲ್ಲಿ ಸಕ್ರಿಯರಾಗಿದ್ದರು. ಆದರೆ, ಗಾಂಧಿ ರಾಜಕೀಯ ಸೂತ್ರ ಹಿಡಿದವರ ಗುರುವಾಗಿ ಇದ್ದುಕೊಂಡು ಕೊನೆಯತನಕ ಸಮಾಜ ಸುಧಾರಕನಾಗಿಯೇ ದುಡಿದರು. ರಾಜಕೀಯವನ್ನು ಹಿನ್ನೆಲೆಯಲ್ಲಿದ್ದುಕೊಂಡು ನಿಯಂತ್ರಿಸಿದರು.

ಗಾಂಧೀಜಿ ರೂಪುಗೊಂಡಿದ್ದು ದಕ್ಷಿಣ ಆಫ್ರಿಕಾದಲ್ಲಿ. ಅಲ್ಲಿ ಅವರು ಅವಮಾನಿಸಲ್ಪಟ್ಟರು, 'ಕೂಲಿ ಬ್ಯಾರಿಸ್ಟರ್' ಎಂದು ಕರೆಸಿಕೊಂಡರು. ಆದರೆ ಬಂಗಾಳಿ, ತಮಿಳು, ತೆಲುಗು, ಮುಸ್ಲಿಂ, ಸಿಖ್ ಮುಂತಾದ ಎಲ್ಲ ಭಾರತೀಯ ವಲಸೆಗಾರರ ಹಕ್ಕುಗಳಿಗಾಗಿ ಪ್ರಾಣವನ್ನೇ ಪಣಕ್ಕಿಟ್ಟು ದುಡಿದು, 'ಸತ್ಯಾಗ್ರಹ' ಎಂಬ ಅಸ್ತ್ರವನ್ನು ಹುಡುಕಿದ್ದು ಅಲ್ಲೇ.

ಅಂಬೇಡ್ಕರ್ 'ಮೂಕ ನಾಯಕ' ಎಂಬ ಪತ್ರಿಕೆಯನ್ನು ಆರಂಭಿಸಿದರು. ಬೇರೆ ಬೇರೆ ಪತ್ರಿಕೆಗಳಿಗೆ ಸಾವಿರಾರು ಲೇಖನಗಳನ್ನು ಬರೆದರು. ಗಾಂಧಿ 'ಇಂಡಿಯನ್ ಒಪಿನಿಯನ್' ಪತ್ರಿಕೆಯನ್ನು ಆರಂಭಿಸಿ ಸಾವಿರಾರು ಲೇಖನಗಳನ್ನು ಬರೆದರು. ನಂತರ ಅಂಬೇಡ್ಕರರ ಅಸ್ಪೃಶ್ಯತೆಯ ವಿರುದ್ಧದ ತೀವ್ರ ಹೋರಾಟಗಳಿಂದ ಪ್ರಭಾವಿತರಾಗಿ 'ಹರಿಜನ' ಎಂಬ ಪತ್ರಿಕೆಯನ್ನೂ ಆರಂಭಿಸಿದರು.

ಅಂಬೇಡ್ಕರರ ಅವಿರತ ಹೋರಾಟ, ತನ್ನ ಜನಾಂಗಕ್ಕಾಗುತ್ತಿರುವ ಅನ್ಯಾಯ, ಪುರೋಹಿತಶಾಹಿಯ ಕ್ರೂರ ವರ್ತನೆ, ವೈಯಕ್ತಿಕವಾಗಿ ಅನುಭವಿಸಿದ ಬಡತನ, ಅಸಹಾಯಕತೆ, ಅಸಮಾನತೆ, ಅಸ್ಪೃಶ್ಯತೆ, ಅವಮಾನಗಳಿಂದ ಜ್ಯೋತಿಬಾ ಫುಲೆ – ಕಬೀರರಂತಹ ಸುಧಾರಕರು–ಸಂತರಿಂದ ಆಳವಾದ ಪ್ರಜ್ಞೆಯು ಉದ್ದೀಪನೆಗೊಂಡಿತು. ಗಾಂಧೀಜಿಯವರ ಅವಿರತ ಹೋರಾಟ ಸನಾತನ ಹಿಂದೂಧರ್ಮದ ಪಾಲನೆಯಿಂದ, ಪಿತೃಭಕ್ತಿ–ಮಾತೃಭಕ್ತಿ, ವ್ರತ–ನೇಮ–ನಿಷ್ಠೆ ಉಪವಾಸಗಳಿಂದ ನೈತಿಕ ಶಕ್ತಿಯಾಗಿ ಉದ್ದೀಪನೆಗೊಂಡಿತು. ಒಂಭತ್ತು ವರ್ಷದ ಬಾಲಕ ಗಾಂಧಿ 'ಸತ್ಯ ಹರಿಶ್ಚಂದ್ರ' ನಾಟಕವನ್ನು ನೋಡಿ, ವಾರಗಟ್ಟಲೆ ಖಿನ್ನನಾಗಿ ಕಣ್ಣೀರು ಸುರಿಸಿ, ತಾನೂ ಏನೇ ಅಡಚಣೆ ಬಂದರೂ ಹರಿಶ್ಚಂದ್ರನಂತೆ ಸತ್ಯದ ಹುಡುಕಾಟ ನಡೆಸಬೇಕೆಂದು ಅಷ್ಟು ಸಣ್ಣ ವಯಸ್ಸಿನಲ್ಲೇ ನಿರ್ಧರಿಸಿದ್ದು ಅವರ ವ್ಯಕ್ತಿತ್ವವನ್ನರಿಯಲು ನಮಗೆ ಸಹಾಯ ಮಾಡುತ್ತದೆ.

೧೯೨೭ರಲ್ಲಿ ಅಂಬೇಡ್ಕರ್ ಮಹಾರಾಷ್ಟ್ರದ ಮಹಾಡ್‌ನಲ್ಲಿ ಚೌಧರ್ ಕೆರೆಯಲ್ಲಿ ಎಲ್ಲ ದಲಿತರೂ ನೀರು ಕುಡಿಯಬೇಕೆಂದು ಕರೆಕೊಟ್ಟ ಸತ್ಯಾಗ್ರಹ ಅಹಿಂಸಾತ್ಮಕವಾಗಿತ್ತು. ಎಲ್ಲ ಕರ್ಮಠ ಬ್ರಾಹ್ಮಣರೂ ದಲಿತರೆಡೆ ಕಲ್ಲೆಸೆದು ಅವರು ನೀರು ಕುಡಿಯುವುದನ್ನು ವಿರೋಧಿಸಿದ್ದರು. ಎಮ್ಮೆಗಳು ಸ್ನಾನ ಮಾಡಬಹುದಾದ ಈ ಕೆರೆಯಲ್ಲಿ ದಲಿತರು ನೀರು ಕುಡಿಯುವಂತಿರಲಿಲ್ಲ! ಮಹಾಡ್‌ನಲ್ಲಿ ಅಂಬೇಡ್ಕರ್ ಜೊತೆ ಸಾವಿರಾರು ದಲಿತೇತರರು ಭಾಗವಹಿಸಿದರು, ಹತ್ತಾರು ಮಂದಿ ಸಂಘಟಕರಾಗಿಯೂ ದುಡಿದರು.

ಹಿಂದೂ ಸಮಾಜವನ್ನು ಕರಾಳ ಮನುಸ್ಮೃತಿ ಆಳುತ್ತಿದೆ. ಆದ್ದರಿಂದ ಅಂಬೇಡ್ಕರರ ನೇತೃತ್ವದಲ್ಲಿ, ಒಂದು ಚಿತೆಯ ಮೇಲೆ ಮನುಸ್ಮೃತಿಯನ್ನಿಟ್ಟು ಸುಡಲಾಯಿತು. ಬೆಂಕಿ ಕೊಟ್ಟವರು ಒಬ್ಬ ಬ್ರಾಹ್ಮಣ ವ್ಯಕ್ತಿ, ಅಂಬೇಡ್ಕರರ ಆಪ್ತವಲಯದವರು.

೧೯೨೫ರಲ್ಲಿ ಅಸ್ಪೃಶ್ಯರ ದೇವಸ್ಥಾನ ಪ್ರವೇಶದ ಚಳುವಳಿ ಆರಂಭವಾಯಿತು. ಮಾರ್ಚ್ ೧೯೩೦ರಲ್ಲಿ ಹದಿನೈದು ಸಾವಿರ ಕಾರ್ಯಕರ್ತರೊಂದಿಗೆ ಅಂಬೇಡ್ಕರ್ ನಾಸಿಕ್‌ನ ಕಾಲಾರಾಮ್ ದೇವಸ್ಥಾನವನ್ನು ಪ್ರವೇಶಿಸಲು ಪ್ರಯತ್ನಿಸಿದರು. ಬ್ರಾಹ್ಮಣರು ಅವರೆಡೆ ಕಲ್ಲು, ಚಪ್ಪಲಿಗಳನ್ನೆಸೆದರು.

ಕೆಲವು ಕಾಲದ ನಂತರ, ಗುಡಿ ಪ್ರವೇಶದ ಕಾರ್ಯಕ್ರಮಗಳಲ್ಲಿ ಅಂಬೇಡ್ಕರ್ ಆಸಕ್ತಿ ಕಳೆದುಕೊಂಡರು. ಇದಕ್ಕಿಂತ ಮುಖ್ಯವಾದ ಕಾರ್ಯಕ್ರಮಗಳನ್ನು ದಲಿತರಿಗಾಗಿ ರೂಪಿಸಬೇಕೆಂದೂ, ತಾವೇ ಸ್ವತಃ ಹಿಂದೂಧರ್ಮವನ್ನು ತ್ಯಜಿಸಬೇಕೆಂದೂ, ಯೋಚಿಸತೊಡಗಿದರು. 'ನಾನು ಹಿಂದೂವಾಗಿ ಹುಟ್ಟಿರುವೆ, ಆದರೆ ಹಿಂದೂ ಆಗಿ ಸಾಯಲಾರೆ' ಎಂದರು. ಈ ಮಾತಿನ ಹಿಂದೆ ಅಡಗಿರುವ ನೋವು ನಮ್ಮನ್ನೆಲ್ಲ ತಲ್ಲಣಿಸುವಂತೆ ಮಾಡಬೇಕು.

ಅಂಬೇಡ್ಕರ್ ಮತ್ತು ಗಾಂಧಿಯವರ ನಡುವಿನ ಭಿನ್ನಾಭಿಪ್ರಾಯಗಳು, (ಕೆಲವೊಮ್ಮೆ ವೈರತ್ವದ ಮಟ್ಟಕ್ಕೆ ಹೋಗಿದ್ದೂ ಉಂಟು) ಅಂತರರಾಷ್ಟ್ರೀಯ ಮಟ್ಟದಲ್ಲೂ ಚರ್ಚೆಯಾಗುತ್ತಿದ್ದವು. ಅಂಬೇಡ್ಕರ್ ಮತ್ತು ಗಾಂಧಿ ಅವರ ನಡುವಿನ ಭಿನ್ನಾಭಿಪ್ರಾಯಗಳು ಹೆಚ್ಚು ಮುನ್ನೆಲೆಗೆ ಬಂದದ್ದು ಎರಡು ಸಂದರ್ಭಗಳಲ್ಲಿ.

೧. ಇಂಗ್ಲೆಂಡಿನಲ್ಲಿ ನಡೆದ ಚಕ್ರಾಧಿವೇಶನ ಅಥವಾ ರೌಂಡ್ ಟೇಬಲ್ ಕಾನ್ಫರೆನ್ಸ್‌ನ ಸಂದರ್ಭದಲ್ಲಿ ಮತ್ತು

೨. ಪೂನಾ ಒಪ್ಪಂದ ಸಂದರ್ಭದಲ್ಲಿ. ಅವುಗಳ ಬಗ್ಗೆ ಕೆಲವು ವಿಚಾರಗಳನ್ನು ತಿಳಿಯೋಣ –

೧೯೩೧ರಲ್ಲಿ ನಡೆದ ಎರಡನೇ ದುಂಡುಮೇಜಿನ ಸಭೆಯಲ್ಲಿ ಗಾಂಧೀಜಿಗೂ ಅಂಬೇಡ್ಕರರಿಗೂ ವಿಚಾರಗಳ ಸಂಘರ್ಷ ಉಂಟಾಯಿತು. ಇಂಗ್ಲೆಂಡಿನಲ್ಲಿ ನಡೆದ ಈ ಅಧಿವೇಶನಕ್ಕೆ ಶೋಷಿತ ಜನಾಂಗಗಳ ಪ್ರತಿನಿಧಿಯಾಗಿ ಅಂಬೇಡ್ಕರರನ್ನು ಆಮಂತ್ರಿಸಲಾಗಿತ್ತು. ಗಾಂಧೀಜಿ, ಸರೋಜಿನಿ ನಾಯ್ಡು, ಪಂಡಿತ್ ಮದನ ಮೋಹನ ಮಾಳವೀಯರು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಪ್ರತಿನಿಧಿಗಳಾಗಿದ್ದರು. ಈ ಸಂದರ್ಭದಲ್ಲಿ ಅಂಬೇಡ್ಕರರು ಗಾಂಧಿಯವರನ್ನು ಭೇಟಿ ಮಾಡಿದ್ದು ಒಂದು ಐತಿಹಾಸಿಕ ಘಟನೆ. ಏಕೆಂದರೆ, ಇಲ್ಲಿಂದ ಮುಂದೆ ಅವರು ಪರಸ್ಪರ ತೀಕ್ಷ್ಣವಾಗಿ ಪ್ರಭಾವಿತರಾದರು. ಆಗ ಗಾಂಧಿ ನೇರವಾಗಿ 'ರಾಷ್ಟ್ರೀಯ ಕಾಂಗ್ರೆಸ್ ಅಸ್ಪೃಶ್ಯತೆಯ ನಿವಾರಣೆಯನ್ನು ತನ್ನ ಕಾರ್ಯಕ್ರಮವಾಗಿರಿಸಿಕೊಂಡಿರುವಾಗ ನೀವೇಕೆ ಸಹಕಾರ ನೀಡಬಾರದು?' ಎಂದು ಅಂಬೇಡ್ಕರರನ್ನು ಕೇಳಿದರು. ಆಗ ಗಾಂಧಿಯ ಮುಖಕ್ಕೆ ಹೊಡೆದಂತೆ

## ಉಪಕಾರ

ಫಲವನು ನೀಡಿ
ಹಸಿವು
ತಣಿಸಲು
ಕೈ ಚಾಚಿದ ಮರ
ಒಣಗಿದ
ನಂತರ
ಆಯಿತು
ದಾರಿ ತೋರುವ ಕೈಮರ !



ಗೀತಾ ಶಾಸ್ತ್ರಿ
ಬೆಂಗಳೂರು – ೫೬೦ ೦೭೮

ಅಂಬೇಡ್ಕರರು 'ಮಹಾತ್ಮರು ಭಕ್ಷಕರಿದ್ದಂತೆ – ಅವರು ಧೂಳೆಬ್ಬಿಸುವರೇ ಹೊರತು, ಗಟಾರದಿಂದ ಮೇಲೆತ್ತುವುದಿಲ್ಲ ಎಂದು ಇತಿಹಾಸವೇ ಹೇಳುತ್ತದೆ' ಎಂದರು.

'ಬ್ರಿಟಿಷರ ಕೈಯಿಂದ ಅಧಿಕಾರ ಭಾರತೀಯರ ಕೈಗೆ ಬಂದರೆ ಹಿಂದೂಗಳು ನಮ್ಮನ್ನು ಆಳುತ್ತಾರೆ – ಅದು ನಮಗೆ ಬೇಡ' ಎಂದ ಅಂಬೇಡ್ಕರರನ್ನು ಮಾಧ್ಯಮದವರು ಮತ್ತು ಕೆಲವು ಪ್ರತಿಗಾಮಿ ಕಾಂಗ್ರೆಸ್ ಸದಸ್ಯರು, ಬ್ರಿಟಿಷ್ ಸರ್ಕಾರದ ಜೀತದಾಳು, ದೇಶದ್ರೋಹಿ ಎಂದೆಲ್ಲ ಕರೆದರು. ಆಗ ಭಾವಾವೇಶಕ್ಕೊಳಗಾದ ಅಂಬೇಡ್ಕರರು 'ಗಾಂಧೀಜಿ, ನನಗೊಂದು ಮಾತೃಭೂಮಿಯೇ ಇಲ್ಲ' ಎಂದರು.

ಇದೇ ಸಂದರ್ಭದಲ್ಲಿ ಅಂಬೇಡ್ಕರರು 'ದಲಿತರಿಗೆ ಪ್ರತ್ಯೇಕ ಚುನಾವಣಾ ಕ್ಷೇತ್ರಗಳಿರಬೇಕೆಂಬ ಬೇಡಿಕೆ ಇಟ್ಟರು. ಗಾಂಧಿ ಇದನ್ನು ಸಂಪೂರ್ಣವಾಗಿ ವಿರೋಧಿಸಿ, ಇದರಿಂದ ಹಿಂದೂಧರ್ಮವನ್ನು ವಿಭಜಿಸಿದಂತಾಗುತ್ತದೆ' ಎಂದರು.

ದುಂಡುಮೇಜಿನ ಸಭೆಯ ನಂತರ ಗೋರೆಗಾಂವ್‌ನಲ್ಲಿ ಸಮಾವೇಶಗೊಂಡ 'ಅಖಿಲ ಭಾರತ ದಲಿತವರ್ಗಗಳ ಸಮ್ಮೇಳನ'ದಲ್ಲಿ, ಲಂಡನ್ ಸಭೆಯಲ್ಲಿ ಅಂಬೇಡ್ಕರರು ಮಂಡಿಸಿದ್ದ ಬೇಡಿಕೆಯನ್ನು ಸರ್ವಾನುಮತದಿಂದ ಬೆಂಬಲಿಸಿದ್ದು ಮಾತ್ರವಲ್ಲದೆ, ಗಾಂಧಿಯವರು ದಲಿತವರ್ಗದ ನಾಯಕರಲ್ಲ ಎಂಬ ಠರಾವನ್ನು ಸರ್ವಾನುಮತದಿಂದ ಅಂಗೀಕರಿಸಲಾಯಿತು. ಗಾಂಧಿಯನ್ನು ವಿರೋಧಿಸಿದ ಅಂಬೇಡ್ಕರರನ್ನು ಭಾರತದ ಮಾಧ್ಯಮಗಳು – 'ಹುಲ್ಲಿನೊಳಗಿನ ನಾಗರಹಾವು', 'ದೈತ್ಯ ಚಾರ್ವಾಕ', 'ಹಿಂದೂಧರ್ಮದ ವಿನಾಶಕಾರಿ', 'ಬ್ರಿಟಿಷರ ಕೈಗೊಂಬೆ', 'ದೇಶದ್ರೋಹಿ' ಎಂದೆಲ್ಲ ಬಣ್ಣಿಸಿದವು.

೧೯೩೧ರ ಡಿಸೆಂಬರ್ ೨೮ರಂದು ಗಾಂಧಿಯವರು ಎರಡನೇ ದುಂಡುಮೇಜಿನ ಸಭೆ ನಡೆದ ಲಂಡನ್‌ನಿಂದ ಭಾರತದ ನೆಲದಲ್ಲಿ ಕಾಲಿಟ್ಟಾಗ, ಎಂಟು ಸಾವಿರ ದಲಿತ ಕಾರ್ಯಕರ್ತರು ಅವರಿಗೆ ಕಪ್ಪು ಬಾವುಟ ಪ್ರದರ್ಶಿಸಿದರು. ಅದಾದ ಕೆಲವೇ ನಿಮಿಷಗಳಲ್ಲಿ ದಲಿತರ ಮೇಲೆ ಕಲ್ಲು, ಇಟ್ಟಿಗೆ, ಸೋಡಾ ಬಾಟಲಿಗಳನ್ನು ತೂರಲಾಯಿತು. ಪೊಲೀಸರು ಲಾಠಿ ಪ್ರಹಾರ ಮಾಡಿದರು. ಕಾಂಗ್ರೆಸ್ ಸ್ವಯಂಸೇವಕರು 'ರಾಷ್ಟ್ರದ್ರೋಹಿ ಅಂಬೇಡ್ಕರರಿಗೆ ಧಿಕ್ಕಾರ', 'ಚಾರ್ವಾಕ ಅಂಬೇಡ್ಕರ್‌ಗೆ ಧಿಕ್ಕಾರ' ಎಂದು ಘೋಷಣೆಗಳನ್ನು ಕೂಗಿದರು.

೧೯೩೨ರ ಮಾರ್ಚ್ ೧೧ರಂದು ಸರ್ ಸಾಮ್ಯುಯೆಲ್ ಹೋರೆರರಿಗೆ ಗಾಂಧಿಯವರು ಪತ್ರ ಬರೆದು "ದಲಿತ ವರ್ಗಗಳಿಗೆ ಪ್ರತ್ಯೇಕ ಮತದಾನವನ್ನೇನಾದರೂ ಕಲ್ಪಿಸಿದಲ್ಲಿ ನಾನು ಆಮರಣಾಂತ ಉಪವಾಸ ಮಾಡಬೇಕಾಗುತ್ತದೆ" ಎಂದು ಎಚ್ಚರಿಕೆ ನೀಡಿದರು. ದಲಿತರ ಪ್ರತ್ಯೇಕ ಮತದಾನವನ್ನು ನಾನು ವಿರೋಧಿಸುವುದಕ್ಕೆ ಮುಖ್ಯವಾದ ಕಾರಣಗಳು ಮತಧಾರ್ಮಿಕವಾದವು ಮತ್ತು ನೈತಿಕವಾದವು ಎಂದು ಆ ಪತ್ರದಲ್ಲಿ ಸ್ಪಷ್ಟನೆ ನೀಡಿದರು.

ಸೆಪ್ಟೆಂಬರ್ ೧೨, ೧೯೩೨ರಂದು ಯೆರವಾಡಾ ಜೈಲಿನಲ್ಲಿದ್ದ ಗಾಂಧೀಜಿ ಆಮರಣಾಂತ ಉಪವಾಸ ಕೈಗೊಂಡರು. ಸಿಟ್ಟಾದ ಅಂಬೇಡ್ಕರರು ಇದನ್ನು 'ರಾಜಕೀಯ ಸ್ಟಂಟ್' ಎಂದು ಕರೆದರೆ, ಕಾಂಗ್ರೆಸ್ಸಿಗರು ಇದನ್ನು 'ಮಹಾ ಉಪವಾಸ' ಎಂದು ಕರೆದರು. ದಲಿತರಿಗೆ ಪ್ರತ್ಯೇಕ ಮತದಾನದ ಬೇಡಿಕೆಯಿಂದ ಹಿಂದೆ ಸರಿಯಲು ಹಲವು ವಿನಂತಿಗಳನ್ನು ಮಾಡಿದರೂ, ಹಲವು ಬೆದರಿಕೆಗಳು ಬಂದರೂ ಅಂಬೇಡ್ಕರರು ಜಗ್ಗಲಿಲ್ಲ. ಗಾಂಧೀಜಿಯ ಆರೋಗ್ಯ ಉಪವಾಸದಿಂದ ಕೆಡುತ್ತ ಬಂದಿತ್ತು. ಆಗ ಗಾಂಧೀಜಿಯ ಜೀವ ಉಳಿಸಬೇಕಾದ ಹೊಣೆ ಅಂಬೇಡ್ಕರರ ಮೇಲೆ ಬಿತ್ತು. ಆಗ ಗಾಂಧಿಯವರನ್ನು ಭೇಟಿಯಾದ ಅಂಬೇಡ್ಕರರು 'ಮಹಾತ್ಮಾಜೀ, ನೀವು ನಮಗೆ ಅನ್ಯಾಯ ಮಾಡುತ್ತಿದ್ದೀರಿ' ಎಂದರು.

'ನಾನೇನು ಮಾಡಲಿ ? ನಾನು ಅಸಹಾಯಕ' ಎಂದರು ಗಾಂಧೀಜಿ. 'ನನಗೆ ನನ್ನ ಪರಿಹಾರ ಬೇಕು' ಎಂದರು ಅಂಬೇಡ್ಕರ್. 'ನಿಮ್ಮ ಹಲವು ವಿಚಾರಗಳಿಗೆ ನನ್ನ ಸಹಕಾರವಿದೆ. ಆದರೆ ನಾನು ಬದುಕಿ ಉಳಿಯುವುದರಲ್ಲಿ ನಿಮಗೆ ಆಸಕ್ತಿ ಇದೆ ಎಂದಿರಲ್ಲವೇ?' ಎಂದು ಕೇಳಿದರು ಗಾಂಧೀಜಿ. 'ಹೌದು ಮಹಾತ್ಮಾಜಿ ನಮ್ಮ ಜನಾಂಗಕ್ಕಾಗಿ ನೀವು ಕೆಲಸ ಮಾಡಿದರೆ ನೀವೇ ನಮ್ಮ ನಾಯಕರು' ಎಂದರು ಅಂಬೇಡ್ಕರ್. 'ನೀನು ಹುಟ್ಟಿನಿಂದ ಅಸ್ಪೃಶ್ಯ, ನಾನು ನನ್ನ ಆಯ್ಕೆಯಿಂದ ಅಸ್ಪೃಶ್ಯ ... ನನಗೆ ನಿನ್ನ ಜನಾಂಗ – ತತ್ವ ಮತ್ತು ಕ್ರಿಯೆ ಎರಡರಲ್ಲೂ ನನ್ನಿಂದ ಬೇರೆಯಾಗುವುದು ಬೇಡ, ನಾವೆಲ್ಲರೂ ಒಂದಾಗಿ, ಅವಿಭಾಜ್ಯವಾಗಿ ಇರಬೇಕು' ಎಂದರು ಗಾಂಧೀಜಿ.

ಅಂಬೇಡ್ಕರ್ ತಮ್ಮ ಬೇಡಿಕೆಯನ್ನು ಹಿಂದಕ್ಕೆ ಪಡೆದು ಗಾಂಧಿಯ ಜೀವವನ್ನು ಉಳಿಸಿದರು. ಈ ಪೂನಾ ಒಪ್ಪಂದದ ನಂತರ ಗಾಂಧೀಜಿ 'ಹರಿಜನ ಸೇವಕ ಸಂಘ' ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. 'ಹರಿಜನ' ಎಂಬ ವಾರಪತ್ರಿಕೆಯ ಮೂಲಕ ಅಸ್ಪೃಶ್ಯತೆಯ ನಿವಾರಣೆಗಾಗಿ ಪಣತೊಟ್ಟರು. ಪೂನಾ ಒಪ್ಪಂದದ ನಂತರ ಅಸ್ಪೃಶ್ಯತೆಯ ನಿವಾರಣೆಗಾಗಿ ಆಂದೋಲನ ಆರಂಭಿಸಿದ ಗಾಂಧೀಜಿ, ಸಂಪ್ರದಾಯಸ್ಥ ಹಿಂದೂಗಳ ದೈಹಿಕ ಮತ್ತು ವಾಚಿಕ ಹಿಂಸೆಗಳಿಗೂ ಒಳಗಾಗಬೇಕಾಯಿತು.

ಅಕ್ಟೋಬರ್ ೧೪, ೧೯೫೬ರಂದು ಬಹಳಷ್ಟು ಚಿಂತನೆ, ಹೋರಾಟಗಳ ನಂತರ ಅಂಬೇಡ್ಕರರು ಕ್ರೂರ ಹಿಂದೂಧರ್ಮವನ್ನು ತ್ಯಜಿಸಿ, ನಾಗಪುರದಲ್ಲಿ ಬೌದ್ಧಧರ್ಮ ಸ್ವೀಕರಿಸಿದರು. ೧೯೫೬ ಡಿಸೆಂಬರ್ ೬ರಂದು ಬೌದ್ಧರಾಗಿ ಇಹಲೋಕ ತ್ಯಜಿಸಿದರು.

ಜನವರಿ ೩೦, ೧೯೪೮ರಂದು ಗಾಂಧೀಜಿ, ಹಿಂದೂ ಸನಾತನವಾದಿ, ಹಿಂದೂ ಮೂಲಭೂತವಾದಿ ನಾಥೂರಾಮ ಗೋಡ್ಸೆಯಿಂದ ಗುಂಡಿಕ್ಕಿ ಕೊಲ್ಲಲ್ಪಟ್ಟರು.

ಡಾ॥ ಅಂಬೇಡ್ಕರ್ ೧೯೩೫ರಲ್ಲಿ ಮತಾಂತರ ಆಂದೋಲನವನ್ನು ಪ್ರಾರಂಭಿಸಿದ ಸಂದರ್ಭದಲ್ಲಿ ತನ್ನ ಜನಾಂಗಕ್ಕೆ ಹೀಗೆಂದು ಕರೆಕೊಟ್ಟರು – 'ಬಂಧುಗಳೇ, ಹಿಂದೂ ಸಾಮಾಜಿಕ ವ್ಯವಸ್ಥೆಯಲ್ಲಿ ನೀವು ಅತ್ಯಂತ ದೈನ್ಯಾವಸ್ಥೆಯಲ್ಲಿ ಇದ್ದೀರಿ. ಬಾವಿಯಿಂದ ನೀರು ಸೇದಿದ ಕಾರಣಕ್ಕೆ, ಬಾವಿಯ ನೀರು ಕುಡಿದಿದ್ದಕ್ಕೆ ನಿಮ್ಮನ್ನು ಬಡಿಯಲಾಗಿದೆ. ಒಳ್ಳೆಯ ಬಟ್ಟೆಯನ್ನು ಧರಿಸಿದ್ದಕ್ಕೆ, ಒಳ್ಳೆಯ ಪಾತ್ರೆಗಳಲ್ಲಿ ನೀರು ತುಂಬಿಟ್ಟುಕೊಂಡಿದ್ದಕ್ಕೆ, ವಠಾರದಲ್ಲಿ ಮನೆಯನ್ನು ಬಾಡಿಗೆಗೆ ಪಡೆದಿದ್ದಕ್ಕೆ ಬಡಿಯಲಾಗಿದೆ. ಸತ್ತದನಗಳನ್ನು ಊರಿನಿಂದ ಹೊರಗೆ ಎಳೆದು ಹಾಕದಿದ್ದುದಕ್ಕೆ, ಮಾಂಸ ತಿಂದಿದ್ದಕ್ಕೆ, ಮೇಲುಜಾತಿಯವರಿಗೆ ನಮಸ್ಕಾರ ಮಾಡದಿರುವುದಕ್ಕೆ, ನೀವು ಮತ್ತು ನಿಮ್ಮ ಮಕ್ಕಳು ಅವರ ಜೀತ ಮಾಡದಿದ್ದುದಕ್ಕೆ ನಿಮ್ಮನ್ನು ಬಡಿದಿದ್ದಾರೆ. ನಿಮಗೆ ಬಹಿಷ್ಕಾರ ಕೂಡ ಹಾಕಿದ್ದಾರೆ. ಹಿಂದೂ ಸಾಮಾಜಿಕ ವ್ಯವಸ್ಥೆಯಲ್ಲಿ ಅಸ್ಪೃಶ್ಯರು ಹಂದಿ, ನಾಯಿಗಳಿಗಿಂತಲೂ ಕೀಳಾಗಿದ್ದಾರೆ.

'ಹಿಂದೂಗಳು ಇರುವೆಗೆ ಸಕ್ಕರೆ ನೀಡುವ, ಆದರೆ ಮನುಷ್ಯರಿಗೆ ನೀರು ಕೊಡದೆ ಕೊಲ್ಲುವ ಜನ. ಇವರು ಡಾಂಭಿಕರು. ಹಿಂದೂಧರ್ಮ ಹೆಸರಿಗೆ ಮಾತ್ರ ಸಹನೆ ತೋರಿಸುತ್ತದೆ. ಅಂತರಾಳದಲ್ಲಿ ಅದು ಕ್ರೂರಿಯೂ, ಅಸಹ್ಯಕರವೂ ಆಗಿದೆ. ಇಷ್ಟೆಲ್ಲಾ ಕೊಳಕುಗಳಿದ್ದರೂ ತಮ್ಮ ಧರ್ಮ ಕೀಳು ಧರ್ಮ ಎಂದು ಹಿಂದೂಗಳು ಒಪ್ಪಿಕೊಳ್ಳುವುದಿಲ್ಲ. ಬದಲಿಗೆ ಅದು ದೇವರಿಂದ ಸೃಷ್ಟಿಯಾದ ಧರ್ಮವೆಂದು ಹೇಳುತ್ತಾರೆ.'

ಹೀಗೆ ಹೇಳಿ ಅಂಬೇಡ್ಕರರು ದಲಿತರನ್ನು ಹಿಂದೂಧರ್ಮ ತ್ಯಜಿಸಲು ಉತ್ತೇಜನ ನೀಡುತ್ತಾರೆ. ಅಂಬೇಡ್ಕರರ ಮಾತುಗಳು ಕೇವಲ ಹೇಳಿಕೆಗಳಲ್ಲ. ವೈಯಕ್ತಿಕ ನೋವು, ಒಂಟಿತನ, ತನ್ನ ಸಮುದಾಯದ ನರಕಸದೃಶ ಬದುಕನ್ನು ನೋಡಿ ಮೂಡಿದ ಅನುಭವೋಕ್ತಿಗಳು.

ಇದಕ್ಕೆ ಬದಲಾಗಿ, ಗಾಂಧೀಜಿಯವರಲ್ಲಿ ಜಾತಿಪದ್ಧತಿಯ ಬಗ್ಗೆ ಸಂಪೂರ್ಣ ನಂಬಿಕೆಯಿತ್ತು. "ಜಾತಿ ಪದ್ಧತಿ ಕೆಟ್ಟ ಪದ್ಧತಿ ಎಂದು ತಿಳಿಯಬೇಕಾಗಿಲ್ಲ, ವರ್ಣಾಶ್ರಮ ಧರ್ಮದ ವಿರುದ್ಧ ಹೋರಾಡುವಂತಹದ್ದು ಏನೂ ಇಲ್ಲ. ನನ್ನ ಪ್ರಕಾರ ವರ್ಣಾಶ್ರಮ ಧರ್ಮವು ಜೀವನ ವಿಧಾನವಾಗಿದೆ. ಅದರಲ್ಲಿ ಶಕ್ತಿಯನ್ನು ನೀಡುವ ಸಾಮರ್ಥ್ಯವಿದೆ." "ನಾನು ಕಸ ಹೊಡೆಯುವವನಾಗಿದ್ದರೆ ನನ್ನ ಮಗನೂ ಏಕೆ ಕಸ ಹೊಡೆಯಬಾರದು ?" ಎಂಬ ನಿಲುವನ್ನು ಗಾಂಧಿ ಹೊಂದಿದ್ದರು. ಆದರೆ ಅಂಬೇಡ್ಕರರ ಪ್ರಭಾವದಿಂದ ಅವರು ನಿಧಾನವಾಗಿ ಸ್ವಲ್ಪಮಟ್ಟಿಗಾದರೂ ಬದಲಾವಣೆ ಹೊಂದಿದರು. ನಿಧಾನವಾಗಿ ಅಂತರ್ಜಾತೀಯ ಭೋಜನಗಳು ಮತ್ತು ಅಂತರ್ಜಾತೀಯ ವಿವಾಹಗಳನ್ನು ಪ್ರೋತ್ಸಾಹಿಸಲಾರಂಭಿಸಿದರು. ಒಮ್ಮೆ ಅವರು ಅನ್ಯಾಯ, ಅಸಮಾನತೆಗಳನ್ನು ಉದ್ದೀಪಿಸುವ ಧರ್ಮ ಇದ್ದರೆಷ್ಟು , ಬಿಟ್ಟರೆಷ್ಟು ? ಎಂದು ಕೆರಳಿದ್ದೂ ಇದೆ.

ಅಂಬೇಡ್ಕರ್–ಗಾಂಧಿ ಇಬ್ಬರೂ ಮಾನವತಾವಾದಿಗಳೇ... ಇಬ್ಬರೂ ಮಾನವ ಜನಾಂಗದ ವಿಮೋಚನೆಗಾಗಿ ದುಡಿದಿದ್ದಾರೆ. ಗಾಂಧಿಯ ಮತಧರ್ಮಗಳ ನಡುವಣ ಸಹನೆ ಮತ್ತು ಅಹಿಂಸೆ, ಅಂಬೇಡ್ಕರರ ದಲಿತ ವಿಮೋಚನೆ ಹಾಗೂ ಸಮಗ್ರತೆಗಾಗಿ ರಾಜಕೀಯ ಹೋರಾಟ ಹಿಂದೆಂದಿಗಿಂತಲೂ ಇಂದು ಪ್ರಸ್ತುತ.

**ಎಸ್. ಮಾಲತಿ**
'ಮಹಾಳಸ ನಿಲಯ', ಜೋಗ ರಸ್ತೆ
ಸಾಗರ – ೫೭೭ ೪೦೧, ಶಿವಮೊಗ್ಗ ಜಿಲ್ಲೆ

# ಹೆಜ್ಜೆ ನುಡಿಸಿದ ಸದ್ದು



ಕಾವ್ಯಲೋಕ

### ಹೆಜ್ಜೆ-೧

ಅನಾದಿ ಕಾಲದ ಗಾಯಗಳ ಕಣ್ಣೀರಲಿ
ಪುರಾತನ ಗವಿಯಿಂದ ಬಂಡೆಗಳಾಗಿ ಸಿಡಿದು
ಕನಸುಗಳ ನೇಯುತ
ಕಾಲಗರ್ಭದ ಯೋನಿಯಿಂದ ಎದೆಯೆತ್ತಿ ನಿಂತವು
ಹೆಜ್ಜೆಗಳು

ಒಂದೊಂದೇ ಹೆಜ್ಜೆಗಳು ಸಹಸ್ರ ಕನಸಿನ ನದಿಯಾಗಿ
ಎಣಿಕೆಗೆ ನಿಲುಕದ ಗಳಿಗಳಾಗಿ
ಉರುಳುತ
ಕಡಲ ಹಕ್ಕಿಯ ಬೆಳಕಿನ ಚಿಟ್ಟೆಗಳಾದವು

ಸಾಗರೋಪಾದಿಯಾಗಿ ಸ್ವಚ್ಛಂದ ವಿಹಾರದ
ನೆನಪುಗಳ ನಕ್ಷತ್ರಗಳಾಗಿ
ನೆಲದ ಬೇರೊಳಗೂ ಇಳಿದು
ಭೂಮಿ ತುಂಬೆಲ್ಲಾ ಚಾಚಿಕೊಂಡವು

ಶಾರ್ಕು ತಿಮಿಂಗಿಲಗಳ ಕಲಿನೆರಳ ಕೊರಳ
ತಿವಿಯುತ
ಕಡಲೊಳಗೆ ದಿಟ್ಟ ಹೆಜ್ಜೆಯೂರುತ
ಮುತ್ತುಗಳಾಗಿ ಬೆಸೆದುಕೊಂಡವು

### ಹೆಜ್ಜೆ-೨

ಅಲೆಮಾರಿಯ ಜೋಳಿಗೆಯೊಳಗೆ
ಕಲ್ಲು ಕಟೆವ ಕೈಗಳೊಳಗೆ
ಮಣ್ಣು ಹೊರುವ ರಟ್ಟೆಗಳೊಳಗೆ
ಹೊಗೆಯ ಹೊದಿಸಿಕೊಂಡ ಗುಡಿಸಲುಗಳ ತಳದೊಳಗೆ
ಒಡಲ ತಂಬೂರಿ ನುಡಿದವು ಹೆಜ್ಜೆಗಳು

ಉರಿವ ರಸ್ತೆಗಳ ಬಾಯಿಗೆ
ಸಾಲುದೀಪದ ಮರಗಳಾಗಿ
ಬೆವರ ತೆನೆಯ ಮುತ್ತುಗಳಾಗಿ
ಕಲಿನೆಲದ ಕಲ್ಲುಬಳ್ಳಿಗಳ ಇರುಕುಗಳಲಿ
ಕರುಳು ಗುಟುಕಿನ ನಾಡಿಗಳಾದವು

ಕೋಟೆಗಳಾದವು ಹೆಜ್ಜೆಗಳು
ಬೆದೆಗೆ ಬಿದ್ದ ಅರಸನ ನೆತ್ತಿಗೆ
ಬಯಲು ದೀಪದ ಕುಡಿಗಳಾಗಿ
ಉರಿ ಚಿಟ್ಟೆಯ ಕಣ್ಣಾಗಿಯೂ
ಗೋಡೆಗಳ ಮ್ಯಾಲೆ ರಕ್ತದ ಓಲೆಗಳಾಗಿ
ನಿಶ್ಶಬ್ದ ಜಾಣಪದದ ಗುಂಗಾದವು

### ಹೆಜ್ಜೆ-೩

ಹೊಟ್ಟೆಯೊಳಗ ಆವರಿಸಿಕೊಂಡ
ಕಾಲದ ಶಾಪ ಸಮಾಪ್ತಿ ಗೈಯ್ಯಲು
ಮಣ್ಣ ದನಿಯಾಗಿ
ಕೂರಿಗೆ ಕುಂಟೆ ಮಡಿಕೆಗಳ ಶಾಶ್ವತ ಸಂಗಾತಿಗಳಾಗಲು
ಬೀಜಗಳಾಗಿ ನೆಲದೊಳಗೆ ಅಚ್ಚಾದವು ಹೆಜ್ಜೆಗಳು

ಇರುಳ ಉಂಡವರ ನೆರಳಾಗಿ
ಎದೆಯ ಶಕ್ತಿ ಕುದಿಸಿ
ಒಂಟಿ ಕಡ್ಡಿಯ ಬೇರಾಗಿಯೂ
ವಸಂತ ಗಾಯನ ನುಡಿದವು ಹೆಜ್ಜೆಗಳು

### ಹೆಜ್ಜೆ-೪

ಗುಲಗಂಜಿ ಕಣ್ಣಿನ ಹೆಜ್ಜೆಗಳೇ ಹಾಗೆ !
ಎದೆಯುಲಿಯನು ಬೆಳಕ ಮೂಗಿಗೆ ಒತ್ತಿ
ಹೆಜ್ಜೆಗಂಟಿದ ಜಾಡ್ಯ ತೊಳೆದು
ಋತುಗಾನದ ಚಿಗುರುಗಳಾಗಿ
ಅನುಭವ ಮಂಟಪದ ಬೇರುಗಳಾಗಿ
ಬೋಧಿವೃಕ್ಷವಾಗಿ ಅಚ್ಚಾದವು ಹೆಜ್ಜೆಗಳು

ಈ ಹೆಜ್ಜೆಗಳ ಒಡಲಿಗೆ ಮನುಷ್ಯತ್ವ ಬೆಸೆವ
ಕಣ್ಣುಗಳಿವೆ
ಅಗಾಧ ಗುರುತಿನ ಪರಂಪರೆ ನೆಲೆಗಟ್ಟಿದ ಹೆಜ್ಜೆಗಳು
ವರ್ಣ ಬೇಲಿಗಳ ದಾಟಿ
ಜಾತಿ ಗೋಡೆಗಳ ಮುರಿದು
ಅನಿಷ್ಟಗಳ ಧಿಕ್ಕರಿಸಿ
ಮಾನವೀಯ ಅಂತಃಕರಣದ ನೆಲೆಗಳಾಗಿ
ಸಾಗಿವೆ ಸಾಗುತ್ತಿವೆ
ಜನ ಜಾಥಾದ ನುಡಿಗಳಾಗಿ

**ಗಿರಿಯಪ್ಪ ಅಸಂಗಿ**
ಸರಕಾರಿ ಶಿಕ್ಷಕ, ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ,
ಗುಗಲಗಟ್ಟಿ, ಸುರಪುರ ತಾಲೂಕು, ಯಾದಗಿರಿ ಜಿಲ್ಲೆ

ತಿಂಗಳ ಕಥೆ

ಮೂಲ ರಷ್ಯನ್ ಕಥೆ : **ಯೂರಿ ಬನಾಟ್ಸ್ಕಿ**
ಕನ್ನಡಕ್ಕೆ : **ಟಿ. ವಿ. ಮಾಗಳದ**

# ಅವ್ವ




ಮನ ತುಂಬ ಭಯ ಮೆತ್ತಿಕೊಂಡ ಆ ಮುದುಕಿ ಜೇಲಿನ ಬಾಗಿಲಿನತ್ತ ಭಾರವಾದ ಹೆಜ್ಜೆ ಹಾಕಿದಳು. ಒಂದು ಕ್ಷಣದ ಹಿಂದೆ ತನ್ನ ಕಾಲ ನೋವನ್ನೆಲ್ಲ ಮರೆತು ಸಾಗಿದ್ದಳು. ಆದರೆ ಪ್ಲಾಸ್ಟರ್ ಹಕ್ಕಳೆ ಉದುರುತ್ತಿದ್ದ ಆ ಜೇಲಿನ ಎತ್ತರದ ಗೋಡೆಗಳನ್ನು ಮತ್ತು ಸಣ್ಣ ಕಿಡಕಿಗಳ ಆ ಜಂಗು ಹತ್ತಿದ ಸಳಿಗಳನ್ನು ನೋಡಿದಾಕ್ಷಣ ಇದ್ದುಬಿದ್ದ ಅವಳ ಶಕ್ತಿ ಒಮ್ಮೆಲೆ ಕುಸಿಯಿತು. ಕಾದ ಹಂಚಿನ ಮೇಲೆ ಕಾಲಿಟ್ಟಂತೆ ಅವಳ ಪಾದಗಳು ಸುಡತೊಡಗಿದವು. ಅಲ್ಲೇ ಇದ್ದ ಹೆಣ್ಣುಮಕ್ಕಳ ಗುಂಪಿನ ಬಳಿ ಹೋಗುವಷ್ಟು ಶಕ್ತಿ ಕೂಡ ಅವಳಲ್ಲಿ ಉಳಿದಿರಲಿಲ್ಲ, ಪಕ್ಕದಲ್ಲಿದ್ದ ಕಲ್ಲಿನ ಮೇಲೆ ಕುಸಿದು ಕುಳಿತಳು.

ಬಿಟ್ಟೂಬಿಡದೆ ಎರಡು ದಿನ ಆ ಮುದುಕಿ ನಡೆದು ಬಂದಿದ್ದಳು. ತುಸು ಭಾರದ ಮಾಸಿದ ಒಂದು ಚೀಲದ ಗಂಟು ಬೆನ್ನ ಮೇಲಿತ್ತು. ತಲೆಗೆ ಕಪ್ಪು ಉಣ್ಣೆಯ ಕರವಸ್ತ್ರದ ಹೊದಿಕೆ. ಕರವಸ್ತ್ರದ ಎರಡು ಮೂಲೆಯ ಚುಂಗುಗಳನ್ನು ಗದ್ದದ ಅಡಿಯಲ್ಲಿ ಗಂಟು ಹಾಕಿಕೊಂಡಿದ್ದಳು. ಅವಳಿನ್ನೂ ಬಾಲಕಿಯಿದ್ದಾಗಲೇ ಆ ಕರವಸ್ತ್ರ ಕೊಂಡಿದ್ದಳು. ಬಲು ಜತನದಿಂದ ಬದುಕಿನುದ್ದಕ್ಕೂ ಅದನ್ನು ಕಾದುಕೊಂಡು ಬಂದಿದ್ದಳು. ಉಪಯೋಗಿಸಲಾಗದಷ್ಟು ಹಳೆಯದೆಂಬ ಕಾರಣದಿಂದ ಅದನ್ನು ಬಹಳ ಕಾಲ ದೂರವಿರಿಸಿದ್ದಳು. ಈಗ ತನ್ನ ಅಂತ್ಯಕ್ರಿಯೆಗಾದರೂ ಅದು ಉಪಯೋಗಕ್ಕಾದೀತು ಎಂದು ಮತ್ತೆ ಕಟ್ಟಿಕೊಂಡು ನಡೆದಿದ್ದಳು. ಬೆನ್ನ ಮೇಲಿನ ಆ ಚೀಲದಲ್ಲಿ ಅಕ್ಕಪಕ್ಕದ ಮನೆಯವರಿಂದ ಬೇಡಿ ಪಡೆದ ಬ್ರೆಡ್ಡಿನ ತುಂಡುಗಳು, ಒಂದು ಒಣ ಮೀನು ಮತ್ತು ನಾಲ್ಕಾರು ಸೇಬು ಹಣ್ಣುಗಳಿದ್ದವು. ಆ ಚೀಲ ಅಂಥ ಭಾರವಾದದ್ದೇನೂ ಇರಲಿಲ್ಲ. ಆದರೆ ಅವಳಿಗೆ ಅದು ಭಾರವೆನಿಸಿತ್ತು. ಅದರ ತೆಳ್ಳನೆಯ ಪಟ್ಟಿ ಬರೀ ಎಲುಬೇ ಎದ್ದು ಕಾಣುತ್ತಿದ್ದ ಅವಳ ಹೆಗಲಿಗೆ ಕೊರೆತ ಕೊಟ್ಟು ಖುಷಿಪಡುತ್ತಿತ್ತು. ಅದಕ್ಕಿಂತಲೂ ಕ್ರೂರವಾದದ್ದು ಅವಳ ಕಾಲುಗಳು. ಬಹಳಷ್ಟು ಹಿಂದೆಯೇ ಅವು ಪ್ರಾಣ ಹಿಂಡುವ ನೋವು ನೀಡುತ್ತಿದ್ದವು. ಅಷ್ಟೊಂದು ದೂರ ನಡೆದು ಬರುವ ಮಾತಿರಲಿ, ಅವಳ ಗುಡಿಸಿಲಿನ ಅಂಗಳ ದಾಟಿ ಬರುವುದೂ ಅವಳಿಗೆ ಕಷ್ಟವಾಗಿತ್ತು.

ಮನೆ ಅಂಗಳ ಬಿಟ್ಟು ಬಂದಾಗಿನಿಂದಲೂ ಬಾಯಲ್ಲಿ ಒಂದು ತುಂಡು ಬ್ರೆಡ್ ಅನ್ನೂ ಇಟ್ಟಿರಲಿಲ್ಲ. ಬರೀ ನೀರು ಕುಡಿಯುತ್ತಿದ್ದಳು. ಅವಳ ಹೃದಯ ಬೆಂಕಿಗೂಡಾಗಿತ್ತು. ಎಷ್ಟೇ ದಣಿದಿದ್ದರೂ, ಅದೆಷ್ಟೇ ಹಸಿದಿದ್ದರೂ ಅದರ ಪರಿವೆಯೇ ಅವಳಿಗಿರಲಿಲ್ಲ. ಬೆನ್ನಿಗೆ ಹೊತ್ತ ಚೀಲದ ಗಂಟಿನಲ್ಲಿದ್ದ ಸೇಬು, ಬ್ರೆಡ್ ಏನೆಲ್ಲವನ್ನೂ ಮಗನಿಗಾಗಿ ಮೀಸಲಿರಿಸಿದ್ದಳು. ಅವರು ಅವನನ್ನು ಬಂಧಿಸಿದ್ದರು. ಅವನ ತೋಳನ್ನು ತಿರುಚಿದ್ದರು. ಪಂಜರದೊಳಗೆ ಒಗೆಯುವಂತೆ ಅವನನ್ನು ಆ ಕಲ್ಲುಗೋಡೆಗಳ ಹಿಂದೆ ತುಕ್ಕು ಹಿಡಿದ ಆ ಕಬ್ಬಿಣದ ಸಳಿಗಳ ಹಿಂದೆ ನೂಕಿದ್ದಾರೆ ಎಂದು ಜನ ಹೇಳುತ್ತಿದ್ದರು.

ಒಂದು ಲಾರಿ ಆ ಮುದುಕಿಯ ದಾರಿಗೆ ಅಡ್ಡ ಬಂತು. ಅದರಲ್ಲಿ ನಾಝಿಗಳು ಇದ್ದರು. ಆ ರಾಕ್ಷಸರನ್ನು ತಲೆಯೆತ್ತಿ ನೋಡಲಿಕ್ಕೂ ಅವಳಿಗೆ ಮನಸ್ಸಾಗಲಿಲ್ಲ. ಮೆಲ್ಲನೆ ರಸ್ತೆ ಪಕ್ಕದ ದಾರಿಯತ್ತ ನಡೆದಳು. ಲಾರಿ ನಿಂತಿತು. ಸೈನಿಕರು ಏನನ್ನೋ ಅರಚಿದರು. ಅವರು ತನ್ನನ್ನೇ ಕರೆಯುತ್ತಿದ್ದಾರೆಂದು ನಿಧಾನವಾಗಿ ಅವಳಿಗೆ ತಿಳಿಯಿತು. ಮೊದಮೊದಲು ತನಗೆ ಏನೂ ಕೇಳಿಸಲಿಲ್ಲ ಎನ್ನುವಂತೆ ನಟಿಸಲು ಬಯಸಿದಳು. ಆದರೆ ಮರುಕ್ಷಣ ಮನಸ್ಸು ಬದಲಿಸಿದಳು. ಅವಳಿನ್ನೂ ಬಹಳ ದೂರ ಹೋಗಬೇಕಿತ್ತು. ಕ್ಷೀಣಿಸುತ್ತಿರುವ ಶಕ್ತಿಯಿಂದಾಗಿ ಅವಳ ಕಾಲುಗಳು ಕುಸಿಯತೊಡಗಿದವು. ಅಲ್ಲಿಯವರೆಗೆ ನಡೆದು ಹೋಗುವಷ್ಟು ಶಕ್ತಿ ಅವಳಲ್ಲಿ ಉಳಿದಿರಲಿಲ್ಲ. ದಾರಿ ಹೆಣ ಆಗುವ ಭಯ ಕ್ಷಣಕಾಲ ಅವಳನ್ನು ಕಾಡಿತು. ಒಂದು ವೇಳೆ ಹಾಗಾದಲ್ಲಿ ತನ್ನ ಮಗನನ್ನು ಮತ್ತೆ ಮುಂದೆಂದೂ ಕಾಣುವ ಭಾಗ್ಯ ತನ್ನದಾಗುವುದಿಲ್ಲ ಎಂಬ ಕಲ್ಪನೆಯಿಂದ ನವಿರಾಗಿ ಕಂಪಿಸಿದಳು. ಅಂದ ಮೇಲೆ ಲಾರಿಯಲ್ಲಿ ಏಕೆ ಹತ್ತಬಾರದು ? 'ಹ್ಞೂ' ಅಂದರಾಯಿತು. ತೀರಾ ತೀರಾ ಹಿಂದೆ ಕುಳಿತರಾಯಿತು. ಅವುಗಳ ಹಾಳು

ಮುಸಡಿ ನೋಡುವ ಪ್ರಸಂಗವೇ ಇರುವುದಿಲ್ಲ. ಅವಳ ಕಾಲು ಅಷ್ಟೊಂದು ನೋವು ಇರದಿದ್ದರೆ, ತನ್ನ ಮಗನನ್ನು ಕಣ್ತುಂಬ ಕಾಣಬೇಕೆಂಬ ಆತುರ ಅವಳನ್ನು ಕಾಡದೇ ಇದ್ದಿದ್ದರೆ ಅವರು ಹಗ್ಗ ಹಚ್ಚಿ ಎಳೆದು ಕೂಡ್ರಿಸಿದ್ದರೂ ಅವರ ಲಾರಿಯಲ್ಲಿ ಅವಳು ಕೂಡ್ರುತ್ತಿರಲಿಲ್ಲ.

ಮುದುಕಿ ಲಾರಿ ಹತ್ತಿದಳು. ಆ ವೈರಿಗಳಿಂದ ಎಷ್ಟು ಸಾಧ್ಯವೋ ಅಷ್ಟು ದೂರ ಕೂಡ್ರುವದರಲ್ಲಿದ್ದಳು. ಅಷ್ಟರಲ್ಲಿ ಅವರಲ್ಲಿ ಒಬ್ಬ ಕೂಗಿದ "ಮುದುಕಿ, ಓ ಮುದುಕಿ... ತತ್ತಿ ಕೊಡು... ಅದರೊಳಗಿನ ತತ್ತಿ ಕೊಡು..." ಮತ್ತೊಬ್ಬ ಆ ಮುದುಕಿಯ ಬೆನ್ನಿಗಿದ್ದ ಚೀಲವನ್ನು ಎಳೆದು ಅದರಲ್ಲಿ ತನ್ನ ಕೈ ತೂರಿಸಿದ.

"ತತ್ತಿ? ಅದರಲ್ಲಿ ತತ್ತಿ ಇಲ್ಲ... ಅವುಗಳನ್ನು ನಾ ಎಲ್ಲಿಂದ ತರಲಿ?" ಗೊಂದಲಗೊಂಡ ಮುದುಕಿ ಹೇಳಿದಳು. "ಈ ಲಾರಿಯಲ್ಲಿ ನಾನು ಕೂಡ್ರಬಾರದಾಗಿತ್ತು" ಎಂದುಕೊಂಡಳು.

ಮುದುಕಿಯ ಬೆನ್ನ ಮೇಲಿನ ಚೀಲ ಅವನ ಎಳೆತದ ರಭಸಕ್ಕೆ ಹರಿದು ಕೆಳಗೆ ಬಿತ್ತು. ಅದರಲ್ಲಿದ್ದ ಸೇಬುಗಳು ರಸ್ತೆಯ ಮೇಲೆ ಬಿದ್ದು ಹುಡಿಗೊಂಡವು. ಕಿವಿ ಪರದೆ ಹರಿದು ಹೋಗುವಂತೆ ಬಿದ್ದು ಬಿದ್ದು ನಗುತ್ತಿದ್ದ ಆ ಲಾರಿಯಲ್ಲಿಯ ನಾಯಿಗಳು ಮುದುಕಿಯನ್ನು ಲಾರಿಯಿಂದ ಕೆಳಗೆ ನೂಕಿದರು. ನೋವಿನ ಕಾಲನ್ನು ನೆಲಕ್ಕೆ ಹಚ್ಚಿ ಮುದುಕಿ ಬಿದ್ದಳು. ಕಪ್ಪು ಹೊಗೆ ಕಾರುತ್ತ ಧೂಳ ಹೊದಿಕೆಯಲ್ಲಿ ಅವಳನ್ನು ಹೂಳಿ ಲಾರಿ ವೇಗದಲ್ಲಿ ಓಡಿತು, ಮುದುಕಿ ಮೆಲ್ಲನೆ ಮೇಲೆದ್ದಳು. ನಡುಗುವ ಕೈಗಳಿಂದ ಸೇಬು ಹಣ್ಣುಗಳನ್ನು ಆಯ್ದುಕೊಂಡಳು. ಮತ್ತೆ ರಸ್ತೆಗುಂಟ ಕುಂಟುತ್ತ ನಡೆದಳು.

ನಾಲ್ಕಾರು ಹೆಜ್ಜೆ ನಡೆದು ದಣಿವಾರಿಸಿಕೊಳ್ಳಲು ಒಂದೆಡೆ ಕುಳಿತಳು. ಅಲ್ಲೇ ಇದ್ದ ಹೆಣ್ಣುಮಕ್ಕಳಿಂದ ಸ್ವಲ್ಪ ದೂರದಲ್ಲೇ ಕುಳಿತಳು. ಅದು ಅವಳಿಗೆ ಸಮಾಧಾನ ನೀಡಿತ್ತು. ಗಾಯಗೊಂಡ ಕಾಲು ಊದಿಕೊಂಡಿತ್ತು. ಗಾಯಗಳ ಉರಿತ ಏಕಪ್ರಕಾರ ಇದ್ದೇ ಇತ್ತು. ಜೇಲಿನತ್ತ ದೃಷ್ಟಿ ನೆಟ್ಟಳು. ಅದು ಅವಳ ನೋವನ್ನು ನುಂಗಿತು. ಮಗನ ನೆನಪುಗಳು ಮುತ್ತಿಗೆ ಹಾಕಿದವು. ಜೇಲು ನಿರ್ಜೀವವಾಗಿ, ನೀರಸವಾಗಿ ಕಾಣತೊಡಗಿತು. ಮುದುಕಿಯ ಆಲೋಚನೆಗಳು ಭಯದತ್ತ ವೇಗಗೊಂಡವು, "ಆ ಕಲ್ಲುಗೋಡೆಗಳ ನಡುವೆ ಮಗನನ್ನು ಕೂಡಿ ಹಾಕಿದ್ದಾರೆ... ಆ ತೆಗ್ಗಿನಲ್ಲಿ... ಬಹುಶಃ ಅವನು ಜೀವಂತ ಇರಲಿಕ್ಕಿಲ್ಲ..."

"... ಏ... ಮುದುಕಿ... ಯಾರಿಗಾಗಿ ನೀನು ಇಲ್ಲಿಗೆ ಬಂದಿರುವಿ?" ಒಂದು ಧ್ವನಿ ಅವಳ ಕಿವಿಗೆ ಬಿತ್ತು.

ಧ್ವನಿಯತ್ತ ಮುದುಕಿ ಹೊರಳಿದಳು. ಅವಳ ಮುಂದೆ ಒಬ್ಬ ಹೆಣ್ಣುಮಗಳು ನಿಂತಿದ್ದಳು. ಅವಳು ಇನ್ನೂ ಚಿಕ್ಕವಳು. ಅವಳ ಬಣ್ಣ ಕಪ್ಪು. ಉಣ್ಣೆ ಉಡುಪಿನಲ್ಲಿ ಅವಳ ಭುಜಗಳೆರಡೂ ಹಿತವಾಗಿ ಕಾಣುತ್ತಿದ್ದವು. ಅವಳ ಕಣ್ಣುಗಳಲ್ಲಿ ಮಗುವಿನ ಮುಗ್ಧತೆ ಇತ್ತು. ದಯೆ ಇತ್ತು. ದುಃಖವೂ ಇತ್ತು.

ಮುದುಕಿ ಉತ್ತರಿಸಿದಳು, "ಮಗು, ನನ್ನ ಮಗನಿಗಾಗಿ... ನನ್ನ ಮಗನಿಗಾಗಿ ಬಂದಿರುವೆ."

"ಎಲ್ಲರಿಗೂ ಅದೇ ದುಃಖ. ಅದೇ ಕಷ್ಟ. ಅದೇ ಕಣ್ಣೀರು", ಮುದುಕಿಯ ಪಕ್ಕದಲ್ಲಿ ಕುಳಿತುಕೊಳ್ಳುತ್ತ ಆ ಯುವತಿ ಹೇಳಿದಳು. ಆ ಯುವತಿ ತನ್ನ ಕಣ್ಣೀರೊರೆಸಿಕೊಳ್ಳುತ್ತ ಹೇಳಿದಳು, "ಅಲ್ಲಿ, ಆ ಕಲ್ಲುಗೋಡೆಗಳ ನಡುವೆ ನನ್ನ ಗಂಡ ಇದ್ದಾನೆ." ನೋವು ತುಂಬಿದ ನೋಟದಿಂದ ಮುದುಕಿ ತಲೆ ಅಲ್ಲಾಡಿಸಿ ಮೆಲ್ಲನೆ ಮಾತಾಡಿದಳು, "ಅದು ಕಳ್ಳರಿಗಾಗಿ, ಕೊಲೆಗಡುಕರಿಗಾಗಿ ಇರುವ ಸ್ಥಳ. ಆದರೆ ಈಗ ಅದು..."

"ಮುದುಕಿ, ನಿನ್ನ ಮಗ ಏನು ತಪ್ಪು ಮಾಡಿದ್ದ?" ಅಷ್ಟರಲ್ಲಿ ಸೈನ್ಯಾಧಿಕಾರಿಯೊಬ್ಬ ಜೇಲಿನ ಬಾಗಿಲು ತೆರೆದು ಹೊರಬಂದ. ಅವನು ಕುಳ್ಳ. ಅವನ ಹೊಟ್ಟೆ ಡೊಳ್ಳು. ಅವನ ತಲೆ ಬಕೆಟ್‌ನಂತೆ ಕಾಣುತ್ತಿತ್ತು. ಬಾಯಲ್ಲಿ ಎರಡೂ ಬದಿಗೆ ಹಣ್ಣುಗಳನ್ನು ತುಂಬಿಟ್ಟುಕೊಂಡಂತೆ ಬಲೂನಿನ ಗಾತ್ರದಲ್ಲಿ ಅವನ ಗಲ್ಲಗಳು ಊದಿಕೊಂಡಿದ್ದವು. ಅವನ ಕಣ್ಣುಗಳು ಕಾಡುಮೃಗಗಳ ಕಣ್ಣುಗಳಂತೆ ಕೆಂಡದುಂಡೆಗಳಾಗಿದ್ದವು. ಬೇರೆ ಯಾರದೋ ಬೂಟುಗಳನ್ನು ಮೆಟ್ಟಿಕೊಂಡವರಂತೆ ಅವನು ತೂಗಾಡುತ್ತ ನಡೆದಾಡುತ್ತಿದ್ದ. ಅಲ್ಲಿ ಗುಂಪುಗೂಡಿದ ಹೆಣ್ಣುಮಕ್ಕಳನ್ನು ನೋಡಿದ. ನೋಟದಲ್ಲಿ ತಿರಸ್ಕಾರ ತುಂಬಿತ್ತು. ಜೇಬಿನಿಂದ ಹಾಳೆ ಮತ್ತು ಪೆನ್ನನ್ನು ಹೊರತೆಗೆದ.

ಹೆಣ್ಣುಮಕ್ಕಳು ಅವನತ್ತ ನುಗ್ಗಿದರು. ಅವನನ್ನು ಸುತ್ತುವರಿದರು. ತಕ್ಷಣ ಅವನ ಕಣ್ಣುಗಳು ಅಸಹನೀಯ ಸಿಟ್ಟಿನಿಂದ ಉರಿಯತೊಡಗಿದವು. ಅವನನ್ನು ಸುತ್ತುವರಿದ ಆ ಹೆಣ್ಣುಮಕ್ಕಳು ಜೇಲಿನಲ್ಲಿರುವ ತಮ್ಮವರಿಗಾಗಿ ಕೊಡಲು ತಾವು ಏನನ್ನು ತಂದಿರುವುದು ಎಂಬುದನ್ನು ಬರೆಸಬೇಕಿತ್ತು. ಕಂಗೆಟ್ಟ ಹೆಣ್ಣುಮಕ್ಕಳ ನೂಕುನುಗ್ಗಲಿನಿಂದ ಕೆಂಡವಾದ ಆ ಕುಳ್ಳ ತನ್ನ ಹಳದಿ ಹಲ್ಲುಗಳನ್ನು ನಾಯಿಯಂತೆ ಅಗಲಗೊಳಿಸಿದ. ಪಕ್ಕದಲ್ಲೇ ಇದ್ದ ಹೆಣ್ಣುಮಕ್ಕಳಿಗೆ ಬೂಟುಗಾಲಿನಿಂದ ಒದೆಕೊಟ್ಟ. ಅದೆಲ್ಲಾ ಅವನಿಗೆ ಕೇವಲ ವಿಕೃತ ಮೋಜು.

ಪ್ರತಿಯೊಬ್ಬರ ಹೆಸರನ್ನು ಆ ಕುಳ್ಳ ಬರೆದುಕೊಂಡ. ಜೇಲು ಗೇಟಿನೊಳಗಡೆ ಹೋದ. ಗೇಟು ಮುಚ್ಚಿಕೊಂಡ. ನಾಪತ್ತೆಯಾದ. ತಾವು ಕಾಣಲು ಬಂದವರನ್ನು ಕಾಣುವ ಕಾತುರವನ್ನು ಕಣ್ಣಲ್ಲಿ ತುಂಬಿಕೊಂಡು ಜೇಲಿನ ಗೇಟಿನತ್ತ ದೃಷ್ಟಿನೆಟ್ಟು ಕುಳಿತುಕೊಳ್ಳುತ್ತಿದ್ದ. ಅವರಿಗೆಲ್ಲ ಕೊನೆಗೂ ಗಾಯದ ಮೇಲೆ ಬರೆ ಎಳೆವ ಗತಿ ಒದಗುತ್ತಿತ್ತು. ನಾಲ್ಕಾರು ತಾಸುಗಳ ನಂತರ ಜೇಲಿನ ಗೇಟು ತೆರೆದು ಹೊರಬರುತ್ತಿದ್ದ ಸೈನ್ಯಾಧಿಕಾರಿಯಿಂದ "ನೀವು ಕಾಣಲು ಬಂದ ನಿಮ್ಮ ಸಂಬಂಧಿಗಳು ಈ ಜೇಲನ್ನು ಬಿಟ್ಟಿದ್ದಾರೆ. ಅವರು ಯಾರೂ ಈಗ ಈ ಜೇಲಿನಲ್ಲಿಲ್ಲ" ಎಂಬ ಸಿದ್ಧ ಉತ್ತರ ಸಿಗುತ್ತಿತ್ತು. ಕಣ್ಣಿಗೆ ಮಣ್ಣೆರಚುವ ಈ ನಿತ್ಯ ದಿನದ ನಾಟಕದಿಂದ ಬೆಂದು ಬೇಗುದಿಗೊಂಡು ಸುರಿಸಿದ

# ಗಝಲ್

ಅಂದು ಮೈಗೆ ಹಚ್ಚಿದ ಅರಿಷಣ ಮುಖಕೆ ಮಸಿಯಾಗುತ್ತದೆಂದು ಗೊತ್ತಾಗಲಿಲ್ಲ.
ಅಂದು ಕೈಗೆ ಹಚ್ಚಿದ ಗೋರಂಟಿ ಕಜ್ಜಿಯಾಗಿ ಕಚ್ಚುತ್ತದೆಂದು ಗೊತ್ತಾಗಲಿಲ್ಲ

ಕಣ್ಣಮುಂದೆ ಕಂಡದ್ದು ಬರಿ ಕಾಮನಬಿಲ್ಲು ಬಣ್ಣ ಚೆಲುವು ಒಲವು ಮಾತ್ರವೇ
ಕೈತುಂಬ ತೊಟ್ಟ ಹಸಿರು ಬಳೆಗಳು ಕೋಳಗಳಾಗುತ್ತವೆಂದು ಗೊತ್ತಾಗಲಿಲ್ಲ

ಗೃಹಿಣಿಯ ಗತ್ತಲ್ಲೇ ಹಾಕಿಕೊಂಡ ಕಾಲಂದುಗೆ ಕಾಲುಂಗುರಗಳು
ಕಾಲಿಗೆ ಸುತ್ತೆಳೆವ ಸರಪಳಿಗಳಾಗುತ್ತವೆಂದು ಗೊತ್ತಾಗಲಿಲ್ಲ

ಮಾತು ಮೌನವಾಗಿತ್ತು ಅಂತರಪಟದ ಪರದೆಯ ಮೇಲೆ ನವಿಲುಗಳದೇ ಕುಣಿತ
ಹಾಕಿದ ಉಡಿಯಕ್ಕಿ ಒಡಲ ಬೆಂಕಿಯಾಗಿ ಸುಡುತ್ತದೆಂದು ಗೊತ್ತಾಗಲಿಲ್ಲ

ಕಕ್ಕುಲತೆಯ ಬಳ್ಳಿ ಹಚ್ಚಿ ಹೋದರು ಅಂದು ಬಂಧು-ಬಾಂಧವರೆಲ್ಲಾ ಬಂದು
ಅಕ್ಷತೆಯ ಹಾಕಿ ಹರಸಿದ ಹಾರೈಕೆ ಶಾಪವಾಗಿ ಕಾಡುತ್ತದೆಂದು ಗೊತ್ತಾಗಲಿಲ್ಲ

ಬೆರಳಲ್ಲಿ ಬೆರಳಿರಿಸಿ ಜೊತೆಗೂಡು ನಡೆದ ಸಂಭ್ರಮದ ಏಳು ಹೆಜ್ಜೆಗಳು
ರಕ್ತದ ಹೆಜ್ಜೆಗುರುತುಗಳಾಗಿ ಬಾಳಪುಟದಲ್ಲಿ ಉಳಿಯುತ್ತವೆಂದು ಗೊತ್ತಾಗಲಿಲ್ಲ

ಮಂತ್ರಗಳ ಘೋಷ ಮಂಗಳವಾದ್ಯ ಧನ್ಯತೆಯ ಭಾವ ಮನದ ಒಳಗೆ
ತಲೆ ಬಾಗಿಸಿ ಕೊರಳೊಡ್ಡಿದ ಅರುಣಾಗೆ ಬಲಿಪಶುವಾದೆನೆಂದು ಗೊತ್ತಾಗಲಿಲ್ಲ

**ಅರುಣಾ ನರೇಂದ್ರ**
ನಂದಿನಗರ, ನಂದೀಶ್ವರ ಶಾಲೆ ಹತ್ತಿರ, ಕೊಪ್ಪಳ - ೫೮೩ ೨೩೧

ಕಣ್ಣೀರಿಗೆ ಮಿತಿ ಇಲ್ಲ. ಸುಟ್ಟು ಸೂರೆಗೊಂಡ ಹೃದಯಗಳಿಗೆ ಲೆಕ್ಕ ಇಲ್ಲ. ಜೇಲಿನಲ್ಲಿದ್ದ ಅವರ ಸಂಬಂಧಿಗಳು ಹೋದದ್ದಾದರೂ ಎಲ್ಲಿಗೆ, ನಂತರದಲ್ಲಿ ಆ ಕೈದಿಗಳನ್ನೆಲ್ಲ ಒಯ್ದುದ್ದಾದರೂ ಎಲ್ಲಿಗೆ, ಎನ್ನುವುದು ಯಾರಿಗೂ ತಿಳಿಯದು.

ಮಗನಿಗಾಗಿ ಮುದುಕಿ ತಾಸುಗಟ್ಟಲೆ ಕಾಯುತ್ತ ಕುಳಿತಲ್ಲೇ ಕುಳಿತಿದ್ದಳು. ಅಂಗುಲಂಗುಲ ಕರುಳನ್ನು ಕತ್ತರಿಸುತ್ತ ಕಾದ ಹಂಚಿನ ಮೇಲೆ ಹುರಿದು ಮುಕ್ಕುವ ನಾಟಕ ಮುದುಕಿಗೆ ಗೊತ್ತಿಲ್ಲ. ತನ್ನ ಮಗನನ್ನು ಕಾಣಲು ಇನ್ನೇನು ಸ್ವಲ್ಪ ಹೊತ್ತಿನಲ್ಲೇ ತನ್ನನ್ನು ಕರೆಯುತ್ತಾರೆಂಬ ಭಾರಿ ನಿರೀಕ್ಷೆ ಇಟ್ಟುಕೊಂಡೇ ಕಾಯುತ್ತ ಕುಳಿತಿದ್ದಳು. ತನ್ನ ಮಗನನ್ನೇ ತನ್ನ ಬಳಿ ಕಳಿಸಬಹುದು, ಹಾಗಾದಲ್ಲಿ ತಾಸುಗಟ್ಟಲೆ ತನ್ನ ಮಗನೊಂದಿಗೆ ಮಾತಾಡಬಹುದು, ಬಹುಶಃ ಮಗನೊಂದಿಗೆ ತನ್ನ ಆ ಮಾತುಗಳು ತನ್ನ ಕೊನೆಯ ಮಾತುಗಳೂ ಆಗಬಹುದೇನೋ ಎಂಬ ಭಯ ಅವಳಲ್ಲಿ ನವಿರಾದ ನಡುಕವನ್ನು ಹುಟ್ಟಿಸುತ್ತಿತ್ತು.

"ನನ್ನ ಮಗ ಯಾರಿಗೂ ಏನೊಂದೂ ಕೇಡು ಮಾಡಿದವನಲ್ಲ, ಏನೂ ಮಾಡಿದವನಲ್ಲ" ಆ ಮುದುಕಿ ಪಕ್ಕದ ಹೆಣ್ಣುಮಗಳಿಗೆ ಹೇಳಿದಳು, "ಅವನು ತನ್ನ ಜೀವನದಲ್ಲಿ ಯಾರೊಬ್ಬರನ್ನೂ ನೋಯಿಸಿದವನಲ್ಲ ಎಲ್ಲರಿಗೂ ತನ್ನ ಕೈಲಾದ ಸಹಾಯ ಮಾಡುತ್ತಿದ್ದ. ನನ್ನ ಮಗ ಎಷ್ಟೊಂದು ಒಳ್ಳೆಯವನು ಅಂದ್ರೆ ಅವನು ಯಾರೊಬ್ಬರ ಬಗೆಗೂ ಕೆಟ್ಟ ಮಾತನ್ನು ಆಡಿದವನಲ್ಲ. ಅಂಥ ಮಾತನ್ನು ನಾನು ಅವನಿಂದ ಎಂದೂ ಈ ಕಿವಿಯಿಂದ ಕೇಳಿಲ್ಲ. ಆಮೇಲೆ ಈ ಹಾಳಾದ ಯುದ್ಧ ಶುರು ಆಯ್ತು. ಈ ಹಲ್ಲೆಕೋರರು ಬಂದರು. ಈ ಹಲ್ಲೆಕೋರರ ಕೆಟ್ಟತನ, ಕ್ರೂರತನ ಸಹಿಸಿಕೊಳ್ಳಲಿಕ್ಕೆ ಅವನಿಗೆ ಆಗಲಿಲ್ಲ. ಆಮೇಲಿಂದ ನಾನು ಅವನನ್ನು ಕಂಡದ್ದೇ ಅಪರೂಪ. ಅವನು, ಅವನ ಹುಡುಗರು ಅವರೆಲ್ಲರೂ ಕಾಡಿನಲ್ಲಿ ಇರಲಿಕ್ಕೆ ಶುರು ಮಾಡಿದ್ರು. ಅವರೆಲ್ಲ ಅಲ್ಲಿ ಏನು ಮಾಡಿದರು ಅನ್ನೋದು ಆ ದೇವರಿಗೇ ಗೊತ್ತು."

"ಇನ್ನು ನನ್ನ ಗಂಡ ಹೆಳವ. ನಡೀಲಿಕ್ಕೆ ಬರ್ತಿರಲಿಲ್ಲ. ಒಂದು ವಯಸ್ಸಿನಲ್ಲಿ ಅಪಘಾತಕ್ಕೀಡಾಗಿ ಕಾಲು ಕಳೆದುಕೊಂಡಿದ್ದ. ಅದಕ್ಕಾಗಿ ಅವನನ್ನು ಯಾರೂ ಕೆಲಸಕ್ಕೆ ಸೇರಿಸಿಕೊಳ್ತಿರಲಿಲ್ಲ. ಆದ್ರೆ ಅವನು ಎಂಥ ಒಳ್ಳೇ ಮನುಷ್ಯ! ಅವ ಎಷ್ಟೊಂದು ಒಳ್ಳೆಯವ!! ನಾವು ಮದುವೆಯಾಗಿ ಎಷ್ಟೊಂದು ವರ್ಷ ಆದ್ರೂ ಅದು ಒಂದು ದಿವಸ ಅನಿಸ್ತೈತಿ. ...ಯಾಕೆ ಗೊತ್ತಾ ?... ಅಷ್ಟು ಪ್ರೀತೀಲೆ ನಾವು ಇದ್ವಿ ... ಒಬ್ಬರನ್ನೊಬ್ಬರು ನಾವು ಅಷ್ಟೊಂದು ಪ್ರೀತಿಸ್ತಿದ್ವಿ ..."

ಕೆಲವು ಸಲ ನನ್ನ ಮಗ ರಾತ್ರಿ ಬರುತ್ತಿದ್ದ. ನನ್ನ ಹಾಸಿಗೆ ಮೇಲ್ಗಡೆ ಇದ್ದ ಕಿಟಕಿ ಬಾರಿಸತಿದ್ದ. "ಅವ್ವಾ, ಬಾಗಿಲಾ ತೆಗಿ. ನಾನು... ಅವ್ವಾ... ನಾನು ... ನಿನ್ನ ಮಗಾ..." ಅಂತಿದ್ದ. ಮುದುಕಿ ತನ್ನಷ್ಟಕ್ಕೆ ತಾನೇ ಮಾತಾಡುತ್ತಿದ್ದವಳಂತೆ ಮಾತು ಮುಂದುವರಿಸಿದಳು, "ನಾನು ಹಾಗೇ ಬಾಗಿಲಾ ತೆರೀತಿದ್ದೆ. ಅವನಿಗೆ ಏನಾದರೂ ಇದ್ದದ್ದನ್ನು ತಿನ್ನಲಿಕ್ಕೆ ಕೊಡುತ್ತಿದ್ದೆ. ಮತ್ತೆ ಅವನನ್ನು ನಾನು ಕೇಳ್ತಿದ್ದೆ, "ಮಗಾ, ಈ ಕಷ್ಟ, ಈ




ಕಣ್ಣೀರು ಇನ್ನೂ ಎಷ್ಟು ದಿವಸ ಮಗಾ ? ಇದು ಇನ್ನೂ ಹೀಂಗ ಬಾಳ ಕಾಲ ಇರುತ್ತಾ ?" ನನ್ನ ಮಾತಿಗೆ ಅವನು ಮುಗುಳ್ನಗೆ ಬೀರುತ್ತಿದ್ದ. ಮತ್ತೆ ನನಗೆ ಹೇಳ್ತಿದ್ದ, "ಅವ್ವಾ, ನೀನು ಕಣ್ಣೀರು ಹಾಕಬೇಡ. ಇಷ್ಟರಲ್ಲೇ ನಾವು ಅವರನ್ನು ಕಿತ್ತುಹಾಕ್ತೀವಿ. ದೂರ ಓಡಿಸ್ತೀವಿ."

"ನೋಡು, ಎಂಥಾ ಕೆಟ್ಟ ಜನ ! ಅವರು ನನ್ನ ಗಂಡ ಅಂಥ ಆ ಬಡಪಾಯಿ ಕಾಲಿಲ್ಲದವನನ್ನು ಹೊತ್ತೊಯ್ದರು. ಅವರ ಗಾಡಿ ಅಪ್ಪಳಿಸಿ ಅಪಘಾತ ಕ್ಕೀಡಾಯಿತು. ಅದು ಯಾರ ತಪ್ಪು ? ನಮ್ಮ ಹಳ್ಳಿಯ ಜನರನ್ನು ಒತ್ತೆಯಾಳಾಗಿ ಹಿಡಕೊಂಡು ಹೋದರು. ಅವತ್ತಿನಿಂದ ಇವತ್ತಿನವರೆಗೂ ಅವರಲ್ಲಿ ಒಬ್ಬನೇ ಒಬ್ಬನನ್ನೂ ಯಾರೊಬ್ಬರೂ ನೋಡಿಲ್ಲ."

"ಒಮ್ಮೆ ನನ್ನ ಮಗ ಜಡ್ಡಿಗೆ ಬಿದ್ದ. ಆ ಹಾಳು ಕಾಡು ಎಷ್ಟಾದರೂ ಕಾಡೇ. ಅದೆಂದಾದರೂ ಮನೆ ಆಗಲಿಕ್ಕೆ ಸಾಧ್ಯಾನಾ ? ಅವನಿಗೆ ಎಂಥಾ ಜ್ವರ ಅಂದ್ರೆ ಅವನ ಮೈ ಬೆಂಕಿ ಆಗಿತ್ತು. ಅವನ ಹುಡುಗರು ಅವನನ್ನು ಮನೆಗೆ ತಂದುಹಾಕಿದ್ರು. ಪ್ರಜ್ಞೆ ಇದ್ದಿಲ್ಲ. ಗಿಡಮೂಲಿಕೆ ತಪ್ಪಲು, ಕಂಟಿ, ಕಷಾಯ ಏನೆಲ್ಲಾ ನನ್ನ ಬುದ್ಧಿಗೆ ತಿಳಿದದ್ದನ್ನೆಲ್ಲ ಕುಡಿಸಿ, ತಿನ್ನಿಸಿ, ಮೈಗೆ ಹಚ್ಚಿ ಆರೈಕೆ ಮಾಡಿದೆ. ನನ್ನ ಮಗ ಆರಾಮಾದ. ನನ್ನ ಹೋದ ಜೀವ ಹೊಳ್ಳಿ ಬಂದಂಗಾತು..."

"ನಾನು ಇಲ್ಲಿಗೆ ಬರಲಿಕ್ಕೆ ಶುರು ಮಾಡಿ ಎರಡು ತಿಂಗಳು ಆಯಿತು. ನನ್ನ ಮಗನನ್ನ ಎಲ್ಲೋ ಕೆಲಸಕ್ಕೆ ಬೇರೆ ಕಡೆ ಕರಕೊಂಡು ಹೋಗ್ಯಾರ ಅಂತಾ ಆ ಸೈನ್ಯಾಧಿಕಾರಿ ಹೇಳತಾನ. ಅವ ಹೇಳೋದು ಸುಳ್ಳು ಅನ್ನೋದು ನನಗೆ ಅರ್ಥ ಆಗ್ತೈತಿ. ಆದರೆ ಅದನ್ನ ನಂಬಲಿಕ್ಕ ಆಗ್ತಾ ಇಲ್ಲ. ಆದರೂ ನನಗೆ ಇನ್ನೂ ಆಶೆ ಐತಿ. ಅದರ ಸಲುವಾಗಿ ನಾನು ಇಲ್ಲಿಗೆ ಬರತಾ ಇದ್ದೀನಿ. ನನ್ನ ಹೆಸರು ಬರೆಯಿಸಿ ನನ್ನ ಮಗನನ್ನ ಒಮ್ಮೆಯಾದರೂ ಕಣ್ತುಂಬಾ ಕಾಣಬೇಕು ಅಂತಾ ಕಾಯತಾ ಇದ್ದೀನಿ."

"ನನ್ನ ಮಗ ಆರಾಮಾದ ಅಂತಾ ಹೇಳ್ತಾ ಇದ್ದೆ. ಹೌದು ಹೌದು. ಮುಂದೆ ಅದನ್ನು ಮರೆತೇಬಿಟ್ಟೆ. ಮತ್ತೆ ಏನೇನೋ ಹೇಳಿದೆ. ಈಗ ನನ್ನ ಮಗ ಆರಾಮಾದ ಅಂದೆನಲ್ಲ. ಆಮೇಲೆ ಏನಾಯಿತು ಅಂದರೆ ಆ ರಾಕ್ಷಸರು ಮತ್ತೆ ನನ್ನ ಮನೆಗೆ ಬಂದರು. ನನ್ನ ಮಗನನ್ನ ನನ್ನಿಂದ ಕಸಗೊಂಡು ಹೋದರು. ನನ್ನ ಪಕ್ಕದ ಮನಿಯಾವ ಹುಳ ಬಿದ್ದು ಸಾಯಲಿ. ಅವನSS ಆ ರಾಕ್ಷಸರಿಗೆ ನನ್ನ ಮಗ ಮನೆಗೆ ಬಂದದ್ದನ್ನು ತಿಳಿಸಿದವ. ಅದSS ಆಗ ಬೆಳಕ ಹರಿದಿತ್ತು. ನನ್ನ ಮಗ ಬಟ್ಟೆ ಹಾಕಿಕೊಂಡ. ನನಗೆ ಹೇಳಿದ, "ಅವ್ವಾ, ನಾನು ಹೋಗಬೇಕು." ನಾನೊಂದು ಮುದಿಹುಚ್ಚಿ. ನಾನು ಅವನನ್ನು ನಿಲ್ಲಿಸಿದೆ. "ಮಗಾ, ಸ್ವಲ್ಪ ಇರು. ನಿನಗಾಗಿ ನಾನು ಒಂದು ಕೇಕ್ ಬೇಯಿಸಿ ಕೊಡ್ತೀನಿ" ಅಂದೆ. ಅಷ್ಟ ಹೇಳಿ ನನ್ನ ಮಗನಿಗೆ ಕೇಕ್ ಬೇಯಿಸಲಿಕ್ಕೆ ಹತ್ತಿದ್ದೆ. ಅಷ್ಟರಲ್ಲೇ ಅವರು ಬಾಗಿಲು ದಬ್ಬಿ ಒಳಗೆ ಬಂದು ನನ್ನ ಕಣ್ಣೆದುರಿನಲ್ಲೇ ರಟ್ಟೆ ಹಿಡಿದು ನನ್ನ ಮಗನನ್ನು ಎಳೆದುಕೊಂಡು ಹೋದರು."

ತನ್ನನ್ನೇ ಮರೆತು ಭಾವದುಂಬಿ ಇಷ್ಟೆಲ್ಲವನ್ನು ಆ ಮುದುಕಿ ಹೇಳಿ ಇನ್ನೂ ಹೇಳುವುದನ್ನು ಮುಂದುವರಿಸುವುದರಲ್ಲಿದ್ದಳು. ಅಷ್ಟರಲ್ಲಿ ಸೈನ್ಯಾಧಿಕಾರಿ ಜೇಲಿನ ಬಾಗಿಲು ತೆರೆದು ಬಾಗಿಲ ಬಳಿ ನಿಂತುಕೊಂಡ. ಮುದುಕಿಯ ಹೆಸರನ್ನು ಜೋರಾಗಿ ಕೂಗಿದ.

ಮಗನನ್ನೇ ಕಂಡಷ್ಟು ಉತ್ಸಾಹದಿಂದ ಮುದುಕಿ ದಿಢೀರನೆ ಎದ್ದು ನಿಂತಳು. ತನ್ನೆಲ್ಲ ನೋವು, ಬಳಲಿಕೆ ಮರೆತು ತಾರುಣ್ಯ ಸಹಜ ಉತ್ಸಾಹ ಹೊಂದಿ ಬಳಲಿದ ಕಾಲುಗಳನ್ನೆಳೆದುಹಾಕುತ್ತ ಜೇಲಿನ ಬಾಗಿಲ ಬಳಿ ನಡೆದಳು. ಕಾತುರ, ಕಳವಳದಿಂದ ಅವಳ ಎದೆಬಡಿತ ಹೆಜ್ಜೆಹೆಜ್ಜೆಗೂ ಹೆಚ್ಚುಗೊಳ್ಳತೊಡಗಿತ್ತು. ತಾನು ವೇಗವಾಗಿ ನಡೆಯುತ್ತಿದ್ದೇನೆಂದು ಅವಳು ಭಾವಿಸಿದಳು. ಆದರೆ ಬಾಗಿಲು ಇನ್ನೂ ದೂರ ಇತ್ತು. ಬಹಳ ಹೊತ್ತಿನ ನಂತರ ದೇವರಿಂದಲೂ ಧಿಕ್ಕರಿಸಲ್ಪಟ್ಟ ಆ ಬಾಗಿಲ ಬಳಿ ಮುದುಕಿ ನಿಂತಳು.

ಮುದುಕಿ ಜೇಲಿನ ಬಾಗಿಲು ದಾಟಿ ಜೇಲಿನ ವಿಶಾಲ ಅಂಗಳದೊಳಗೆ ಕಾಲಿಟ್ಟಳು. ಅದು ನಿರ್ಜನವಾಗಿತ್ತು. ಬಿಸಿಗಾಳಿ ಹಳದಿ ಧೂಳಿನ ಸುರುಳಿಯನ್ನೆಬ್ಬಿಸಿ ಅಂಗಳದ ಕಸಗುಡಿಸುತ್ತಿತ್ತು. ಸಶಸ್ತ್ರ ಕಾವಲುಗಾರರು ಬೇಸರಿಕೆ, ಬಳಲಿಕೆಯಿಂದ ಕಾಲೆಳೆದು ಹಾಕುತ್ತ ಅತ್ತಿಂದಿತ್ತ ಇತ್ತಿಂದತ್ತ ಯಾಂತ್ರಿಕವಾಗಿ ಹೆಜ್ಜೆ ಹಾಕುತ್ತಿದ್ದರು. ಮಂಪರುಕಣ್ಣಿನಿಂದ ಆಗಾಗ ಜೇಲಿನ ಕಿಡಕಿಗಳ ಸಳಿಗಳತ್ತ ನೋಡುತ್ತಿದ್ದರು. ಅಲ್ಲಿ ಸ್ಮಶಾನ ಮೌನ ಸಿಂಹಾಸನಗೊಂಡಿತ್ತು. ಒಂದು ರೀತಿಯ ದುಃಖ ದುಗುಡದ ರಣಗುಡುವ ವಾತಾವರಣ ತುಂಬಿಕೊಂಡಿತ್ತು. ಬಕೆಟ್ ತಲೆಯ ಸೈನ್ಯಾಧಿಕಾರಿ ಕಮ್ಮಾರನ ತಿದಿಯಂತೆ ಭುಸುಗುಡುತ್ತ ಮುದುಕಿಯ ಹಿಂದೆ ನಿಂತಿದ್ದ.

ಮುದುಕಿ ಇಂಥ ಚಿತ್ರಣವನ್ನು ಕಲ್ಪಿಸಿಕೊಂಡಿದ್ದಿಲ್ಲ. ಬೇರೆಯದೇ ಚಿತ್ರ ನಿರೀಕ್ಷಿಸಿದ್ದಳು. ಅವಳ ಕಾಲು ಶಕ್ತಿಹೀನಗೊಂಡಿದ್ದವು. ಅವಳ ಪಾದದಡಿಯಲ್ಲಿ ಕಾದಹರಳುಗಳು ಏಕಪ್ರಕಾರ ಬರೆಕೊಡುತ್ತಿದ್ದವು. ಬೆನ್ನ ಹಿಂದೆ ನಿಂತ ಸೈನ್ಯಾಧಿಕಾರಿ ತುದಿಬೆರಳುಗಳಿಂದ ಅವಳನ್ನು ನೂಕಿದಾಗ ಅಕ್ಷರಶಃ ನೆಲಕ್ಕೆ ಬೀಳುವುದರಲ್ಲಿದ್ದಳು.

ಕಳಪೆ ದರ್ಜೆಯ, ತಂಬಾಕಿನ ಗಬ್ಬುವಾಸನೆ ತುಂಬಿದ ಕೋಣೆಯಲ್ಲಿ ಮುದುಕಿಯನ್ನು ತಳ್ಳಿದರು. ಅವಳಿಗಾಗಿ ಕಾಯುತ್ತ ಆ ಕೋಣೆಯಲ್ಲಿ ಆಗಲೇ ಒಬ್ಬ ಸೈನ್ಯಾಧಿಕಾರಿ ನಿಂತಿದ್ದ. ಅತಿಯಾದ ಕುಡಿತದಿಂದ ತೆಳುಗೊಂಡ ಮೈಕಟ್ಟಿನ ಅವನ ಕಣ್ಣುಗಳ ಕೆಳಭಾಗಗಳು ದಪ್ಪಗೆ ಉಬ್ಬಿದ್ದವು. ಅವನು ಮುದುಕಿಯತ್ತ ಉದಾಸೀನ ನೋಟ ಬೀರಿದ. ಆ ಮೊದಲು ಜೇಲು ಬಾಗಿಲಿನಿಂದ ಒಳಗೆ ಕರೆದುಕೊಂಡು ಬಂದ ಬಕೆಟ್ ತಲೆಯ ಸೈನ್ಯಾಧಿಕಾರಿ ಕಾಣೆಯಾಗಿದ್ದ. ಬಹುಶಃ ಮುದುಕಿಯನ್ನು ಕಾಯಲು ಒಬ್ಬ ಕಾವಲುಗಾರನನ್ನು ಕಳುಹಿಸಲು ಹೋಗಿರಬೇಕು.

ಮುದುಕಿ ಮೆಲ್ಲನೆ ಆ ಕೋಣೆಯಲ್ಲಿದ್ದ ಕಲ್ಲುಬೆಂಚಿಯ ಮೇಲೆ ಕುಳಿತಳು. ತನ್ನ ಬೆನ್ನ ಮೇಲಿನ ಮೂಟೆಯನ್ನು ಪಕ್ಕದಲ್ಲಿ ಇಟ್ಟುಕೊಂಡಳು. ತಲೆಯ ಮೇಲಿನ ಉಣ್ಣೆಯ ಹೊದಿಕೆ ತೆಗೆದು ಅದನ್ನು ಮೂಟೆಯ ಮೇಲೆ ಹೊದಿಸಿದಳು. ಈಗ ಅವಳ ತಲೆಯ ಮೇಲೆ ಬಿಳಿ ತುಂಡು ಹೊದಿಕೆ ಮಾತ್ರ ಇತ್ತು. ವೇಳೆ ಅಸಹನೀಯ ಮಟ್ಟದ ನಿಧಾನಗತಿಯಲ್ಲಿ ತೆವಳುತ್ತಿತ್ತು. ಕಾವಲುಗಾರನೊಬ್ಬ ಬಾಗಿಲ ಬಳಿ ಕುಳಿತಲ್ಲೇ ಗೊರಕೆ ಕೊರೆಯತೊಡಗಿದ. ಒಂದು ಕಪ್ಪು ಗುಂಗಾಡು ಹುಳು ಆ ಕಿಡಕಿಯ ಹೊಲಸು ಮೆತ್ತಿದ ಗಾಜಿನ ಬಳಿ ಬಿಟ್ಟುಬಿಡದೆ ಗುಂಯ್‌ಗುಡುತ್ತಿತ್ತು. ಮುದುಕಿಯನ್ನು ಕೋಣೆಯಲ್ಲಿ ತಳ್ಳಿ ಸುಮಾರು ಹೊತ್ತಾದರೂ ಅಲ್ಲಿಗೆ ಬೇರೆ ಯಾರೊಬ್ಬರೂ ಹೆಜ್ಜೆ ಇಡಲಿಲ್ಲ. ಅವಳ ಮಗನನ್ನೂ ಕರೆತರಲಿಲ್ಲ.

"ಇದಕ್ಕೆ ಕೊನೆಯೆಂಬುದು ಇದೆಯೆ ?" ಮುದುಕಿ ಚಿಂತೆಯಿಂದ ಉಡುಗಿದಳು. ನಡುಗಿದಳು. "ಇದೇ ರೀತಿ ನಾನು ಇನ್ನೂ ಬಹಳ ಹೊತ್ತು ಕಾಯಬೇಕೆ ?" ಎಂದು ಕಾವಲುಗಾರನನ್ನು ಕೇಳಬೇಕೆಂಬ ಆಶೆ ಆ ಮುದುಕಿಯಲ್ಲಿ ಕ್ಷಣಕ್ಷಣಕ್ಕೂ ತೀವ್ರಗೊಳ್ಳತೊಡಗಿತು. ಹಾಗೇ ಅಂದುಕೊಂಡು ಆ ಕಾವಲುಗಾರನನ್ನು ನೋಡುತ್ತಿದ್ದ ಪ್ರತಿಕ್ಷಣವೂ ಹಾಗೆಲ್ಲ ಅವನನ್ನು ಕೇಳುವುದು ವ್ಯರ್ಥ ಎಂದುಕೊಂಡು ಸುಮ್ಮನಾಗುತ್ತಿದ್ದಳು. ಮಗನ ನೆನಪು ಒತ್ತರಿಸಿಬರತೊಡಗಿದಂತೆ ಕಾತರಿಸಿ ಕಣ್ಣಗಲಿಸಿ ಸುತ್ತಲೂ ನೋಡುತ್ತಿದ್ದಳು. ಕಾಯುವುದು ಎಂಥಾ ನರಕ !

ಸ್ವಲ್ಪ ದೂರದಲ್ಲಿ ದಪ್ಪಗಾತ್ರದ ಮೆತ್ತನೆಯ ಕುರ್ಚಿಯಲ್ಲಿ ಒಬ್ಬ ಸ್ಫುರದ್ರೂಪಿ, ಆದರೆ ದುರಹಂಕಾರಿ ಅಧಿಕಾರಿ ಸಂತೋಷವಾಗಿ ಮೈಚೆಲ್ಲಿ ಕುಳಿತಿದ್ದ. ಅವನ ಸ್ಥೂಲದೇಹ ಆ ಕುರ್ಚಿಯ ಮೇಲೆ ಸ್ವಚ್ಛಂದವಾಗಿ ಹರಡಿ ಮತ್ತಿಷ್ಟು ಉಬ್ಬಿಕೊಂಡಿತ್ತು. ತೊಟ್ಟ ಹಸಿರು ಜಾಕೆಟ್ ಯಾವುದೇ ಕ್ಷಣದಲ್ಲಿ ಹರಿದುಹೋಗಬಹುದು ಎಂಬ ಹೆದರಿಕೆಗೆ ಹಸಿರು ನಿಶಾನೆ ತೋರಿಸುತ್ತಿತ್ತು. ಬೋಳುತಲೆಗೆ ಟೊಪ್ಪಿಗೆ ಬಲವಾಗಿ ಅಂಟಿಕೊಂಡಿತ್ತು. ಅದು ಚಕ್ರಾಕಾರ ಕಾಣುತ್ತಿತ್ತು. ಆ ಟೊಪ್ಪಿಗೆಯ ಮುಂಭಾಗದ ಮೇಲೆ ಮಧ್ಯದಲ್ಲಿ ತಲೆಬುರುಡೆ ಹಾಗೂ ಅದರಡಿಯಲ್ಲಿ ಎರಡು ಎಲುಬುಗಳನ್ನು ಕ್ರಾಸ್ ಆಗಿ ಇಟ್ಟ ಚಿತ್ರ ಕಣ್ಣಿಗೆ ರಾಚುತ್ತಿತ್ತು.

ಮುದುಕಿಯನ್ನು ಅವನ ಎದುರಿಗೆ ಕರೆತಂದು ನಿಲ್ಲಿಸಲಾಯಿತು. ಹತಾಶ ಸ್ಥಿತಿಯ ಅಂಚಿನಲ್ಲಿದ್ದ ಮುದುಕಿಯ ಕಾಲುಗಳು ನಿಲ್ಲುವ ಶಕ್ತಿಯನ್ನು ಕ್ರಮೇಣ ಕಳೆದುಕೊಳ್ಳಲಾರಂಭಿಸಿದವು. ಮುದುಕಿ ನಾಝಿಯ ಇರಿವ ಉರಿಗಣ್ಣುಗಳನ್ನು ನೋಡಿದಳು. ಯಾವುದೋ ಒಂದು ಗಂಭೀರ ಎಚ್ಚರಿಕೆಯ ಮುನ್ಸೂಚನೆ ಅವಳ ಮೈಮನ ತುಂಬಿಕೊಂಡಿತು. ಇಂಥ ಈ ರಾಕ್ಷಸನನ್ನು ನೋಡಲಿಕ್ಕೆಂದೇ ತಾನು ಇಷ್ಟೊಂದು ಕಷ್ಟಪಟ್ಟು ಇಲ್ಲಿಗೆ ಬರಬೇಕಾಯಿತೆ ? ತನ್ನ ಮಗನನ್ನು ನೋಡಲಿಕ್ಕೆ ಈ ಕಟುಕ ತನ್ನನ್ನು ಖಂಡಿತ ಬಿಡುವುದಿಲ್ಲ ಎಂಬುದು ಮುದುಕಿಗೆ ನಿಧಾನವಾಗಿ ಖಚಿತವಾಗತೊಡಗಿತು.

ಬವಳಿ ಬಂದಂತಾಯಿತು. ಬೇರು ಸಡಿಲಿದ ಮರದಂತೆ ಮೆಲ್ಲನೆ ಕುಸಿದಳು. ಬಾಗಿಲತ್ತ ಕಣ್ಣಗಲಿಸಿ ದಿಟ್ಟಿಸುತ್ತ ಕುಳಿತಳು. ಕುತೂಹಲಭರಿತ ಕಣ್ಣುಗಳಿಂದ ಮುದುಕಿಯತ್ತ ಆ ನಾಝಿ ಪ್ರಶ್ನಿಸುವ ಧಾಟಿಯಲ್ಲಿ ಹರಿತ ನೋಟ ಬೀರಿದ. ಗಡಸು ಧ್ವನಿಯಿಂದ ಕೇಳಿದ, "ಏ ಮುದುಕಿ, ನಿನ್ನ ಮಗ ಎಲ್ಲಿ ಅದಾನ ?"

ಮುದುಕಿಗೆ ಆ ಪ್ರಶ್ನೆ ತಿಳಿಯಲಿಲ್ಲ. ತಡವರಿಸುತ್ತ ಮಾತಾಡಿದಳು, "ಅವನು ಇಲ್ಲೇ ಇದ್ದಾನೆ. ನಾನು ಎರಡು ದಿವಸ ಇಲ್ಲಿಗೆ ನಡೆಯುತ್ತ ಬಂದಿದೀನಿ..."

ನಾಝಿಯ ಮುಖ ಒಮ್ಮೆಲೆ ಕೆಂಪೇರಿತು.

---

# ಹಸನ್ಮುಖದ ಹಿಂದೆ ನಯವಂಚಕ ಗುಳ್ಳೆನರಿ

ಸದಾ ಇದಿರಾಗುವ ಹಸನ್ಮುಖ
ನುಡಿಯುವುದಿಲ್ಲ ಒಡಲ ಹಾಲಾಹಲ
ಖುಷಿಪಡುತ್ತದೆ, ಬೆನ್ನು ನೀವುತ್ತದೆ
ಕಣ್ಣಲ್ಲೇ ಕೃತಜ್ಞತೆ ಕಡಲೋಪಾದಿಯಲ್ಲಿ
ಉಕ್ಕಿ ಹರಿಯುತ್ತದೆ
ತೆರೆಗೆ ಸರಿದೊಡನೆ ಕಕ್ಕುವ ನಂಜು
ಕೆಕ್ಕರಿಸುವ ನೋಟ, ಇಕ್ಕುವ ಗುನ್ನ
ಮೀರ್‌ಸಾಧಕನನ್ನು ಮೀರಿಸುತ್ತದೆ

ತುಂಬಿದ ಸಭೆಯಲ್ಲಿ
ಆದರ್ಶಗಳ ರಸವತ್ತಾಗಿ ಬಣ್ಣಿಸುವ ಬಾಯಿ
ನೂರೆಂಟು ಬಾರಿ ಎತ್ತಿ ಮುಗಿಯುವ ಕೈ
ಅವಕಾಶಗಳ ಬಾಚಿಕೊಂಡ ಬಳಿಕ
ಉಂಡೆಲೆ ಎಸೆದಂತೆ ಬಿಸುಡುತ್ತದೆ ತಿಪ್ಪೆಗೆ
ಕಾಲೆಳೆಯಲು ಕಸರತ್ತು ನಡೆಸುತ್ತದೆ

ಕುಲದ ಕೆಸರಲ್ಲೇ ಹೊರಳಾಡುವ ಮನಸು
ಸಮತೆಯ ಮಂತ್ರ ಪಠಿಸುತ್ತದೆ
ದಾಕ್ಷಿಣ್ಯ ಬೇಡವೆನ್ನುತ್ತಲೇ
ಪಟ್ಟಭದ್ರರ ಕಾಲಲ್ಲೇ ನುಸುಳುತ್ತದೆ
ಭಟ್ಟಂಗಿಗಳ ಹೊತ್ತು ಕುಣಿಯುತ್ತದೆ

ಹೆಗಲಿಗೆ ಹೆಗಲು ಕೊಡಲು
ಬದ್ಧವಾದ ಭುಜ
ಹಾಡ ಹಗಲೇ ಹೊರುತ್ತದೆ ಹೆಣ
ಕ್ಷಣ ಕ್ಷಣ ಕೀರ್ತಿಶನಿಯ ಬೇನ್ನೇರಿ
ಕೋಡಂಗಿಯಂತೆ ಚಂಗನೆ ನೆಗೆಯುತ್ತದೆ
ಹಪಹಪಿಸುತ್ತದೆ ಸ್ವ ಹದುಳಕ್ಕೆ

ಸದಾ ಇದಿರಾಗುವ ಹಸನ್ಮುಖದ ಹಿಂದೆ
ನಯವಂಚಕ ಗುಳ್ಳೆನರಿ ಹೊಂಚಿ
ಕೂತಿರುತ್ತದೆ !




**ನಾಗೇಶ್ ಜೆ. ನಾಯಕ,** ಶಿಕ್ಷಕರು, ಶ್ರೀ ರಾಮಲಿಂಗೇಶ್ವರ ಪ್ರೌಢಶಾಲೆ, ಉಡಿಕೇರಿ – ೫೯೧೧೦೪ ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ

ಬೇಟೆಯ ಮೇಲೆ ಎರಗುವಂತೆ ಅವನು ಮುಂದೆ ಬಾಗಿದ. ಬಾಗಿದ ಒತ್ತಡಕ್ಕೆ ಕುಳಿತ ಕುರ್ಚಿ ಕಿರುಗುಟ್ಟಿತು.

"ನಿನ್ನ ಕುತಂತ್ರ ಇಲ್ಲಿಗೆ ಸಾಕು ಮಾಡು. ಇಲ್ಲಾ ಅಂದ್ರ ನಿನ್ನ ನಾಲಿಗಿ ಹಿರಿದು ಒಗೀತೀನಿ."

ದಟ್ಟ ಕೂದಲಿನ ಅವನ ದಪ್ಪ ಕೈಯಲ್ಲಿ ದೊಣ್ಣೆ ಕಾಣಿಸಿಕೊಂಡಿತು. ಗಾಳಿಯಲ್ಲಿ ಅದನ್ನು ರಭಸದಿಂದ ಬೀಸಿದ. ಭಯಗೊಂಡ ಮುದುಕಿಯ ತುಟಿ ಬಿಗಿಯಾಗಿ ಅಂಟಿಕೊಂಡವು. ಕೆಂಡದ ಕಣ್ಣುಗಳಿಂದ ಆ ಅಧಿಕಾರಿ ಭಯದಿಂದ ತತ್ತರಿಸಿ ನಡುಗುತ್ತ ಕುಳಿತಿದ್ದ ಮುದುಕಿಯನ್ನು ದಿಟ್ಟಿಸಿ ನೋಡಿದ. ದೊಣ್ಣೆಯನ್ನು ಮೇಜಿನ ಮೇಲೆ ಎಸೆದು ಕುರ್ಚಿಯಲ್ಲಿ ಮೈ ಅಗಲಿಸಿದ. ಕುಳಿತಲ್ಲಿಂದಲೇ ಗುರುಗುಟ್ಟಿದ, "ಏ ಮುದುಕಿ ನಿನ್ನ ಮಗ ದುಷ್ಟ. ಅವನೊಬ್ಬ ಮಹಾದುಷ್ಟ."

ಅಧಿಕಾರಿ ಮತ್ತೆ ಕುರ್ಚಿಯಿಂದ ಮೇಲೆದ್ದ. ಚೆನ್ನಾಗಿ ಮೇಯಿಸಿ ಕೊಬ್ಬಿಸಿದ ಪ್ರಾಣಿಯಂತಿದ್ದ. ಮುದುಕಿಯ ಬಳಿ ಬಂದ. ಅಲ್ಲೇ ಇದ್ದ ಕುರ್ಚಿಯನ್ನು ಮುದುಕಿಯತ್ತ ತಳ್ಳಿ ಮಾತಾಡಿದ, "ಏ ಮುದುಕಿ, ಕೂತುಕೋ ಆ ಕುರ್ಚಿ ಮೇಲೆ. ಬಾಯಿಗೆ ಬಂದಂತೆ ಬೊಗಳಬೇಡ. ನಮ್ಮನ್ನು ಮೋಸ ಮಾಡಬಲ್ಲೆ ಎಂಬ ಕೊಬ್ಬು ನಿನಗೆ. ನಿಜ ಹೇಳು, ಎಲ್ಲಿದ್ದಾನೆ ನಿನ್ನ ಮಗ ? ಸುಮ್ಮನೆ ಬಾಯಿಬಿಡು. ಅಷ್ಟೇ ಸಾಕು. ನಿನ್ನನ್ನು ಇಲ್ಲಿಂದ ಬಿಟ್ಟುಬಿಡ್ತೀವಿ. ಕೈತುಂಬ ಹಣ ಕೊಡ್ತೀವಿ. ನಿನ್ನಷ್ಟಕ್ಕೆ ಬದುಕಲಿಕ್ಕೆ ನಿನ್ನನ್ನು ಬಿಟ್ಟು ಬಿಡ್ತೀವಿ... ಹ್ಞೂ... ಹೇಳು... ಎಲ್ಲಿ ನಿನ್ನ ಮಗಾ ?"

"ನನ್ನ ಮಗ ಇಲ್ಲೇ ಇದ್ದಾನೆ. ಇದೇ ಕಟ್ಟಡದಲ್ಲಿ ಇದ್ದಾನೆ" ಪ್ರತಿಭಟಿಸುವ ಆದರೂ ಬೇಡಿಕೊಳ್ಳುವ ದೈನೇಸಿ ಧ್ವನಿಯಲ್ಲಿ ಅಜ್ಜಿ ಒಮ್ಮೆಲೆ ಗಟ್ಟಿಯಾಗಿ ಮಾತಾಡಲು ಆರಂಭಿಸಿದಳು, "ನನ್ನ ಮಗನನ್ನು ನನಗೆ ತೋರಿಸು... ಒಂದೇ ಒಂದು ಸಲ ಅವನನ್ನು ನೋಡಬೇಕಿದೆ... ಕಣ್ತುಂಬಾ ನೋಡೋ ಆಶೆ. ನನ್ನ ಜೀವ ಹಿಂಡಾಕ ಹತ್ತೈತಿ... ಮತ್ತೆ ಅವನನ್ನು ಮನೆಗೆ ಕರೆದುಕೊಂಡು ಹೋಗಲಿಕ್ಕೆ ಆಗದೇ ಇರಬಹುದು... ಆದರೆ ಈ ಉಸಿರು ಇರೋದರೊಳಗಾಗಿ ಒಮ್ಮೆಯಾದರೂ ಅವನನ್ನು ನೋಡಬೇಕು ಅನ್ನೋ ಆಶೇನ ನಾ ಹ್ಯಾಂಗ ತಡಕೊಳ್ಳಲಿ... ಅವನನ್ನ ನಾ ಹಡೆದೀನಿ... ಹಾಲುಣಿಸೀನಿ... ನಾನು ಹೋಗೋ ದಿನ ದೂರ ಇಲ್ಲ... ಇರೋದ್ರೊಳಗೆ ಒಮ್ಮೆ, ಒಂದೇ ಸಲ ನನ್ನ ಮಗನನ್ನ ನಾನು ನೋಡಬೇಕು... ಅದss ಆಶೆ ಕಟ್ಟಿಕೊಂಡು ಬಿಟ್ಬೂಬಿಡದೆ ಎರಡು ದಿನ ನಡಕೊಂಡು ಬಂದೀನಿ... ನಾನು ಅವ್ವ ... ಅವನ ಅವ್ವ ..."

ಕೊಬ್ಬು ತುಂಬಿದ ಆ ನಾಯ್ಖಿಯ ಹಣೆಯ ಮೇಲೆ ಸಿಟ್ಟಿನ ಮಡಿಕೆಗಳು ಕಾಣಿಸಿಕೊಂಡವು. ಈ ಸಲ ಕೈಯಲ್ಲಿ ಛಾಟಿ ಹಿಡಿದುಕೊಂಡು ಅಬ್ಬರಿಸಿದ, "ನಿನ್ನ ಮಗ ಢಕಾಯಿತ. ಆ ಢಕಾಯಿತನನ್ನು ನೀನು ಬಚ್ಚಿಟ್ಟು ಕೊಂಡಿರುವಿ. ಅವ ಓಡಿ ಹೋಗ್ಯಾನ... ಮತ್ತೆ ಕಾಡಿಗೆ."

ಅಜ್ಜಿ ಕುಳಿತಲ್ಲೇ ನರಳಿದಳು. ಮಾತು ಹೊರಡದೇ ಮನದೊಳಗೆ ಹತ್ತಾರು ಕಲ್ಪನೆಗಳು ಹುಟ್ಟಿಗೆ ಕಲ್ಲುಬಿದ್ದ ಹುಳಗಳಂತೆ ಹುಚ್ಚೆದ್ದು ಹಾರಾಡತೊಡಗಿದವು. "ನನ್ನ ಮಗ ತಲೆತಪ್ಪಿಸಿಕೊಂಡು ಓಡಿಹೋಗಿರುವನೆ ? ಇವನು ಅದನ್ನು ಹೇಳುತ್ತಿದ್ದಾನೆಯೆ? ಅದಕ್ಕಾಗಿಯೇ ಇವನು ನನ್ನನ್ನು ಕೇಳುತ್ತಿದ್ದಾನೆಯೆ ?.... ನನ್ನ ಮಗ.... ತಲೆತಪ್ಪಿಸಿಕೊಂಡು ಅಲೆದಾಡುವಂಥ ಕೇಡು ಜೀವಿಯೆ? ಇದೆಂದಾದರೂ ನಿಜ ಇರಲಿಕ್ಕೆ ಸಾಧ್ಯವೇ ?... ಓ... ಮಗಾ..."

ಮೈಕಸುವನ್ನೆಲ್ಲ ಒಟ್ಟುಗೂಡಿಸಿ ಮುದುಕಿ ಎದ್ದು ನಿಂತಳು. ಅಧಿಕಾರಿಯತ್ತ ತಿರುಗಿದಳು. ಆಳದಿಂದ ಪುಟಿದೆದ್ದ ದಿಟ್ಟತನದಿಂದ ಹೇಳಿದಳು, "ನಿಜವಾಗಿಯೂ ನನ್ನ ಮಗ ತಪ್ಪಿಸಿಕೊಂಡು ಹೋಗಿರುವನೆ ? ನನ್ನ ಮನಸ್ಸು ಎಂದೂ ಒಪ್ಪದ ಈ ಮಾತನ್ನ ನಾನು ನಂಬುವುದಾದರೂ ಹೇಗೆ ? ನನ್ನ ಅಂತರಾಳ ಹೇಳ್ತಾ ಇದೆ. ನನ್ನ ಮಗನನ್ನು... ನನ್ನ ಒಡಲ ಕೂಸನ್ನು... ಕರುಳ ಕುಡಿಯನ್ನು ಇದೇ ಈ ಗೋಡೆಗಳಲ್ಲಿ ನೀವು ನನ್ನ ಪಾಲಿಗೆ ಗೋರಿಗೊಳಿಸಿದ್ದೀರಿ..."

"...ಏ ...ಮುದಿ ನರಿ... ನಿನಗೆ ಗೊತ್ತಿಲ್ಲಾ... ಅವನು ಈ ಜೇಲಿನಿಂದ ತಪ್ಪಿಸಿಕೊಂಡು ಕಾಡಿನಲ್ಲಿ ಕಾಣೆಯಾಗಿದ್ದಾನೆ."

"ಕಾಡಿನಲ್ಲಿ ಕಾಣೆಯಾಗಿದ್ದಾನೆ" ಎಂಬ ಅಧಿಕಾರಿಯ ಮಾತು ಮುದುಕಿಯಲ್ಲಿ ಅನಿರೀಕ್ಷಿತ ಆನಂದದ ಸೆಲೆ ಉಕ್ಕಿಸಿತು. ಗೋಡೆಗಳ ನಡುವೆ ಬಂಧಿಯಾಗಿದ್ದ ಮಗ ಕಾಡಿನಲ್ಲಿ ಸ್ವತಂತ್ರ ಗೊಂಡಿದ್ದಾನೆಂಬ ಸಂತಸ ಅವಳಲ್ಲಿ ಬತ್ತಿದ ಜೀವನೋತ್ಸಾಹಕ್ಕೆ ಹೊಸ ಆಶೆ ಹೊಮ್ಮಿಸಿತು. ಮಗನ ಬಿಡುಗಡೆಯ ಭಾವದಿಂದ ಅವಳ ಮನಸ್ಸು ಹಗುರ ಗೊಂಡಿತು. "ದೇವರೇ, ನೀನೆಂಥ ದಯಾಮಯಿ ! ನಿನಗೆ ನನ್ನ ಕೃತಜ್ಞತೆಗಳು" ಮುದುಕಿ ಪಿಸುಗುಟ್ಟಿದಳು.

ಅಜ್ಜಿಯ ಮುಖಭಾವದಲ್ಲಿ ವ್ಯಕ್ತಗೊಂಡ ಅವಳ ಮನಸ್ಸಿನ ಬದಲಾವಣೆಗಳನ್ನು ನಾಯ್ಖಿ ಗಮನಿಸಿದ. ಭಾರಿ ಕ್ರೌರ್ಯ ಅವನಲ್ಲಿ ಉರಿದೆದ್ದಿತು. "ಆ ಹಾಳು ನಿನ್ನ ಮಗ, ಮಹಾ ಢಕಾಯಿತ ಎಲ್ಲಿರುವನು ಅನ್ನೋದನ್ನ ನೀನು ಹೇಳೋದಿಲ್ಲಾ ? ... ನಿನ್ನ ಕೊಂದುಹಾಕದೇ ಬಿಡೋದಿಲ್ಲ!" ಚೀರುಧ್ವನಿಯಲ್ಲಿ ಅವನು ಅರಚಿದ.

ಆದರೆ ಮುದುಕಿ ಅವನ ಆ ಬೆದರಿಕೆಗೆ ಕವಡೆ ಕಾಸಿನ ಕಿಮ್ಮತ್ತೂ ಕೊಡಲಿಲ್ಲ. ತನ್ನ ಮಗ ಈಗ ಸ್ವತಂತ್ರನಾಗಿದ್ದಾನೆ. ಕಾಡಿನಲ್ಲಿದ್ದಾನೆ.

## ಕಣ್ಣು – ಕಾಲು



ನಭದಲ್ಲಿ
ನೆಟ್ಟಿರಬೇಕು
ದೃಷ್ಟಿ ; ಅಂತೆಯೇ
ನೆಲದ ಕುಳಿಗಳನ್ನು
ನಿರಂತರ
ಗುರುತಿಸುತಿರಬೇಕು
ಕಾಲು !

ಸಿಪಿಕೆ
ಮೈಸೂರು

ನಾಯ್ಖಿ ತನ್ನ ದಟ್ಟ ಕೂದಲಿನ ದಪ್ಪ ಕೈ ಎತ್ತಿ ಛಾಟಿ ಬೀಸಿದ. ಅಜ್ಜಿಯ ಭುಜದ ಮೇಲೆ ಬಿದ್ದ ಏಟಿಗೆ ಮೈಯೆಲ್ಲಾ ನಡುಗಿತು. "ಇಷ್ಟಕ್ಕೇ ಬಿಡುವುದಿಲ್ಲ. ಹೇಳದಿದ್ದರೆ ನಿನ್ನನ್ನು ಕೊಂದೇ ಹಾಕುವೆ", ನಾಯ್ಖಿ ಗುಡುಗಿದ.

ಒಂದರೆಕ್ಷಣ ಕಂಪಿಸಿದ ಮುದುಕಿಯ ದೇಹ ಕಾದ ಕಬ್ಬಿಣದ ಕಂಬ ಬಿಗಿದಪ್ಪಿಕೊಂಡಂತೆ ಚಡಪಡಿಸಿತು. ಮರುಕ್ಷಣದಲ್ಲೇ ಸ್ವಾಭಿಮಾನ ಮುದುಕಿಯಲ್ಲಿ ಸಶಕ್ತಗೊಂಡಿತು. ಸುಕ್ಕುಗಟ್ಟಿದ ಚರ್ಮದ ಮುದುಕಿಯ ಕೈಬೆರಳುಗಳು ತಮ್ಮೆಲ್ಲ ಶಕ್ತಿಯನ್ನು ಒಟ್ಟುಗೂಡಿಸಿ ಕೊಂಡು ವೈರಿಯ ಆ ಉಬ್ಬಿದ ಗಂಟಲನ್ನು ಅದುಮಿ ಹಿಡಿಯಲು ತನ್ನ ಇಡೀ ಜೀವಮಾನದಲ್ಲೇ ತಾನೆಂದೂ ಅನುಭವಿಸಿರದ ಈ ಕ್ಷಣದ ಅವಮಾನದ ಸೇಡನ್ನು ಇಂದು ಈಗ ಸಂಪೂರ್ಣ ಸಾಧ್ಯಗೊಳಿಸಲು ಸಜ್ಜುಗೊಂಡವು. ಮುದುಕಿಯ ರೋಷಾವೇಶ ಕಂಡು ನಾಯ್ಖಿ ಒಂದು ಕ್ಷಣ ಗಲಿಬಿಲಿಗೊಂಡ. ಅದನ್ನು ಅವನು ನಿರೀಕ್ಷಿಸಿರಲಿಲ್ಲ. ನಾಯ್ಖಿಯತ್ತ ನಿರ್ಭಯವಾಗಿ ಹೆಜ್ಜೆ ಹಾಕಿದ ಮುದುಕಿ ಗಟ್ಟಿ ಧ್ವನಿಯಲ್ಲಿ ಹೇಳಿದಳು, "ನನ್ನನ್ನು ಕೊಂದುಹಾಕುವಿಯಾ ? ಕೊಂದು ಹಾಕು. ಆದರೆ ನೆನಪಿಡು. ನಿನಗೂ ಒಂದು ಕೊನೆ ಇದೆ. ಸುತ್ತಲಿನವರ ಬದುಕಿನಲ್ಲಿ ಸಾವು ನೋವನ್ನು ಬಿತ್ತುವ, ಅಂತಃಕರಣ, ಪ್ರೀತಿ ತುಂಬಿದ ತಾಯಂದಿರ ಕರುಳುಗಳಲ್ಲಿ ಕೆಂಡಗಳನ್ನು ತುಂಬುವ ನೀನೂ ಕೂಡಾ ಒಂದು ದಿನ ಸಾವಿನ ಅಂಗಳದಲ್ಲಿ ಭಿಕಾರಿಯಾಗಿ ನಿಲ್ಲುವಿ. ಒಡಲ ಮಗನಿಗಾಗಿ ಹಂಬಲಿಸುವ ತಾಯ ಕರುಳಿನ ಕಿಚ್ಚಿನಿಂದ ನೀನು ನರಳಿ ನರಳಿ ಬೂದಿಗೊಳ್ಳುವ ದಿನ ದೂರವಿಲ್ಲ... ತಾಯಿ ಪ್ರೀತಿ ಉಂಡು ಬೆಳೆದು ಆ ತಾಯಿಯ ಪ್ರೀತಿಯನ್ನೇ ಕೆಂಡದ ಮಡಿಲಿಗೆ ಎಸೆಯುತ್ತಿರುವ ನಿನ್ನಂಥ ಕೃತಘ್ನನಿಗೆ ಧಿಕ್ಕಾರ !"

ಮುದುಕಿಯ ಕೆಂಡದ ಕೋಪ ಕಂಡ ಅಧಿಕಾರಿ ಮೂಕವಿಸ್ಮಿತನಾಗಿ ನಿಂತ. ಸಿಟ್ಟಿನ ರಭಸ ತಡೆಯ ಲಾರದೆ ಮುದುಕಿ ಅಧಿಕಾರಿಯತ್ತ ನುಗ್ಗಿ ಅವನ ತಲೆಗೆ ಹಾಕಿಕೊಂಡ ತಲೆಬುರುಡೆ ಹಾಗೂ ಎಲುಬುಗಳ ಬೆತ್ತದ ಟೊಪ್ಪಿಗೆಗೆ "ಥೂ" ಎಂದು ಉಗಿದಳು.

ಮುದುಕಿಯ ಗಂಟು ಮೂಟೆಯ ಪಕ್ಕದಲ್ಲಿ ಕುಳಿತಿದ್ದ ತೆಳ್ಳನೆಯ ಎತ್ತರದ ಕಾವಲು ಸೈನ್ಯಾಧಿಕಾರಿ ಅಂಗಳದಲ್ಲಿ ಹೆಜ್ಜೆಗಳ ಸಪ್ಪಳ ಕೇಳಿದ. ಮರುಕ್ಷಣದಲ್ಲಿ ಎರಡು ಗುಂಡುಗಳ ಸದ್ದುಗಳು ಪ್ರತಿಧ್ವನಿಸಿದವು. ಆ ಸದ್ದುಗಳ ಬೆನ್ನ ಹಿಂದೆಯೇ ಸೈನ್ಯಾಧಿಕಾರಿ ಆಕಳಿಸಿದ ಧ್ವನಿ ತೇಲಿಬಂತು. ಮುದುಕಿ ತನ್ನ ತಾರುಣ್ಯದ ದಿನಗಳಿಂದಲೂ ಜೋಪಾನವಾಗಿ ಕಾಯ್ದಿಟ್ಟುಕೊಂಡು ಬಂದಿದ್ದ ತಲೆಯ ಮೇಲಿನ ಹೊದಿಗೆ ಅಂಗಳದಲ್ಲಿ ಅನಾಥವಾಗಿ ಬಿದ್ದಿತ್ತು. ಅತ್ತಿತ್ತ ಕಳ್ಳಗಣ್ಣಿನಿಂದ ನೋಡಿದ ಕಾವಲು ಸೈನ್ಯಾಧಿಕಾರಿ ಅವಸರವಸರದಿಂದ ಆ ಹೊದಿಕೆಯನ್ನು ತನ್ನ ಜೇಬಿನಲ್ಲಿ ತುರುಕಿಕೊಂಡ.

ಮೂಲ ರಷ್ಯನ್ ಕಥೆ : **ಯೂರಿ ಬನಾಟ್ಸ್ಕಿ**
ಕನ್ನಡಕ್ಕೆ : **ಟಿ. ವಿ. ಮಾಗಳದ**
'ಶ್ರೀ ಬಸವ', ನಿಸರ್ಗ ಬಡಾವಣೆ, ಪುಟ್ಟರಾಜ ನಗರ
ಸಂಭಾಪುರ ರಸ್ತೆ, ಗದಗ – ೫೮೨ ೧೦೧

# ದಕ್ಕಿಯೂ ದಕ್ಕದ ೩೭೧–ಜೆ ಮೀಸಲಾತಿ



ಒಂದು ಯಶಸ್ವಿ ನಾಗರಿಕತೆಯ ಹಿಂದೆ ಒಬ್ಬ ಮಹಿಳೆ ಇದ್ದಾಳೆಂಬ ಪರಿಕಲ್ಪನೆ ನನ್ನದು. ಹೈದ್ರಾಬಾದ್ ಕರ್ನಾಟಕ ಭಾಗದವರ ಎಲ್ಲಾ ಸಂಕಷ್ಟಗಳಿಗೂ ಪರಿಹಾರವಲ್ಲದಿದ್ದರೂ ಒಂದಿನಿತು ನೆಮ್ಮದಿಯಿಂದ ಬದುಕಲು ಶಿಕ್ಷಣ ಮತ್ತು ಉದ್ಯೋಗದಲ್ಲಿ ಮೀಸಲಾತಿ ಸೌಲಭ್ಯಗಳನ್ನು ಹಕ್ಕಿನಿಂದ ಪಡೆಯುವಲ್ಲಿ ಇಲ್ಲಿಯವರ ಪಾಲಿಗೆ ೩೭೧–ಜೆ ಮೀಸಲಾತಿಯೊಂದು ವರವೇ ಸರಿ. ಆದರೆ ಈ ಭಾಗದಲ್ಲಿಯೇ ಜನಿಸಿ, ಇಲ್ಲಿಯೇ ಓದಿ, ಬೆಳೆದು, ಪ್ರಾಯಕ್ಕೆ ಬಂದ ಮೇಲೆ ಹೈ.ಕ. ಪ್ರದೇಶದಾಚೆಯ ಪುರುಷನೊಂದಿಗೆ ಮದುವೆಯಾದ ಇದೇ ಭಾಗದ ಮಹಿಳೆಗೆ ಈ ಅವಕಾಶವಿಲ್ಲದಿರುವ ಕುರಿತು ಪ್ರಜ್ಞಾವಂತರಲ್ಲಿ ಚರ್ಚೆ ಅವಶ್ಯಕವೆನಿಸುತ್ತದೆ.

ಭಾರತೀಯ ಸಂಪ್ರದಾಯದಂತೆ, "ಭಾರತೀಯ ವಾರಸಾ ಕಾಯ್ದೆ–೧೯೫೬"ರ ಪ್ರಕಾರ ಒಬ್ಬ ಮಹಿಳೆಯ ನಿವಾಸವು ಮದುವೆಯ ನಂತರ ಆಕೆಯ ಗಂಡನ ಮನೆಯಾಗಿರುವ ಕಾರಣ, ಆಕೆಯ ತವರು ಊರನ್ನು ಮೂಲ ನಿವಾಸವೆಂದು ಪರಿಗಣಿಸಲು ಅವಕಾಶವಿಲ್ಲವೆಂಬ ಕಾರಣಕ್ಕೇ ಆಕೆಯ ತವರಿನ ನೆಲವಾದ ಹೈ.ಕ. ಪ್ರದೇಶದಿಂದಾಚೆಯ ಬೇರೆ ಪ್ರದೇಶದ ಪುರುಷನನ್ನು ಮದುವೆಯಾದ ಈ ಭಾಗದ ಮಹಿಳೆಗೆ ೩೭೧–ಜೆ ಅಡಿಯ ಮೀಸಲಾತಿಯಲ್ಲಿ ಅವಕಾಶವಿಲ್ಲವೆಂಬುದು ಕಾನೂನಿನ ಪ್ರಕಾರ ಹೈ.ಕ. ವಿಶೇಷ ಕೋಶದ ಜಂಟಿ ಕಾರ್ಯದರ್ಶಿ ಶ್ರೀಯುತ ಕೆ. ಎಲ್. ಲೋಕನಾಥ್‌ರವರ ವಾದ. ಸಮರ್ಥನೆ. (ಪ್ರಜಾವಾಣಿ ದಿನಪತ್ರಿಕೆ ಕಲಬುರ್ಗಿ ಆವೃತ್ತಿಯ ೦೧.೦೮.೨೦೧೭ರ ೦೩ನೇ ಪುಟ)

ಸಂವಿಧಾನದ ಕಾನೂನನ್ನು ಈ ನೆಲದ ಸಂಸ್ಕೃತಿ, ಮಾನವೀಯತೆ, ಸಮಾನತೆಯ ಪರಿಕಲ್ಪನೆಯ ಆಧಾರದ ಮೇಲೆ ನಾವೇ ರೂಪಿಸಿದ್ದು, ಆದರೆ ಬದಲಾಗುತ್ತಿರುವ ಕಾಲಮಾನಕ್ಕೆ ತಕ್ಕಂತೆ ಪರಿಷ್ಕರಿಸಲು ಅವಕಾಶವಿದೆ. ಕಾನೂನು ಪರಿಭಾಷೆಯಲ್ಲಿ ಈ ವಾದ ಮತ್ತು ಸಮರ್ಥನೆ ಸರಿಯಾಗಿದ್ದರೂ ಸಹ ನನ್ನ ವಿಚಾರವೇನೆಂದರೆ, ಇದೇ ೩೭೧–ಜೆ ಮೀಸಲಾತಿಯನ್ವಯ ಹತ್ತು ವರ್ಷಗಳಿಗಿಂತ ಹೆಚ್ಚಿನ ಅವಧಿಯಲ್ಲಿ ಈ ಭಾಗದಲ್ಲಿ ವಾಸವಾಗಿದ್ದು, ನಂತರ ಹೈ.ಕ. ಭಾಗದಿಂದ ಹೊರ ಹೋಗಿರುವವರಿಗೂ ಈ ಮೀಸಲಾತಿ ಸೌಲಭ್ಯ ಪಡೆಯುವ ಅವಕಾಶವಿದೆ. ಹಾಗೆಯೇ ಬೇರೆ ಭಾಗದ ಮಹಿಳೆಯೊಬ್ಬಳು ಈ ಭಾಗದ ಪುರುಷನನ್ನು ಮದುವೆಯಾದರೆ ಅವಳಿಗೂ ಮೀಸಲಾತಿ ಸೌಲಭ್ಯ ದೊರೆಯುತ್ತದೆ. ಇರಲಿ ಈ ಬಗ್ಗೆ ನನ್ನ ವಿರೋಧವಿಲ್ಲ. ಆದರೆ ಒಂದು ಹುಡುಗಿ ಇದೇ ಭಾಗದಲ್ಲಿ ಜನಿಸಿ, ಇಲ್ಲಿಯ ನೋವು ಸಂಕಷ್ಟ, ತಲ್ಲಣಗಳಿಗೀಡಾಗಿ ಕಷ್ಟಪಟ್ಟು ಓದಿದ ನಮ್ಮದೇ ಕೂಸು, ವಿದ್ಯಾಭ್ಯಾಸ ಮುಗಿದಾದ ಮೇಲೆ ಇನ್ನೇನು ಒಂದು ಒಳ್ಳೆಯ ಉದ್ಯೋಗವೂ ಆಕೆಗೆ ಲಭಿಸಬಹುದೆಂಬ ಸಂದರ್ಭದಲ್ಲಿ ಆಕಸ್ಮಿಕವಾಗಿ ಹೈ.ಕ. ಪ್ರದೇಶದಾಚೆಗಿನ ಪುರುಷನೊಂದಿಗೆ ಸಂಬಂಧ ಕೂಡಿಬಂದು ಮದುವೆಯಾದಲ್ಲಿ ಆಕೆಗೆ ಈ ಮೀಸಲಾತಿಯ ಅವಕಾಶ ಇಲ್ಲವೆಂದರೆ ಹೇಗೆ ? ಇದು ಈ ಭಾಗದ ಮಹಿಳೆಗೆ ಅಗೌರವ ತೋರಿದಂತೆ. ಮದುವೆ ಆಕೆಗೆ ವರವಾಗುವ ಬದಲು ಶಾಪವಾದಂತೆಯಲ್ಲವೇ ? ಪಿತ್ರಾರ್ಜಿತ/ತಂದೆಯ ಆಸ್ತಿಯಲ್ಲಿ ಮದುವೆಯಾಗಿ ಹೋಗುವ ನಮ್ಮ ಮಹಿಳೆಗೆ ಸಮಾನ ಪಾಲು ಎಂಬ ಇದೇ ನೆಲದ ಕಾನೂನು ಇದೆ. ತಂದೆಯ ಮನೆಯನ್ನು, ತನ್ನ ತವರನ್ನು ಬಿಟ್ಟು ಬೇರೊಂದು ಪ್ರದೇಶಕ್ಕೆ ಹೊರಡುವ ಮಹಿಳೆಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲು ಇರುವಾಗ ಈ ಭಾಗದಿಂದ ಮದುವೆಯಾಗಿ ಹೊರ ಹೋಗುವ ಮಹಿಳೆಗೆ ಈ ಭಾಗದ ೩೭೧–ಜೆ ಮೀಸಲಾತಿಯ ಸೌಲಭ್ಯವು ಹಾಲುಂಡ ತವರಿನ ಉಡುಗೊರೆಯಾಗಿಯಾದರೂ ಏಕೆ ನೀಡಬಾರದು ?



ಹೀಗೆ ಮೀಸಲಾತಿ ಸೌಲಭ್ಯ ವಿಸ್ತರಿಸಿದಲ್ಲಿ ಇಂಥ ಮಹಿಳೆಯರ ಪ್ರಮಾಣವಾದರೂ ಎಷ್ಟಿರಬಹುದು ? ಸಾಮಾನ್ಯವಾಗಿ ಈ ಭಾಗದಲ್ಲಿ ಹತ್ತಿರ ಊರಿನವರೊಡನೆಯೇ ಸಂಬಂಧವನ್ನು ಬೆಳೆಸಲು ಹೆಚ್ಚಿಗೆ ಇಷ್ಟಪಡುತ್ತಾರೆ. ಈ ಭಾಗದ ಗಡಿ ಜಿಲ್ಲೆಗಳಲ್ಲಿ ಶೇ. ೨೦ರಿಂದ ೩೦ರಷ್ಟು ಇಂಥ ಪ್ರಕರಣಗಳಿರಬಹುದು. ಇವರಲ್ಲಿಯೂ ಉದ್ಯೋಗವನ್ನು ಬಯಸುವವರ ಪ್ರಮಾಣ ಶೇ. ೧೦ರಿಂದ ೧೫ರಷ್ಟಿರಬಹುದು. ಆದಾಗ್ಯೂ ಆರಂಭದಲ್ಲಿ ಶೇ. ೮೦ರಷ್ಟು (ಸ್ಥಳೀಯ ಮಟ್ಟದ) ಮೀಸಲಾತಿ ನೀಡಿ ಒಂದಿಷ್ಟು ವರ್ಷಗಳ ನಂತರ ರಾಜ್ಯದ ಇತರೇ ಭಾಗದ ಉದ್ಯೋಗದಲ್ಲಿರುವ ಮೀಸಲಾತಿ ಪ್ರಮಾಣ ಶೇ. ೮ರಿಂದ ೧೦ (ರಾಜ್ಯ ಮಟ್ಟದ)ರಷ್ಟಾದರೂ ಒದಗಿಸಲು ಪರಿಗಣಿಸಬಹುದಲ್ಲವೇ ? ನನ್ನ ಪ್ರಕಾರ ಈ ಸೌಲಭ್ಯ ಕೇವಲ ಆಕೆಗೆ ನೀಡುವ ತವರಿನ ಉಡುಗೊರೆಯಲ್ಲ, ಭಿಕ್ಷೆಯೂ ಅಲ್ಲ ಅದು ಆಕೆಯ ಹಕ್ಕು. ಈ ನೆಲ ಮಹಿಳೆಗೆ ಕೊಡಮಾಡುವ ನಾಗರಿಕ ಹಕ್ಕು ಆಗಿದೆ. ಇದರಿಂದ ಈ ಭಾಗದ ಮಹಿಳೆಗೆ ನಾವು ಪ್ರಾಧಾನ್ಯತೆ ನೀಡಿ ಗೌರವಿಸಿದಂತೆ.

ಸಂಬಂಧಿಸಿದ ಅಧಿಕಾರಿಗಳ ಇಚ್ಛಾಶಕ್ತಿಯಿಂದ ಇದಕ್ಕಿರುವ ಕಾನೂನಿನ ತೊಡಕನ್ನು ಬಿಡಿಸಿ ಪರಿಹರಿಸಿದರೆ ೩೭೧–ಜೆ ಕಾನೂನಿನ ಮೂಲ ಆಶಯಕ್ಕೇನೂ ಧಕ್ಕೆಯಾಗದು. ಇದರಿಂದ ಇಲ್ಲಿ ಜನಿಸಿದ ಸಕಲರಿಗೂ ಮೀಸಲಾತಿ ಸೌಲಭ್ಯ ವಿಸ್ತರಿಸಿದಂತಾಗುತ್ತದೆ. ಹಾಗಾಗಿ ಹೈ.ಕ. ಭಾಗದ ಸಮಸ್ತ ಮಹಿಳೆಯರ ಪರವಾಗಿ ಈ ಭಾಗದ ನನ್ನ ಪುರುಷ ಧ್ವನಿಯನ್ನು ಎತ್ತಿದ್ದೇನೆ. ನನ್ನ ಧ್ವನಿ ಆಂದೋಲನದ ಮಾದರಿಯಲ್ಲಿ ಒಕ್ಕೂಟದ ಧ್ವನಿಯಾದಲ್ಲಿ ಈ ಭಾಗದ ಮಹಿಳೆಗೂ ಮೀಸಲಾತಿಯೆಂಬ ತವರಿನ ಮಮತೆಯ ಕಾಣಿಕೆಯನ್ನು ಕೊಟ್ಟ ಕೀರ್ತಿಗೆ ನಮ್ಮ ವ್ಯವಸ್ಥೆ ಭಾಜನರಾಗಬಹುದು. ಹಾಲುಂಡ ತವರನ್ನು ಆಕೆ ಹಾರೈಸಿದಲ್ಲಿ ಈ ಭಾಗ ಉತ್ತರೋತ್ತರವಾಗಿ ಪ್ರಗತಿಯತ್ತ ಸಾಗಲೂಬಹುದು.

**ವೆಂಕಟೇಶ ಕೆ. ಜನಾದ್ರಿ**
ಲೆಕ್ಕಪತ್ರ ಅಧೀಕ್ಷಕ, ಈ.ಕ.ರ.ಸಾ. ಸಂಸ್ಥೆ, ಕೇಂದ್ರ ಕಛೇರಿ, ಕಲಬುರಗಿ – ೫೮೫ ೧೦೨

# ಖಾಸಗೀ ಹಕ್ಕು ಮೂಲಭೂತ ಹಕ್ಕುಗಳಲ್ಲೇ ಅಂತರ್ಗತ

## – ಸರ್ವೋಚ್ಚ ನ್ಯಾಯಾಲಯ



ಕೆ. ಎಸ್. ಪಾರ್ಥಸಾರಥಿ

**ಸಂ**ವಿಧಾನದ ಭಾಗ ೩ ಅನುಚ್ಛೇದ ೧೨ರಿಂದ ೩೫ರವರೆಗೆ ಪೌರನ ಮೂಲಭೂತ ಹಕ್ಕುಗಳ ಪಟ್ಟಿ ಇದೆ. ಇವುಗಳಲ್ಲಿ ಎಲ್ಲೂ 'ಖಾಸಗೀತನದ ಹಕ್ಕು' ಎಂದು ನೇರವಾಗಿ ಬರೆದಿಲ್ಲ. ಹಾಗೂ ಈ ಎಲ್ಲ ಹಕ್ಕುಗಳ ಅನುಭೋಗವೂ ಎಲ್ಲ ಸಂದರ್ಭಗಳಲ್ಲೂ ಪ್ರಶ್ನಾತೀತ ನಿರುಪಾಧಿಕ ಹಕ್ಕುಗಳಲ್ಲ. ಅಂದರೆ ಸಂದರ್ಭ ಒದಗಿದಾಗ, ಪ್ರಭುತ್ವ ಕಾರಣ ಹೇಳಿ, ಅವನ್ನು ತಾತ್ಕಾಲಿಕವಾಗಿ ಒಂದಿಷ್ಟು ಮೊಟಕುಗೊಳಿಸಬಹುದು. ವ್ಯಕ್ತಿಯ ಹಕ್ಕುಗಳ ಚಲಾವಣೆ ಅಂದರೆ ಆ ವ್ಯಕ್ತಿ ಇತರ ವ್ಯಕ್ತಿಗಳೊಡನೆ ಸಹಬಾಳ್ವೆ ಮಾಡುತ್ತಿದ್ದು, ಪ್ರತಿಕ್ಷಣವೂ ತಾನು ಅನುಭವಿಸುವ ಹಕ್ಕುಗಳು ತನ್ನ ಸುತ್ತಲಿನ ವ್ಯಕ್ತಿಗಳಿಗೂ ಲಭ್ಯವಿರುವ ಹಕ್ಕುಗಳೂ ಹೌದು ಎನ್ನುವುದನ್ನು ಗಮನಿಸಲೇಬೇಕು. ನನ್ನ ಮೂಗೂ ನಿನ್ನ ಮೂಗೂ ಹತ್ತಿರವಾಗುತ್ತಿದ್ದಂತೆಯೇ ನನ್ನ ಚಲನೆಯ ಹಕ್ಕು ಮಿತಿಗೊಳ್ಳುತ್ತದೆ ಎನ್ನುವ ಮಾತಿದೆ. ವ್ಯಕ್ತಿಯ ಹಕ್ಕುಗಳು ಸಮಾಜಜೀವನದ ಪರಿಮಿತಿ ಯೊಳಗೇ ಅಡಕವಾದವು; ಅದೇ ಅವುಗಳ ಮಿತಿಯೂ ಹೌದು. ಕಾಡಿನಲ್ಲಿ ಒಂಟಿಯಾಗಿ ಅಲೆಯುವವನಿಗೆ ಅಲ್ಲಿ ಇನ್ನೊಬ್ಬ ಎದುರಾಗದವರೆಗೆ ಸಾರ್ವಭೌಮನೇ ಎನ್ನಬಹುದು. ಆದರೂ ಅಲ್ಲಿಯ ವನ್ಯಜೀವಿಗಳು, ಕಾಡುಮೇಡುಗಳು ಒಡ್ಡುವ ಸವಾಲುಗಳಿಂದಾಗಿ ಅದು ತನ್ನದೇ ಮಿತಿಗೊಳಪಟ್ಟೇ ತೀರುವುದು. ವೈಯಕ್ತಿಕ ಹಕ್ಕುಗಳ ಮಿತಿಯನ್ನು ಹೀಗೆ ಗ್ರಹಿಸುತ್ತಿದ್ದಂತೆಯೇ, ಹುಟ್ಟಿಕೊಂಡ ಮತ್ತೊಂದು ವಿಶಾಲ ಅರ್ಥದ ಪದ "ಮಾನವೀಯ ಹಕ್ಕು"ಗಳು. ಇದನ್ನು ವಿಶ್ವಸಂಸ್ಥೆ ಪಟ್ಟಿ ಮಾಡಿದೆ. ಯಾವುದೇ ಪ್ರಭುತ್ವದೊಳಗೆ ಮಾನವ ಹಕ್ಕುಗಳಿಗೆ ಅಪಾಯ ಒದಗಿದಾಗ ವಿಶ್ವಸಂಸ್ಥೆ ಅಲ್ಲಿಯ ಮಾನವನ/ರ ಪರವಾಗಿ ದನಿ ಎತ್ತುತ್ತದೆ. ಈಗ ಬರ್ಮಾದ ರೋಹಿಂಗ್ಯ ಬುಡಕಟ್ಟಿನ ಜನರ ವಿರುದ್ಧ ಅಲ್ಲಿಯ ಪ್ರಭುತ್ವ ನಡೆಸುತ್ತಿರುವ ದಬ್ಬಾಳಿಕೆಯ ಬಗ್ಗೆ ವಿಶ್ವಸಂಸ್ಥೆ ಈ ನಿಲುವಿನಿಂದ ಎಚ್ಚರಿಕೆ ನೀಡಿದೆ.

ಪ್ರಭುತ್ವಗಳು ತಮ್ಮ ತಮ್ಮ ಪ್ರದೇಶದೊಳಗೆ ತಮ್ಮದೇ ಆಡಳಿತದ ಹಕ್ಕನ್ನು ಆಗ್ರಹಿಸಿವೆ: ತಾವು ಸ್ವಾಯತ್ತ ಅಂತ. ಅದರಲ್ಲೂ ಪ್ರಜಾಪ್ರಭುತ್ವಗಳು ತಮ್ಮ ಅಧಿಕಾರ ಜನಗಳಿಂದ ದತ್ತವಾಗಿದ್ದು, ಅದನ್ನು ಅಲ್ಲಿಯ ಪೌರರೆಲ್ಲರ ಸಮಾನ ಹಕ್ಕುಗಳ ಪರವಾಗಿ ಪ್ರಯೋಗಿಸುವುದು ತಮ್ಮ ಹಕ್ಕು, ಕರ್ತವ್ಯ ಮುಂತಾಗಿ ಹೇಳಿಕೊಳ್ಳುತ್ತವೆ. ಅಂದರೆ ಎಲ್ಲ ಪ್ರಜೆಗಳ ಪರವಾಗಿ ಅನ್ನುವಾಗ ಕೆಲವರ ಹಕ್ಕುಗಳು ಮೊಟಕಾದರೆ ಅವು ತಾತ್ಕಾಲಿಕ, ಅಗತ್ಯ, ಸಮರ್ಥನೀಯ ಅನ್ನುವ ನಿಲುವು. ಬರ್ಮಾ ಸರಕಾರ ಹಾಗೆಯೇ ಹೇಳುತ್ತಾ, ರೋಹಿಂಗ್ಯರನ್ನು ದಂಗೆ ಎದ್ದವರಂತೆ, ಅವರ ನಡುವೆ ಭಯೋತ್ಪಾದಕರ ಪ್ರವೇಶ ಆಗಿರುವಂತೆ ಹೇಳುತ್ತಿದೆ. ಕೋಫಿ ಅಣ್ಣನ್ ಈ ಕುರಿತು ವಿಶ್ವಸಂಸ್ಥೆಯ ಆದೇಶದಂತೆ ವಿಚಾರಣೆ ನಡೆಸಿ ತನ್ನ ವರದಿ ನೀಡಿದ್ದಾರೆ. ಆ ವರದಿಯಲ್ಲಿನ ಶಿಫಾರಸುಗಳನ್ನು ತಾವು ಪಾಲಿಸುವುದಾಗಿ ಬರ್ಮಾ ಸರಕಾರ ಹೇಳುತ್ತಿದೆ. ವಾಸ್ತವದಲ್ಲಿ ಅಲ್ಲಿಯ ರೋಹಿಂಗ್ಯರು ಅಪಾರವಾದ ಹಿಂಸೆ ದಬ್ಬಾಳಿಕೆಗೆ ತುತ್ತಾಗಿ, ಅದನ್ನು ತಾಳಲಾರದೆ ಪಕ್ಕದ ರಾಷ್ಟ್ರಗಳಲ್ಲಿ ಪ್ರವೇಶ ಮಾಡಿ ರಕ್ಷಣೆಗೆ ಮೊರೆ ಇಡುತ್ತಿದ್ದಾರೆ. ವಿಶ್ವಸಂಸ್ಥೆಯು ಪಕ್ಕದ ರಾಷ್ಟ್ರಗಳು ವಿಶ್ವಸಂಸ್ಥೆಯ ಮಾನವ ಹಕ್ಕುಗಳ ರಕ್ಷಣೆಯ ದೃಷ್ಟಿಯಿಂದ ವಲಸಿಗರನ್ನು ರಕ್ಷಿಸಬೇಕು ಅನ್ನುತ್ತದೆ. ಆಶ್ರಯ ಬೇಡಿ ಬಂದವರನ್ನು ಅವರ ದೇಶಕ್ಕೇ ವಾಪಸ್ ದಬ್ಬಿದರೆ ಅವರ ಜೀವಕ್ಕೆ ಅಪಾಯವಿದ್ದರೆ, ಸರ್ಕಾರಗಳು ಹಾಗೆ ಮಾಡುವಂತಿಲ್ಲ ಅನ್ನುತ್ತದೆ. ನಮ್ಮೊಳಗೆ ಬಂದಿರುವ ರೋಹಿಂಗ್ಯರು ನಮ್ಮ ಉಚ್ಚ ನ್ಯಾಯಾಲಯದಿಂದ ರಕ್ಷಣೆ ಬೇಡಿದ್ದಾರೆ. ಅಂದರೆ ರಾಷ್ಟ್ರಗಳು ಸಾರ್ವಭೌಮರು ಎನ್ನುವುದು ಕೂಡ ಅಂತರರಾಷ್ಟ್ರೀಯ ನ್ಯಾಯದ ದೃಷ್ಟಿಯಿಂದ ಪ್ರಶ್ನಾರ್ಹ; ನಿರುಪಾಧಿಕ ಅಲ್ಲ. ಇದೇ ನೀತಿಯ ಅನ್ವಯ, ರಾಷ್ಟ್ರಗಳ ಸರ್ಕಾರಗಳೂ ತಮ್ಮ ಪೌರರ ಸಾಮಾನ್ಯ ನಾಗರಿಕ ಹಕ್ಕುಗಳನ್ನು ತಾತ್ಕಾಲಿಕವಾಗಿ ಶಾಸನಬದ್ಧವಾಗಿಯೇ ಕಡಿತಗೊಳಿಸಿದರೂ ಅವೂ ಅತೀ ಹೆಚ್ಚು ಅನಿಸಿದಾಗ ವ್ಯಕ್ತಿಗಳು ಕೂಡ, ತಮ್ಮದೇ ಉನ್ನತ ನ್ಯಾಯಾಲಯ ವನ್ನೂ, ಅದನ್ನು ಮೀರಿ ವಿಶ್ವಸಂಸ್ಥೆಗೆ ಸಹ ಮೊರೆ ಹೋಗಬಹುದು. ನಮ್ಮ ದಲಿತರ ಮಾನವೀಯ ಹಕ್ಕುಗಳು, ನಕ್ಸಲ್ ಹಿಂಸೆಯ ಹೆಸರಿನಲ್ಲಿ ಅಲ್ಲಿ ನ್ಯಾಯಯುತ ಚಳುವಳಿಯಲ್ಲಿ ಭಾಗವಹಿಸಿರುವ, ವನವಾಸಿಗಳ ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ಸೇವೆ ಮಾಡುವಂಥವರನ್ನು ಪ್ರಭುತ್ವ ದಬ್ಬಾಳಿಕೆಗೆ ಒಳಪಡಿಸಿದಾಗ ಅಂಥವರೂ ವಿಶ್ವಸಂಸ್ಥೆಗೆ ಮೊರೆ

ಆತ್ಮಗೌರವವೆನ್ನುವುದು ಸ್ವಾತಂತ್ರ್ಯ ಕಲ್ಪನೆಯಿಂದ ಬೇರ್ಪಡಿಸಲಾಗದ ಮೂಲಭೂತ ಕಲ್ಪನೆ. ಕಾನೂನಿನನ್ವಯ ಅಲ್ಲದೆ, ಯಾವುದೇ ಪ್ರಭುತ್ವಕ್ಕೂ ವ್ಯಕ್ತಿಯ ಬದುಕುವ ಹಕ್ಕು ಮತ್ತು ವ್ಯಕ್ತಿ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವ ಹಕ್ಕು ಇಲ್ಲ. ಈ ಹಕ್ಕುಗಳು ಪೌರನಿಗೆ ಸಂವಿಧಾನ ದತ್ತವಲ್ಲ. ಇವುಗಳನ್ನು ಸಂವಿಧಾನ ಸೃಷ್ಟಿಸಲಿಲ್ಲ. ಅವು ಜನ್ಮಸಿದ್ಧ.

ಹೋಗಿದ್ದಾರೆ. ಹಿಂದೆ ದಕ್ಷಿಣ ಆಫ್ರಿಕದ ಕರಿಯರು ಬಿಳಿಯರ ದಬ್ಬಾಳಿಕೆಗೆ ಒಳಗಾದಾಗಲೂ, ಮಾನವೀಯ ಮತ್ತು ನಾಗರಿಕರ ಹಕ್ಕುಗಳ ಹೆಸರಿನಲ್ಲಿ ವಿಶ್ವಸಂಸ್ಥೆ ಪರಿಣಾಮಕಾರಿಯಾಗಿ ಪ್ರವೇಶ ಮಾಡಿತ್ತು.

ಅಂದರೆ ನನ್ನ ನಾಗರಿಕ ಹಕ್ಕುಗಳು ನನ್ನ ಸಂವಿಧಾನದತ್ತವಾಗಿ ರಕ್ಷಿತ ಹಾಗೂ ವಿಶ್ವಸಂಸ್ಥೆಯ ಅಂತರರಾಷ್ಟ್ರೀಯ ನ್ಯಾಯ ವಿಧಾನಗಳಲ್ಲೂ ರಕ್ಷಿತ. ಈ ಕುರಿತು ಇವನ್ನು ಮೊಟಕುಗೊಳಿಸಲು ಪ್ರಭುತ್ವ ಬಯಸಿದಲ್ಲಿ ಕಾರಣ ಹೇಳಬೇಕು, ತನ್ನ ಶಾಸನಸಭೆಯ ಮುಂದೆ ಚರ್ಚಿಸಿ, ಅದರ ಒಪ್ಪಿಗೆ ಪಡೆಯಬೇಕು. ಅಂಥ ಒಪ್ಪಿಗೆಯನ್ನು ತಾತ್ಕಾಲಿಕ ಕಾನೂನಾಗಿ ಶಾಸನಸಭೆ ಜಾರಿಗೊಳಿಸಬೇಕು. ಇವೆಲ್ಲ ಪೌರನ ವಿರುದ್ಧ ಪ್ರಭುತ್ವ ದಬ್ಬಾಳಿಕೆ ಮಾಡದಿರುವಂತೆ ಅಂತರ್ಗತ ರಕ್ಷೆಗಳು. ಸರ್ವಾಧಿಕಾರಿ ಪ್ರಭುತ್ವಗಳು ಇವಕ್ಕೆ ಯಾವುದೇ ಮನ್ನಣೆ ನೀಡದೆ ದಬ್ಬಾಳಿಕೆ ನಡೆಸುತ್ತವೆ. ಪ್ರಜಾಪ್ರಭುತ್ವ ಸರ್ಕಾರಗಳಿಗೆ ಆ ರೀತಿ ನಡೆದುಕೊಳ್ಳುವುದು ಸಾಧ್ಯವಿಲ್ಲ.

ಸಾಧ್ಯವಿಲ್ಲ ಅಂದರೆ ಇಲ್ಲವೇ ಇಲ್ಲ ಅಂತ ಅಲ್ಲ. ರಾಷ್ಟ್ರೀಯ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಸಮುದಾಯದ ಒಟ್ಟಾರೆ ಹಿತವೆಂದು ಹೇಳಿ, ತಾತ್ಕಾಲಿಕವೆಂದು ಹೇಳುತ್ತಾ, ಪೌರನ ಹಕ್ಕುಗಳನ್ನು ಮೊಟಕುಗೊಳಿಸುತ್ತವೆ. ಅಲ್ಲೂ, ಅದರ ದುಷ್ಪರಿಣಾಮಕ್ಕೆ ಒಳಗಾದ ವ್ಯಕ್ತಿ ಉಚ್ಚ ನ್ಯಾಯಾಲಯದ ಮೊರೆಹೋಗಬಹುದು. ಆ ನ್ಯಾಯಾಲಯ ಆತನ ಅಹವಾಲು ನ್ಯಾಯಸಮ್ಮತವೆಂದು ಗ್ರಹಿಸಿದರೆ ಅವನಿಗೆ ರಕ್ಷಣೆಯನ್ನೂ ನೀಡುತ್ತದೆ. ಹಿಂದೊಮ್ಮೆ ಎ. ಕೆ. ಗೋಪಾಲನ್ ಅವರನ್ನು ತುರ್ತು ಪರಿಸ್ಥಿತಿಯ ಕಾಲದಲ್ಲಿ ಬಂಧಿಸಿದಾಗ ಉಚ್ಚ ನ್ಯಾಯಾಲಯ ಅವರ ನೆರವಿಗೆ ಬರಲಿಲ್ಲ. ಅದು ನ್ಯಾಯಸಮ್ಮತವಾಗಿರಲಿಲ್ಲ ಎನ್ನುವುದು ಈಗ ಸ್ಪಷ್ಟವಾಗಿದೆ.

ಈ ಹಿನ್ನೆಲೆಯಲ್ಲಿ ವ್ಯಕ್ತಿಗೆ ತನ್ನ ಖಾಸಗೀತನದ ಹಕ್ಕು ಇದೆ ಎನ್ನುವುದು ಈಗ ಚರ್ಚಿತ ವಿಷಯ. ಈಗಷ್ಟೆ ಸರ್ವೋಚ್ಚ ನ್ಯಾಯಾಲಯ ಅಂಥದೊಂದು ಹಕ್ಕು ಇದೆ ಎಂದು ಸರ್ವಾನುಮತದಿಂದ ವಿವಿಧ ಕಾರಣಗಳನ್ನು ಹೇಳಿ ತೀರ್ಮಾನಿಸಿದೆ. ಖಾಸಗೀತನ ಎಂದರೆ ಏನು ಎನ್ನುವ ವಿಷಯ ಇರಲಿ, ಮೊದಲಿಗೆ ಈ ಹೆಸರಿನ ಹಕ್ಕು ಸಂವಿಧಾನದಲ್ಲಿ ಲಿಖಿತವಾಗಿಲ್ಲವಲ್ಲ ? ಅದಕ್ಕೆ ನ್ಯಾಯಾಲಯದ ಸಮಾಧಾನ ಆಸಕ್ತಿಪೂರ್ಣವಾದುದು. ಮೂಲಭೂತ ಹಕ್ಕುಗಳನ್ನು ಅಡಚಣೆ ಇಲ್ಲದೆ ಚಲಾಯಿಸಲು, ಅನುಭವಿಸಲು, ಅದಕ್ಕೆ ಅನುಕೂಲ ಸಂವಿಧಾನದಲ್ಲೇ ಇರಬೇಕು. ಖಾಸಗೀತನದ ಹಕ್ಕೇ ವ್ಯಕ್ತಿಗೆ ಇಲ್ಲದಿದ್ದರೆ ಅವನು ಹೇಗೆ ತಾನೇ ಈ ಲಿಖಿತ ಮೂಲಭೂತ ಹಕ್ಕುಗಳನ್ನು ಅನುಭವಿಸಿಯಾನು ? ಸಂವಿಧಾನವೆಂಬುದು ಈಗ ರಚನೆ ಆದದ್ದು. ಮುಂದೆ ಇದೇ ಸಂವಿಧಾನ ತಿದ್ದುಪಾಟಾಗಬಹುದು, ಬದಲಾಯಿಸಬಹುದು. ಸರ್ವಾಧಿಕಾರಿಯೊಬ್ಬ ಸಂವಿಧಾನವನ್ನೇ ತೊಡೆದುಹಾಕಿಯಾನು. ಆದರೆ ಈ ಮೂಲಭೂತ ಹಕ್ಕುಗಳು ಯಾರ ಅಪ್ಪಣೆಯನ್ನೂ ಅವಲಂಬಿಸದ ಮಾನವ ಸಮಾಜದ ಮೂಲ ಸ್ರೋತಗಳು. ಅವು ತಾವೇ ಸ್ವಾಯತ್ತ ಸ್ವಯಂಸಿದ್ಧ ಎಂದಿತು ಈ ಸರ್ವೋಚ್ಚ ನ್ಯಾಯಾಲಯದ ಪೀಠ. ಮೂವರು ನ್ಯಾಯಾಧೀಶರು ಇದನ್ನು ಒಪ್ಪಿಯೂ, ಹಾಗಂತ ಸ್ಪಷ್ಟಪಡಿಸುವ ಒಂದು ಕಾನೂನನ್ನು ಮಾಡಿ, ಸಂವಿಧಾನಕ್ಕೆ ತಿದ್ದುಪಾಟಲು ಮಾಡಬೇಕೆಂದರು. ಆದರೆ ಆರು ಜನ ಅಂಥ ಅಗತ್ಯವೇ ಇಲ್ಲ ಎಂದರು. ಮನುಷ್ಯನ ಹುಟ್ಟಿನೊಡನೆ ಅವನ ಖಾಸಗೀ ಹಕ್ಕು ಹುಟ್ಟುತ್ತದೆ. ಅವನು ಸಾಯುವವರೆಗೂ ಇರುತ್ತದೆ. ಪೌರನ ಆತ್ಮಗೌರವ ಮತ್ತು ಅದರರಂಗವಾದ ಖಾಸಗೀತನದ ರಕ್ಷಣೆಯು ಅನಿರ್ಬಾಧಿತವಾದಾಗಲೇ ರಾಷ್ಟ್ರದ ಐಕ್ಯತೆ ಮತ್ತು ಅಖಂಡತೆ ಸಾಧ್ಯ ಎಂದು ಹೇಳಿತು.

ನ್ಯಾಯಮೂರ್ತಿ ಶ್ರೀ ಜೆ. ಚಲಮೇಶ್ವರ್ ಅವರು ಒಂದು ಸ್ವಾರಸ್ಯಕರ ವಿವರಣೆ ನೀಡಿದ್ದಾರೆ. ನಮ್ಮ ರಾಜ್ಯಾಂಗದ ಹಿನ್ನೆಲೆ, ಅದರ ಪೀಠಿಕೆ ಮತ್ತು ಮೂಲಭೂತ ಹಕ್ಕುಗಳ ಅಧ್ಯಾಯ: ಇವುಗಳ ಹಿಂದಿನ ಒಟ್ಟಾರೆ ಸ್ವೀಕೃತ ಮೌಲ್ಯಗಳೇ ಆ ಹಕ್ಕುಗಳು. ಸಂವಿಧಾನ ಈ ಹಕ್ಕುಗಳನ್ನು ನೀಡಲಿಲ್ಲ, ಅದರಲ್ಲಿ ಇರುವುದು ಈ ಕುರಿತ ಪ್ರಭುತ್ವದ ಇತಿಮಿತಿಗಳನ್ನು ಕುರಿತದ್ದು ಅಷ್ಟೇ. ಪೌರನಿಗೆ ಇವೆಲ್ಲ ಆಜನ್ಮಸಿದ್ಧ ಹಕ್ಕುಗಳು. ಈ ಸಂವಿಧಾನ ಬರುವುದಕ್ಕೂ ಮುಂಚಿನವು ಅನ್ನುತ್ತಾರೆ. ಖಾಸಗೀತನದ ಹಕ್ಕು ಇವುಗಳ ಅವಿಭಾಜ್ಯ ಅಂಗ. ಪೌರನೊಬ್ಬನ ಮನೆಯೊಳಗೆ ಅವನ ಅನುಮತಿಯಿಲ್ಲದೇ ಪ್ರವೇಶಿಸುವಂತಿಲ್ಲ. ಅವನು ಏನು ತಿನ್ನಬೇಕು–ಬಾರದು ಅಂತ ಪ್ರಭುತ್ವ ಹೇಳುವಂತಿಲ್ಲ. ಅವರಿಷ್ಟ ಬಂದಂತೆ ವೇಷಭೂಷಣ ಧರಿಸುವುದು, ಅವರಿಷ್ಟ ಬಂದವರೊಡನಾಟ ಇವೆಲ್ಲವೂ ಒಟ್ಟಾರೆ ಖಾಸಗೀತನ. ಇದು ಇತರ ಮೂಲಭೂತ ಹಕ್ಕುಗಳ ಅಡಿಪಾಯ. ಇದಕ್ಕಾಗಿ ಹಾಲಿ ಸಂವಿಧಾನಕ್ಕೆ ತಿದ್ದುಪಾಠದ ಅಗತ್ಯವೂ ಇಲ್ಲ. ಇಂಗ್ಲಿಷಿನ "Inalieanable" ಎಂಬ ಪದ ಇದೆ. ಕಿತ್ತುಕೊಳ್ಳಲಾರದ ಬಿಟ್ಟುಕೊಡಲಾರದ ಹಕ್ಕುಗಳು. ಈ ಹಿಂದೆ ಒಂದು ಪ್ರಸಂಗದಲ್ಲಿ ತುರ್ತುಪರಿಸ್ಥಿತಿಯ ಕಾಲದಲ್ಲಿ ಸರ್ಕಾರ ಅಧಟುತನದಲ್ಲಿ ಹೇಳಿತ್ತು : ತುರ್ತುಪರಿಸ್ಥಿತಿಯಲ್ಲಿ ಗೈರು ಕಾನೂನು, ಸರ್ಕಾರವು ಯಾರದಾದರೂ ಜೀವ ತೆಗೆದರೂ ಅದರ ವಿರುದ್ಧ ನ್ಯಾಯಾಲಯಗಳೂ ಅಸಹಾಯಕ ಅಂದಿತ್ತು. ಅದನ್ನು ಐವರಲ್ಲಿ ನಾಲ್ವರು ಒಪ್ಪಿದ್ದರು. ಅವರಲ್ಲಿ ಒಬ್ಬ ನ್ಯಾಯಾಧೀಶರ ಹೆಸರು ಶ್ರೀ ವೈ. ವಿ. ಚಂದ್ರಚೂಡ್. ಭಿನ್ನಾಭಿಪ್ರಾಯವನ್ನು ಅಂದು ನ್ಯಾಯಮೂರ್ತಿ ಹೆಚ್. ಆರ್. ಖನ್ನಾ ಅವರು ವ್ಯಕ್ತಪಡಿಸಿ ಎತ್ತಿದ್ದ ಪ್ರಶ್ನೆ : ತುರ್ತು ಪರಿಸ್ಥಿತಿಯಲ್ಲಿ ವ್ಯಕ್ತಿಗೆ "ಬದುಕುವ ಹಕ್ಕೂ ಇಲ್ಲವೆ ?" ಎಂದು. ಅವರಿಗೆ ಹೀಗೆ ಹೇಳಿದ್ದರಿಂದ ಮುಖ್ಯ ನ್ಯಾಯಾಧೀಶರ ಪದವಿ ದೊರೆಯಲಿಲ್ಲವಂತೆ ! ಆದರೆ ಸರ್ಕಾರದೊಂದಿಗೆ ಸಹಮತರಾಗಿದ್ದ ನ್ಯಾಯಮೂರ್ತಿ ಎಂ. ಹೆಚ್. ಬೇಗ್ ಅವರಿಗೆ ಆ ಬಡ್ತಿ ದೊರೆತಿತ್ತು. ಕಾಲಾನಂತರ ಅಂದಿನ ತೀರ್ಪು ನೀಡಿದ್ದ ನ್ಯಾಯಮೂರ್ತಿಗಳಾದ ವೈ. ವಿ. ಚಂದ್ರಚೂಡ್ ಮತ್ತು ಪಿ. ಎನ್. ಭಗವತಿ ತಾವು ಅಂಥ ತೀರ್ಪು ನೀಡಿದ್ದು ತಪ್ಪು ಅಂತ ಒಪ್ಪಿಕೊಂಡರು. ತಮ್ಮ ತೀರ್ಪಿನಿಂದಾದ ರಾಷ್ಟ್ರವ್ಯಾಪೀ ಅನರ್ಥಗಳನ್ನು ಅವರು ಗಮನಿಸಿ ಬೇಸರ ಹೊಂದಿದ್ದರು. ಸ್ವಾರಸ್ಯವೆಂದರೆ ಇಂದಿನ ಸುದೀರ್ಘ ೫೦೫ ಪುಟಗಳಷ್ಟು ತೀರ್ಪಿನ ಅರ್ಧ ಭಾಗವನ್ನು ಆ ಚಂದ್ರಚೂಡರ ಮಗ ಇಂದಿನ ನ್ಯಾಯಮೂರ್ತಿ ಡಿ. ವೈ. ಚಂದ್ರಚೂಡರೇ ಬರೆದಿದ್ದಾರೆ ! ಅಂದಿನ ತೀರ್ಪು ಇಂದಿನ ತೀರ್ಪಿನಿಂದಾಗಿ ಅಸಿಂಧುವಾಗಿದೆ.

ನ್ಯಾಯಮೂರ್ತಿ ಎಸ್. ಎ. ಬೋಚಡೆ ಅವರು ಯಾರದೇ ಮೂಲಭೂತ ಹಕ್ಕುಗಳಿಗೆ ಪ್ರಭುತ್ವ ಕಾರಣ ನೀಡದೆ ಚ್ಯುತಿ ಮಾಡಲಾಗದು ಅಂದಿದ್ದಾರೆ. ಖಾಸಗೀತನದ ಹಕ್ಕು ಬಹು ಪುರಾತನ ಅನ್ನುತ್ತಾರೆ. ರಾಮಾಯಣ, ಗೃಹ್ಯಸೂತ್ರ ಮತ್ತು ಅರ್ಥಶಾಸ್ತ್ರಗಳಲ್ಲಿ ಇದು ಅಡಕವಾಗಿದೆ ಎನ್ನುತ್ತಾರೆ.

ಸರ್ಕಾರ ಒಂದು ವಿಚಿತ್ರವಾದ ಕಾರಣ ಹೇಳಿತು. ನಮ್ಮದು ಹಿಂದುಳಿದ ಅರ್ಥ ವ್ಯವಸ್ಥೆ. ಮೂಲಭೂತ ಅಗತ್ಯಗಳಾದ ಅನ್ನ, ವಸತಿ ಮತ್ತಿತರ ಜೀವನಾವಶ್ಯಕತೆಗಳಿಗೇ ಸಾಕಷ್ಟು ಪ್ರವೇಶ ಇನ್ನೂ ದಕ್ಕಿಲ್ಲ. ಅಂತಹ ಸ್ಥಿತಿಯಲ್ಲಿ ಮೂಲಭೂತ ಹಕ್ಕುಗಳು ಅವರಿಗಿದೆ ಅನ್ನುವುದರಲ್ಲಿ ಅರ್ಥವೇ ಇಲ್ಲ ಅಂದಿತು. ನ್ಯಾಯಮೂರ್ತಿ ರೋಹಿಂಟನ್ ಮತ್ತು ನಾರಿಮನ್‌ರವರು ಸಿರಿವಂತರಿಗೆ ಮಾತ್ರ ಖಾಸಗೀತನದ ಹಕ್ಕು ಹಾಗೂ ಇತರ ಹಕ್ಕುಗಳೂ ಲಭ್ಯವಿರುವ ಈ ಸಂದರ್ಭದಲ್ಲಿ, ಪೌರರ ಈ ಹಕ್ಕುಗಳನ್ನು ರಕ್ಷಿಸುವುದು ಇನ್ನೂ ತುರ್ತು ಎಂದರು. ಈ ಹಕ್ಕುಗಳು ಅವರ ಸ್ವಂತದ್ದು; ಸರ್ಕಾರ ದಯವಿಟ್ಟು ನೀಡಿದ್ದಲ್ಲ, ಯಾವುದೇ ಸರ್ಕಾರ ಬರಲಿ ಹೋಗಲಿ, ಇವುಗಳು ಪೌರರ ಸ್ವಂತ ಆಸ್ತಿಯಿದ್ದಂತೆ. ಅದನ್ನು ಯಾರೂ ಕಸಿಯುವಂತಿಲ್ಲ. ಅವರು ಆರಿಸಿದ ಸರ್ಕಾರಕ್ಕೆ ಇದರಲ್ಲಿ ಪ್ರವೇಶವಿಲ್ಲ. ಸರ್ಕಾರಗಳು ಸತತ ಬದಲಾಯಿಸುತ್ತಲೇ ಇರುತ್ತವೆ. ಅವುಗಳ ಬಹುಮತ ಪರಿಸ್ಥಿತಿ ಈ ಹಕ್ಕುಗಳನ್ನು ಪ್ರಭಾವಿಸದು. ಸುಪ್ರಸಿದ್ಧ ನ್ಯಾಯವಾದಿ ಸಂಜಯ ಹೆಗ್ಗಡೆ ತಮ್ಮ ಲೇಖನದಲ್ಲಿ, ಸಲ್ಮಾನ್ ರಶ್ದಿಯ ಮಾತನ್ನು ಉದಾಹರಿಸುತ್ತಾರೆ. ಸರಕಾರಗಳಿಗೆ ಅಥವಾ ತಪ್ಪು ಮಾಡಿದ ಯಾರಿಗೇ ಆದರೂ ನಾಚಿಕೆ ಬೇಡವೇ ಅಂದರೆ "ನಾಚಿಕೆಯೊಡನೆ ಬಹಳ ಕಾಲ ಸಹವಾಸವಾದರೆ, ಅದೂ ಒಂದು ಪೀಠೋಪಕರಣದಂತೆ ನೆಲೆಸಿಬಿಡುತ್ತದೆ." ಇಂದಿನ ಸರಕಾರಕ್ಕೆ ಇದನ್ನು ಅನ್ವಯಿಸಬಹುದು.




ಸುಮಾರು ನಲವತ್ತು ವರ್ಷಗಳ ಕಾಲ ೧೯೭೦ರಿಂದ ಈಚೆಗೆ ನಮ್ಮ ಪೌರರು ಮೂಲಭೂತ ಹಕ್ಕುಗಳನ್ನು

ಸಂಪೂರ್ಣವಾಗಿ ಅನುಭವಿಸಲು ಆಗಲೇ ಇಲ್ಲ, ಅಂದಿನ ತಪ್ಪು ತೀರ್ಮಾನದಿಂದಾಗಿ. ಈ ಹಿನ್ನೆಲೆಯಲ್ಲಿ ಇಂದಿನ ಖಾಸಗೀತನ ಕುರಿತ, ತನ್ಮೂಲಕ ಮೂಲ ಹಕ್ಕುಗಳನ್ನು ಕುರಿತ ಸ್ಪಷ್ಟನೆ ತುಂಬ ಪ್ರಸ್ತುತವಾದ ತೀರ್ಮಾನವಾಗಿದೆ. ಪ್ರಸಕ್ತ ಸರ್ಕಾರದ ಕೋಮುವಾದ – ಬಂಡವಾಳವಾದೀ ಆಳ್ವಿಕೆಯ ಸಮಯದಲ್ಲಿ, ನ್ಯಾಯಾಲಯವಾದರೂ ಜನತೆಯ ಪರ ಇದೆ ಎನ್ನುವುದು ನಮ್ಮ ಪ್ರಜಾಪ್ರಭುತ್ವದಲ್ಲಿ ಭರವಸೆ ಮೂಡಿಸುತ್ತದೆ.

ಕೇಶವಾನಂದ ಭಾರತಿ ಪ್ರಕರಣದಲ್ಲಿ ಉಚ್ಚ ನ್ಯಾಯಾಲಯ ನೀಡಿದ "ಸಂವಿಧಾನಕ್ಕೆ ಮೂಲಭೂತ ಗುಣಲಕ್ಷಣಗಳು ಇವೆ ಮತ್ತು ಅವನ್ನು ತಿದ್ದುವಂತಿಲ್ಲ" ಎಂದಿದ್ದ ತೀರ್ಮಾನಕ್ಕೆ ಈ ತೀರ್ಮಾನ ಮತ್ತಷ್ಟು ಬೆಂಬಲ ನೀಡಿದೆ.

ಆಧಾರ್ ಗುರುತು ಚೀಟಿಯನ್ನು ಸಮಗ್ರ ಪೌರರಿಗೂ ಅನ್ವಯಿಸಿ ಜನತೆಯ ಜೀವನದ ಎಲ್ಲ ಸಂದರ್ಭಕ್ಕೂ ಅನ್ವಯಿಸಿ ನಮ್ಮ ಸರ್ಕಾರ ವ್ಯಕ್ತಿಯ ಈ ಖಾಸಗೀತನಕ್ಕೆ ಧಕ್ಕೆ ಉಂಟುಮಾಡಿದೆ. ಮೊನ್ನೆ ಸ್ಮಶಾನದಲ್ಲಿ ಹೆಣಸಂಸ್ಕಾರಕ್ಕೆ ಮುಂಚೆ ಆಧಾರ್ ಕಾರ್ಡ್ ತೋರಿಸಿ ಅಂತ ಕೇಳುವವರೆಗೆ ಆವರಿಸಿದೆ ಈ ಪೆಡಂಭೂತ. ಡಿಜಿಟಲ್ ಮಾಹಿತಿ ಯಾವ ರೀತಿಯೂ ಸುರಕ್ಷಿತವಲ್ಲವೆನ್ನುವುದು ಜಾಗತಿಕವಾಗಿ ಅನುಭವವಾಗಿದೆ. ಇದು ಆತಂಕಕಾರಿ ಅಂತ ಈ ಒಂಭತ್ತು ನ್ಯಾಯಾಧೀಶರಲ್ಲಿ ಒಬ್ಬರಾದ ಎಸ್. ಕೆ. ಕೌಲ್‌ರವರು ದನಿ ಎತ್ತಿದ್ದಾರೆ. ಆಧಾರ್ ಕುರಿತ ಪ್ರಕರಣ ಉಚ್ಚ ನ್ಯಾಯಾಲಯದ ಮುಂದೆ ಸದ್ಯದಲ್ಲೇ ಬರಲಿದೆ. ಇಂದಿನ ಖಾಸಗೀತನದ ತೀರ್ಮಾನ ಅದನ್ನು ಪ್ರಭಾವಿಸುತ್ತದೆಯೆಂದು ನಿರೀಕ್ಷಿಸಬಹುದು.

ಈ ಹಿಂದೆ ಒಂದು ಪ್ರಕರಣದಲ್ಲಿ ದ್ವಿಲಿಂಗಿ, ಸಲಿಂಗಿಗಳ ಖಾಸಗೀತನದ ಹಕ್ಕನ್ನು ನ್ಯಾಯಾಲಯ ಒಪ್ಪಿಕೊಳ್ಳಲಿಲ್ಲ. ಈಗ ಬಹುಶಃ ಅದನ್ನು ಒಪ್ಪಿಕೊಳ್ಳಬಹುದು. ಒಟ್ಟಿನಲ್ಲಿ ಈ ತೀರ್ಮಾನ ವ್ಯಾಪಕವಾಗಿ ಪ್ರಜಾಪ್ರಭುತ್ವದ ಪರವಾಗಿ, ಸಾಧಾರಣ ಜನತೆಯ ಪರವಾಗಿ ಕೆಲಸ ಮಾಡುವ ಆಶಯ ಇದೆ. ಹೆಚ್. ಆರ್. ಖನ್ನಾ ಅಂದು ಎತ್ತಿದ್ದ ಪ್ರಶ್ನೆ ಇಂದು ಸರಿ ಎಂದಾಗಿದೆ. ಅವರ ಆತ್ಮಕ್ಕೆ ಇದರಿಂದ ಸಮಾಧಾನ ದೊರಕೀತು ! ೧೯೭೬ರಲ್ಲಿ ಅಂದಿನ ನ್ಯೂಯಾರ್ಕ್ ಟೈಮ್ಸ್ ಪತ್ರಿಕೆ ಅವರನ್ನು ಹೊಗಳಿ ಮುಂದಿನ ಪೀಳಿಗೆ ಅವರ ಪ್ರತಿಮೆಯನ್ನು ಸಾರ್ವಜನಿಕವಾಗಿ ಸ್ಥಾಪಿಸಿ ಗೌರವಿಸುತ್ತದೆ ಎಂದು ಬರೆದಿತ್ತಂತೆ !

**ಕೆಲವು ಸಲಹೆಗಳು**

ಇಂದಿನ ಮಾಹಿತಿ ತಂತ್ರಜ್ಞಾನ ಯುಗದಲ್ಲಿ ಸಂಗ್ರಹಿಸಿದ ಮಾಹಿತಿಗಳನ್ನು ಸೋರದಂತೆ ರಕ್ಷಿಸಲಾಗುತ್ತಿಲ್ಲ. ಅಂತಹ ತಾಂತ್ರಿಕ ಆವಿಷ್ಕಾರ ಮುಂದೆ ಏನಾದರೂ ಬಂದೀತೇ ತಿಳಿಯದು. ಈ ಮಾಹಿತಿಗಳ ಸಂಗ್ರಹಣೆಯೂ ಆಧುನಿಕ ವ್ಯವಸ್ಥೆಗೆ ಅಗತ್ಯ. ಆದ್ದರಿಂದ ಯಾವುದೇ ಮಾಹಿತಿಯನ್ನು ಒಂದು ಉದ್ದೇಶಕ್ಕಾಗಿ ಸಂಗ್ರಹಿಸುವಾಗ, ಬಳಸುವಾಗ ಅದರ ಮಾಲಿಕನ ಒಪ್ಪಿಗೆ ಪಡೆಯಬೇಕು ಹಾಗೂ ಅದನ್ನು ಸಂಗ್ರಹಿಸಿ ಇಡುವಾಗಲೂ ಅದಕ್ಕೆ ವ್ಯಕ್ತಿಯ ಒಪ್ಪಿಗೆ ಪಡೆಯಬೇಕು. ಕೆಲವು ಮಾಹಿತಿಗಳ ಉದ್ದೇಶ ಮುಗಿದ ಮೇಲೆ ಆ ವ್ಯಕ್ತಿಗೇ ಹಿಂದಿರುಗಿಸಿ, ತಮ್ಮದೇ ಕಣಜದಿಂದ ಖಾಲಿ ಮಾಡಿಬಿಡಬೇಕು. ಮುಖ್ಯವಾಗಿ ವ್ಯಕ್ತಿಯ ಮಾಹಿತಿಗಳನ್ನು ಅವಳ/ನ ಅನುಮತಿ ಇಲ್ಲದೆ ಯಾರಾದರೂ ಪಡೆಯುವುದು / ಬಳಸುವುದು ಶಿಕ್ಷಾರ್ಹ ಎಂದಾಗಬೇಕು.

ಸಂವಿಧಾನದ ತಿದ್ದುಪಡಿಯ ಕ್ರಮದಲ್ಲಿ ಚುನಾಯಿತ ಪ್ರತಿನಿಧಿಗಳು ಯಾವುದೇ ಪಕ್ಷದ ವ್ಹಿಫ್‌ಗೆ ಒಳಗಾಗದ ಸ್ವಾತಂತ್ರ್ಯ ಇರಬೇಕು. ಸದಸ್ಯರು ಆತ್ಮಸಾಕ್ಷಿಯಿಂದ ಈ ಕುರಿತು ಮತ ಚಲಾಯಿಸುವುದಾದರೆ, ಬಹುಮತ ಪಡೆದ ಪಕ್ಷಗಳು ಈ ಅಧಿಕಾರವನ್ನು ದುರುಪಯೋಗ ಮಾಡುವುದು ನಿಂತೀತು.

ಖಾಸಗೀ ಹಕ್ಕು ಕುರಿತ ಇಂದಿನ ತೀರ್ಮಾನದಲ್ಲಿ ಮೂವರು ನ್ಯಾಯಮೂರ್ತಿಗಳು ಈ ಕುರಿತು ಒಂದು ಕಾನೂನು ರಚಿಸುವ ಅಗತ್ಯವನ್ನು ಸೂಚಿಸಿದ್ದಾರೆ. ಅದನ್ನು ಒಪ್ಪಿಕೊಳ್ಳುವುದು ಒಳ್ಳೆಯದು ಎನ್ನಿಸುತ್ತದೆ. ಮುಂದೆಂದೂ ಈ ಕುರಿತು ಕ್ಯಾತೆ ತೆಗೆಯದಂತೆ ಮೂಲಭೂತ ಹಕ್ಕುಗಳ ಪಟ್ಟಿಯಲ್ಲಿ "ಖಾಸಗೀತನದ ಹಕ್ಕು" ಅಂತ ಸೇರಿಸಿದರೆ ಹೇಗೆ ?

'ದಿ ಹಿಂದು' ಪತ್ರಿಕೆಯ ಸೆಪ್ಟೆಂಬರ್ ೪ರಂದು ಪ್ರಕಟವಾಗಿರುವ ಶ್ರೀ ಸಂಜಯ ಹೆಗ್ಗಡೆ ಅವರ ಲೇಖನ 'And then there were nine' ಎಲ್ಲರೂ ಓದಬೇಕು.

**ಕೆ. ಎಸ್. ಪಾರ್ಥಸಾರಥಿ**
೧೧೦೫, 'ಪೂರ್ವ ಏಟ್ರಿಯ ಪ್ಲಾಟೀನ', ಅಶ್ವಥ್‌ನಗರ, ಆರ್.ಎಂ.ವಿ. ಬಡಾವಣೆ, ಬೆಂ. – ೯೪

# ಬೆಳಕಿನ ಪರಿಚಾರಕರು



ಬಂಧಿಯಾಗಿದ್ದ ಅರಿವಿನ ಅರಿವು ಬಡವನಲ್ಲೂ ಗುಟುಕು ಉಸಿರಾಡಲು
ಬೆಳಕಿನ ಮುಸುಕು ತೆರೆದು ಬುದ್ಧ ಎಲ್ಲಕೂ ಮುಟ್ಟಲು ಕೊಡುವ ತನಕ
ಕತ್ತಲು ಕೇಕೆಹಾಕುತ್ತಿತ್ತು, ಅಜ್ಞಾನದ ಹಬ್ಬಕೆ ಮಾರಣಾಂತಿಕ ವಡವೆ ತೊಡಿಸಿ
ಯಶೋಧರೆ ರಾಹುಲನ ಹಿಂದೆಬಿಟ್ಟು ಅವನು ಮುಚ್ಚಿಹೋದ ಬಾಗಿಲು
ತೆರೆದಿಟ್ಟಿತು ದನಿವಂಚಿತ ಯಶೋಧರೆಯರು ಕದ್ದುಮುಚ್ಚಿ ತೆರುವ
ಭರವಸೆ ಬೆಳಕಿನ ಮೌಲ್ಯ. ತ್ಯಾಗದ ಗರ್ಭದೊಳಗೆ ಸಂಭ್ರಮ ಸಂತಾನ !

ಓ ! ಹಿಮಾಲಯದ ನೀರು ಕುಡಿದ ಸಮುದ್ರಗಳೂ ಉಪ್ಪಾಗಿವೆ
ಅದೃಶ್ಯ ಹೆಂಗಳೆಯರ ಕಣ್ಣೀರೂ ಬೆರೆತು !
ಆದರೂ ಹರಿದಿದೆ ಸಮುದ್ರದ ನಾಲ್ಕು ಕಡೆಗೂ ಸಿಹಿಗಾಳಿ
ಬುದ್ಧನ ಮಾತಿನ ಮಾಂತ್ರಿಕ ಹೆಜ್ಜೆಗಳ ಜೊತೆಗೆ.

ಕಾವ್ಯಲೋಕ

ಮರುಭರವಸೆಯ ಬಾಗಿಲುಗಳ ಮತ್ತೊಮ್ಮೆ ತೆರೆದ ಗಾಂಧಿ
ಸದಾ ಖಡ್ಗ ಮತ್ತು ಹಸಿವುಗಳ ಬರ್ಬರತೆಗೆ ಬಗ್ಗಿಹೋಗಿ
ಬುದ್ಧಮುಟ್ಟಿದ ನಂತರವೂ ಎದ್ದೇಳದ ಜನಕೆ ಉಸಿರು ಕೊಟ್ಟು
ಪರಂಗಿ ಫಿರಂಗಿಗಳಿಗೂ ಮೌನದ ಗುರಾಣಿ ಒಡ್ಡಿ
ಅಕಾಲದ ನಿದ್ದೆಗೆ ಒಗ್ಗಿ ಕೂತ ಮನುಷ್ಯತ್ವವನು ಎಚ್ಚರಿಸಿ
ಒಡೆದೆದೆಗಳ ದೇಶಪ್ರೇಮದ ದಾರದಲಿ ಪೋಣಿಸುವ ಮುನ್ನ
ಶಾಂತಿಗೂ ಶಕ್ತ ಏರುದನಿ ಇದ್ದೀತೆಂದು ಜಗಕೆಲ್ಲ ಅರಿವಿತ್ತು !

ಈಗ ನಾವಿಲ್ಲಿ ಕಳೆದುಹೋಗಿದ್ದೇವೆ ಅನಂತ ರಾಕ್ಷಸ ಭೀತಿ ಸಂಘರ್ಷಗಳ ನಡುವೆ
ಗೋಧಿ ಬೆಳೆದು ಪಾರಿವಾಳಗಳ ಹಾರಿಸುತ್ತಲೇ ಇರಲಿಚ್ಚಿಸುವ ಫಲವತ್ತು ನೆಲದಲ್ಲಿ
ನಮ್ಮತನದ ಶಕ್ತಿಗೆ ಮೆತ್ತಿದ ಮರೆವಿನ ಧೂಳು ಹಾರುವ ಕ್ಷಣಗಳ ಮರುಹುಟ್ಟಿಗಾಗಿ.

**ತಾ. ಶ್ರೀ. ಗುರುರಾಜ್**
ಉಪನ್ಯಾಸಕರು, ರೀಜನಲ್ ಇನ್‌ಸ್ಟಿಟ್ಯೂಟ್ ಆಫ್ ಇಂಗ್ಲಿಷ್, ದಕ್ಷಿಣ ಭಾರತ
ಜ್ಞಾನಭಾರತಿ ಆವರಣ, ಬೆಂಗಳೂರು– ೫೬೦ ೦೫೬

# ಚಿರ ನೆನಪಿಗೆ ಸರಿದ 'ಸೋದರಿತ್ವ'ದ ಪ್ರತಿಪಾದಕಿ

# ಕೇಟ್ ಮಿಲೆಟ್



ಇತ್ತೀಚೆಗೆ ಅಮೆರಿಕಾದ ಸ್ತ್ರೀವಾದಿ ಲೇಖಕಿ ಮತ್ತು ಹೋರಾಟಗಾರ್ತಿ ಕೇಟ್ ಮಿಲೆಟ್ ಪ್ಯಾರಿಸ್‌ನಲ್ಲಿ ಸೆಪ್ಟೆಂಬರ್ ೬ರಂದು ನಿಧನರಾದ ಸುದ್ದಿ ಪತ್ರಿಕೆಯಲ್ಲಿ ಓದಿದ ಒಂದು ಕ್ಷಣ ಮನಸ್ಸು ಭಾರವಾಯಿತು. ನೆನಪು ಹಿಂದಕ್ಕೆ ಸರಿಯಿತು. ಎಂಭತ್ತರ ದಶಕದ ಆರಂಭದಲ್ಲಿ ನಾವಿನ್ನು ಸ್ತ್ರೀವಾದದ ಆರಂಭದ ಪಾಠಗಳನ್ನು ಕಲಿಯುತ್ತಿದ್ದ ಹೊತ್ತಿನಲ್ಲಿ ಮಿಲೆಟ್ ಬರೆದ 'ಸೆಕ್ಷುಯಲ್ ಪಾಲಿಟಿಕ್ಸ್' ಪುಸ್ತಕ ನಮ್ಮನ್ನೆಲ್ಲಾ ಅದೆಷ್ಟೊಂದು ಪ್ರಭಾವಿಸಿತ್ತು! ಕೂಡಲೇ ಎದ್ದು ನನ್ನ ಪುಸ್ತಕದ ಕೋಣೆಗೆ ಹೋಗಿ ಶೆಲ್ಫಿನಲ್ಲಿದ್ದ ಆ ಪುಸ್ತಕವನ್ನೊಮ್ಮೆ ಸ್ಪರ್ಶಿಸಿದೆ. ಅದೇ ಹಳದಿ ಬಣ್ಣದ ರಟ್ಟಿನ ಮೊದಲ ಮುದ್ರಣದ ಪುಸ್ತಕ! ಬಣ್ಣ ಮಾಸಿದ ಆ ಪುಸ್ತಕವನ್ನು ತೆರೆಯುತ್ತಿದ್ದಂತೆ ನನ್ನ ಮನದಲ್ಲಿ ತೆರೆದುಕೊಂಡ ಕೇಟ್‌ಳ ವಿಚಾರ ಮತ್ತು ಚಿಂತನೆಗಳ ಮೆಲುಕು ಇಲ್ಲಿದೆ.

೧೯೩೪ರ ಸೆಪ್ಟೆಂಬರ್ ೧೪ರಂದು ಅಮೆರಿಕೆಯ ಮಿನಿಸೋಟಾದಲ್ಲಿ ಜನಿಸಿದ ಕ್ಯಾಥರಿನ್ ಮುರ್ರೆ ಮಿಲೆಟ್ ತನ್ನ ಪದವಿ ವಿದ್ಯಾಭ್ಯಾಸವನ್ನು ಮಿನಿಸೋಟಾ ವಿಶ್ವವಿದ್ಯಾಲಯದಲ್ಲೂ, ಸ್ನಾತಕೋತ್ತರ ಪದವಿಯನ್ನು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲೂ ಮತ್ತು ಪಿಎಚ್.ಡಿ. ಪದವಿಯನ್ನು ಕೊಲಂಬಿಯಾ ವಿಶ್ವವಿದ್ಯಾಲಯದಿಂದಲೂ ಪಡೆದುಕೊಂಡಳು. ಅವಳ ಡಾಕ್ಟರೇಟ್ ಮಹಾಪ್ರಬಂಧದ ಆಧರಿತ ಕೃತಿಯೇ ೧೯೭೦ರಲ್ಲಿ ಮಿಲೆಟ್ ಅವರ 'ಸೆಕ್ಷುಯಲ್ ಪಾಲಿಟಿಕ್ಸ್'. ಈ ಕೃತಿ ಪ್ರಕಟವಾಗುವುದಕ್ಕೆ ಮುಂಚೆಯೇ ಸ್ತ್ರೀವಾದದ ಕ್ಲಾಸಿಕ್ಸ್‌ಗಳಾದ ಸಿಮೊನ್ ದ ಬೊವಾ ಅವರ 'ದಿ ಸೆಕೆಂಡ್ ಸೆಕ್ಸ್', ಬೆಟ್ಟಿ ಫ್ರೈಡನ್‌ರ 'ಫೆಮಿನೈನ್ ಮಿಸ್ಟಿಕ್', ಶುಲಾಮಿತ್ ಫೈರ್‌ಸ್ಟನ್‌ಳ 'ದಿ ಡಯಲಕ್ಟಿಕಸ್ ಆಫ್ ಸೆಕ್ಸ್' ಪ್ರಕಟವಾಗಿದ್ದವು. ಆದರೂ ಈ ಪುಸ್ತಕವು ಕೊಪರ್ನಿಕಸನ ಕ್ರಾಂತಿಯಷ್ಟೇ ಪ್ರಭಾವ ಬೀರಿತು ಎಂದು ಭಾವಿಸಲಾಯಿತು. ಪ್ರಕಟವಾದ ಹದಿನೈದು ದಿನಗಳಲ್ಲೇ ಸುಮಾರು ೧೦,೦೦೦ ಪ್ರತಿಗಳು ಮಾರಾಟವಾದವು. ಬೌದ್ಧಿಕ ಮತ್ತು ಭಾವನಾತ್ಮಕ ಮುಕ್ತತೆ ಮತ್ತು ಪ್ರೀತಿಯನ್ನು ತನ್ನಲ್ಲಿ ಹುದುಗಿಸಿಕೊಂಡ ಮಹಿಳಾ ವಿಮೋಚನೆಯ ಅಗತ್ಯ ಮತ್ತು ಸ್ವರೂಪವನ್ನು ವಿಶ್ಲೇಷಿಸುವ ಪ್ರಮುಖ ದಾಖಲೆಯನ್ನಾಗಿ ಪರಿಗಣಿಸಿದ ನ್ಯೂಯಾರ್ಕ್ ಟೈಮ್ಸ್ ಪತ್ರಿಕೆಯು ಈ ಕೃತಿಯನ್ನು 'ಸ್ತ್ರೀವಿಮೋಚನೆಯ ಬೈಬಲ್' ಎಂದೇ ಹೊಗಳಿ ಬರೆಯಿತು. "ಮಹಿಳಾ ಚಳುವಳಿಯ ಮಾವೊತ್ಸೆ ತುಂಗ್" ಎಂದು 'ಟೈಮ್' ಮ್ಯಾಗಜೈನ್ ಬಣ್ಣಿಸಿತು.

ಮಿಲೆಟ್ ತನ್ನ 'ಸೆಕ್ಷುಯಲ್ ಪಾಲಿಟಿಕ್ಸ್'ನಲ್ಲಿ ಮೂರು ಸಾಹಿತ್ಯಿಕ ಪಠ್ಯಗಳಲ್ಲಿ ಚಿತ್ರಿತವಾಗಿರುವ ನಿದರ್ಶನಗಳ ಮೂಲಕ ಲೈಂಗಿಕ ಕ್ರಿಯೆಯಲ್ಲಿ ಸ್ತ್ರೀ–ಪುರುಷ ಲಿಂಗಪ್ರಭೇದಗಳ ನಡುವೆ ಇರುವ ಅಧಿಕಾರದ ಸಂಬಂಧವನ್ನು ವಿವರವಾಗಿ ವಿಶ್ಲೇಷಿಸುತ್ತಾಳೆ. ಅವಳ ಪ್ರಕಾರ ರಾಜಕೀಯದ ಸಾರವೆಂದರೆ ಅಧಿಕಾರ. 'ಲೈಂಗಿಕ ರಾಜಕಾರಣವು ನಮ್ಮ ಸಂಸ್ಕೃತಿಯಲ್ಲಿ ಅತ್ಯಂತ ವ್ಯಾಪಕವಾಗಿರುವ ಸಿದ್ಧಾಂತವಾಗಿದ್ದು, ಅದು ತನ್ನ ಮೂಲಭೂತ ಅಧಿಕಾರದ ಪರಿಕಲ್ಪನೆಯನ್ನು ಒದಗಿಸುತ್ತ ಬಂದಿದೆ. ಆಳುವ ಲಿಂಗ ಪ್ರಭೇದವು ತನ್ನ ಅಧೀನ ಲಿಂಗ ಪ್ರಭೇದದ ಮೇಲೆ ತಾನು ಸಾಧಿಸಿರುವ ಅಧಿಕಾರವನ್ನು ಉಳಿಸಿಡಲು, ವಿಸ್ತರಿಸಲು ಯತ್ನಿಸುವ ಪ್ರಕ್ರಿಯೆಯೇ ಲಿಂಗರಾಜಕೀಯ.'

ಪಿತೃಪ್ರಧಾನತೆಯನ್ನು ಕುರಿತ ಕೇಟ್ ಮಿಲ್ಲೇಟಳ ಸಿದ್ಧಾಂತ ವಿಶಿಷ್ಟವಾದುದು. ಪಿತೃಪ್ರಾಧಾನ್ಯತೆಯೊಳಗೆ ಪುರುಷನ ಪ್ರಾಬಲ್ಯ ಮತ್ತು ಹೆಣ್ಣಿನ ಅಧೀನತೆಗಳ ವ್ಯವಸ್ಥೆಯೊಂದು ಸರ್ವಾಂತರ್ಯಾಮಿಯಾಗಿರುತ್ತದೆ. ಈ ವ್ಯವಸ್ಥೆ ಸಾಮಾಜೀಕರಣದ ಮೂಲಕ ಸಾಧಿಸಲ್ಪಟ್ಟು, ಸೈದ್ಧಾಂತಿಕ ಸಾಧನಗಳ ಮೂಲಕ ಶಾಶ್ವತಗೊಳಿಸಲ್ಪಡುತ್ತದೆ. ಸಾಂಸ್ಥಿಕ ಪದ್ಧತಿಗಳ ಮೂಲಕ ಅದು ಉಳಿಸಲ್ಪಡುತ್ತದೆ. ಅಭ್ಯಾಸ ಬಲದಿಂದ ಪುರುಷರು ಆಳುವ ಮನೋಭಾವದವರು ಆಗಿರುತ್ತಾರೆ. ಅರ್ಥವ್ಯವಸ್ಥೆ, ರಾಜ್ಯ ವ್ಯವಸ್ಥೆ, ಅದರ ಏಜೆಂಟರಾದ ಮಿಲಿಟರಿ ಮುಂತಾದವುಗಳನ್ನು ನಿಯಂತ್ರಿಸುವವರು ಪುರುಷರೇ ಆಗಿದ್ದಾರೆ. ಪಿತೃ ಪ್ರಧಾನ ತತ್ವವನ್ನು ಪೋಷಿಸುವ ಬಹು ಮುಖ್ಯ ಸಂಸ್ಥೆ ಕುಟುಂಬ. ಈ ಪಿತೃ ಪ್ರಧಾನ ವ್ಯವಸ್ಥೆಗೆ ಯಾವುದೇ ದೃಢವಾದ ಜೀವಶಾಸ್ತ್ರೀಯ ಆಧಾರವಿಲ್ಲ. ಆದ್ದರಿಂದ ಪರಂಪರಾಗತವಾಗಿ ರವಾನೆಯಾಗುವ ಸಂಸ್ಕೃತಿ ಮತ್ತು ಯುವಜನತೆಯನ್ನು ತರಬೇತುಗೊಳಿಸುವ ಮೂಲಕವೇ ಅದು ತನ್ನನ್ನು ಉಳಿಸಬೇಕು. ಒಂದು ಅಧಿಕಾರ ವ್ಯವಸ್ಥೆಯಾಗಿ ದೀರ್ಘಕಾಲ ಬಾಳುವ ಪಿತೃಪ್ರಧಾನತೆ ವ್ಯವಸ್ಥೆಯೊಳಗೆ ರಕ್ತಗತವಾಗಿಬಿಡುತ್ತದೆ. ಸಾರ್ವತ್ರಿಕತೆ ಮತ್ತು ನಿರಂತರತೆಯೇ ಪಿತೃಪ್ರಧಾನತೆಯ ಬಹು ಪ್ರಬಲ ಮನೋವೈಜ್ಞಾನಿಕ ಅಸ್ತ್ರವಾಗಿದೆ.

ಮಹಿಳಾ ಚಳುವಳಿಯ ಎರಡನೆಯ ಅಲೆ ೧೯೬೦–೭೦ರ ದಶಕದಲ್ಲಿ ಅಮೆರಿಕಾದಲ್ಲಿ ಪ್ರಬಲವಾಗಿದ್ದಾಗ, ಕೇಟ್ ಮಿಲೆಟ್ ಅದರ ಮುಂಚೂಣಿಯಲ್ಲಿದ್ದಳು. ೧೯೬೬ರಲ್ಲಿ ಅವಳು 'ನ್ಯಾಷನಲ್ ಆರ್ಗನೈಸೇಷನ್ ಫಾರ್ ವಿಮೆನ್'ನ ಸಮಿತಿಯ ಸದಸ್ಯೆಯಾಗಿದ್ದಳು. 'ಸೋದರಿತ್ವವು ಬಲಿಷ್ಠವಾದುದು' ಎಂದು ನಂಬಿದ್ದ ಮಿಲೆಟ್ ಕಾನೂನು ಸಮ್ಮತ ಗರ್ಭಪಾತ, ಉದ್ಯೋಗದ ಕ್ಷೇತ್ರದಲ್ಲಿ ಲಿಂಗ ಸಮಾನತೆ ಮತ್ತು ಲೈಂಗಿಕ ಸ್ವಾತಂತ್ರ್ಯದ ಪರಿಕಲ್ಪನೆಯು ಸಾಕಾರವಾಗುವ ದಿಕ್ಕಿನತ್ತ ಬಹಳ ದುಡಿದಳು ಮತ್ತು ಸ್ವಲ್ಪಮಟ್ಟಿನ ಯಶಸ್ಸು ಗಳಿಸಿದಳು. ಮಿಲೆಟ್ ತನ್ನ ಪತ್ರಿಕೋದ್ಯಮ ಸಂಗಾತಿ ಸೋಫಿ ಖೇರ್ ಜೊತೆಗೆ ಕಲೆ ಮತ್ತು ಬೌದ್ಧಿಕ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಮಹಿಳೆಯರ ಹಕ್ಕುಗಳ ಸಮಿತಿಯ ಆಹ್ವಾನದ ಮೇರೆಗೆ ೧೯೭೯ರಲ್ಲಿ ಇರಾನಿನ ಟೆಹರಾನ್‌ಗೆ ಹೋಗಿದ್ದರು. ಗಂಡುಹುಡುಗರ ಜೊತೆ ಹುಡುಗಿಯರು ಶಾಲೆಗೆ ಹೋಗದಿರುವಂತೆ ಇರುವ ನಿಷೇಧ, ದುಡಿಯುವ ಮಹಿಳೆಯರು ಕಡ್ಡಾಯವಾಗಿ ಮುಸುಕು ಧರಿಸಬೇಕೆಂಬ ನಿಯಮ ಹಾಗೂ ವಿಚ್ಛೇದನದ ಹಕ್ಕನ್ನು ಹೆಂಗಸರಿಗೆ ನಿರಾಕರಿಸುವ ಖೋಮಿನಿ ಸರ್ಕಾರದ ವಿರುದ್ಧ ಪ್ರಚಾರ ಮಾಡುತ್ತಾ ೧೯೭೯ರ ಇರಾನಿನ ಮೊದಲ ಮಹಿಳಾ ದಿನಾಚರಣೆಯಲ್ಲಿ ಭಾಗವಹಿಸಿದ್ದಕ್ಕೆ ಖೋಮಿನಿಯ ಕೋಪಕ್ಕೆ ಗುರಿಯಾದಳು. ಅವಳನ್ನು ಅವಳ ಹೋಟೆಲ್ ರೂಮಿನಿಂದ ಹೊರಕ್ಕೆ ದಬ್ಬಿ ಹದಿನೈದು ದಿನಗಳ ಕಾಲ ಬಂಧನದಲ್ಲಿಟ್ಟು ನಂತರ ಬಿಡುಗಡೆ ಮಾಡಿದರು. ಈ ಅನುಭವವನ್ನು ಅವಳು ತಮ್ಮ ಪುಸ್ತಕ 'ಗೋಯಿಂಗ್ ಟು ಇರಾನ್' ಕೃತಿಯಲ್ಲಿ ಹಂಚಿಕೊಂಡಿದ್ದಾಳೆ.

ಇಂಗ್ಲಿಷ್ ಮತ್ತು ಸಮಾಜಶಾಸ್ತ್ರ ಬೋಧಿಸುವ ಅಧ್ಯಾಪಕಿಯಾಗಿ, ಸ್ತ್ರೀವಾದಕ್ಕೆ ಸಂಬಂಧಪಟ್ಟ ಹಲವಾರು ಪುಸ್ತಕಗಳ ಕರ್ತೃವಾಗಿ, ಮಹಿಳಾ ಹಕ್ಕುಗಳ ಹೋರಾಟಗಾರ್ತಿಯಾಗಿ, ಶಿಲ್ಪ ಕಲಾವಿದೆಯಾಗಿ ಬಹುಮುಖ ಪ್ರತಿಭೆಯುಳ್ಳವಳು. ಅವಳ ಪುಸ್ತಕ 'ದಿ ಪಾಲಿಟಿಕ್ಸ್ ಆಫ್ ಕ್ರುಯಾಲಿಟಿ'ಯಲ್ಲಿ ವಿವಿಧ ರಾಷ್ಟ್ರಗಳ ಸರ್ಕಾರವು ಪ್ರಾಯೋಜಿಸುವ ಚಿತ್ರಹಿಂಸೆಯನ್ನು ಕುರಿತು ಬರೆದಿದ್ದಾಳೆ. ಅವಳ ಆತ್ಮಚರಿತ್ರೆ 'ಫ್ಲೈಯಿಂಗ್', ಅವರ ತಾಯಿಯನ್ನು ಕುರಿತು 'ಮದರ್ ಮಿಲೆಟ್', ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಪುರುಷ ಪ್ರಾಧಾನ್ಯತೆಯ ರಾಜಕಾರಣದ ಹಲವು ಮಗ್ಗುಲುಗಳನ್ನು ಕುರಿತು ಕೇಟ್ ಮಾಡಿರುವ ವಿಶ್ಲೇಷಣೆ ಇಂದಿಗೂ ಅರ್ಥಪೂರ್ಣವಾಗಿ ಸಂಶೋಧನೆಗಳಿಗೆ ದಾರಿದೀಪವಾಗಿದೆ.

ಬದುಕಿನುದ್ದಕ್ಕೂ ಕ್ರಿಯಾಶೀಲವಾಗಿದ್ದ ಮಿಲೆಟ್ ಸೆಪ್ಟೆಂಬರ್ ೧೪ರಂದು ತನ್ನ ೮೩ನೆಯ ಹುಟ್ಟುಹಬ್ಬವನ್ನು ಆಚರಿಸಿಕೊಳ್ಳಲು ಸಂಗಾತಿ ಸೋಫಿ ಖೇರ್ ಜೊತೆಗೆ ಪ್ಯಾರಿಸ್‌ಗೆ ಹೊರಟಿದ್ದಳು. ಆದರೆ ಹುಟ್ಟುಹಬ್ಬಕ್ಕೆ ಮುಂಚೆಯೇ ಸೆಪ್ಟೆಂಬರ್ ೬ರಂದು ತೀವ್ರ ಹೃದಯಾಘಾತದಿಂದ ಮರಣವನ್ನಪ್ಪಿದಳು.

**ಡಾ॥ ಎನ್. ಗಾಯತ್ರಿ**
೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್, ಕೆಂಪೇಗೌಡ ನಗರ, ಗವಿಪುರಂ, ಬೆಂ–೧೯

# ಬೆಳದಿಂಗಳ ರಾತ್ರಿಯಲ್ಲಿ

ಕ್ರಿಶ್ಚಿಯನ್ ಮಠಾಧಿಪತಿ ಮರಿಗ್ನಾನ್ ಅವರಿಗೆ "ದೇವರ ಸರದಾರ" ಎನ್ನುವುದು ಅನ್ವರ್ಥನಾಮವಾಗಿತ್ತು. ಈತ ಎತ್ತರದ ಸಣಕಲು ಪಾದ್ರಿ. ಆತನಿಗೆ ತನ್ನ ನಂಬಿಕೆಯಲ್ಲಿ ಒಂದು ಬಗೆಯ ದೃಢತೆ ಇತ್ತು. ಆತನ ನಂಬಿಕೆ ನ್ಯಾಯಯುತವಾಗಿಯೂ ಅತ್ಯುನ್ನತ ಮಟ್ಟದ ಆತ್ಮವಿಶ್ವಾಸದ್ದೂ ಆಗಿತ್ತು. ಆತನ ಎಲ್ಲ ನಂಬಿಕೆಗಳು ಖಚಿತವಾಗಿದ್ದವು ಎಂದೂ ಅವುಗಳ ಬಗ್ಗೆ ಸ್ವಲ್ಪವೂ ಅನುಮಾನ ಇರಲಿಲ್ಲ. ತಾನು ದೇವರನ್ನು ಚೆನ್ನಾಗಿ ಅರ್ಥಮಾಡಿಕೊಂಡಿರುವೆನೆಂದು ದೃಢವಾಗಿ ನಂಬಿದ್ದ. ದೇವರ ಎಲ್ಲ ಆಶಯಗಳು, ಇಚ್ಛೆಗಳು ಮತ್ತು ಉದ್ದೇಶಗಳನ್ನು ಸಂಪೂರ್ಣವಾಗಿ ಅರ್ಥಮಾಡಿಕೊಂಡಿರುವೆನೆಂಬ ದೃಢನಂಬಿಕೆ ಇತ್ತು.

ತನ್ನ ಆಡಳಿತಕ್ಕೆ ಒಳಪಟ್ಟ ಕ್ಷೇತ್ರದ ಪುಟ್ಟಮನೆಯ ಸುತ್ತಲೂ ಇದ್ದ ತೋಟದಲ್ಲಿ ಆಗಿಂದಾಗ ಓಡಾಡುತ್ತಿರುವಾಗ ಒಂದು ಪ್ರಶ್ನೆ ಉದ್ಭವಿಸುತ್ತಿತ್ತು : "ದೇವರು ಇದನ್ನು ಏಕೆ ಸೃಷ್ಟಿಸಿದ ?" ತನ್ನ ಆಲೋಚನಾ ಕ್ರಮದಲ್ಲಿ ತನಗೆ ಸಮಂಜಸವಾದ ಉತ್ತರ ಸಿಕ್ಕಿತು ಎಂದು ತಾನು ದೇವರ ಸ್ಥಾನದಲ್ಲಿ ನಿಂತು ಸಮಾಧಾನಪಡುತ್ತಿದ್ದ. ಈ ಪಾದ್ರಿ ದೈವ ಸೃಷ್ಟಿಯನ್ನು ಗೊಣಗಾಡದೆ ವಿನಯದಿಂದ ಒಪ್ಪಿಕೊಳ್ಳುವ ಗುಂಪಿಗೆ ಸೇರಿದವನಲ್ಲ. ದೇವರೇ ! ನಿನ್ನ ಅಂತಿಮ ಗುರಿಯನ್ನು ನಾನು ಅರಿಯಲಾರೆ ಎಂಬ ವಿನಯಶೀಲ ದೃಷ್ಟಿ ಇವನದಾಗಿರಲಿಲ್ಲ. ಆತನ ಧೋರಣೆ "ನಾನು ದೇವರ ಸೇವಕ, ಸೇನಾನಿ ಆದ್ದರಿಂದ ದೇವರು ಏನು ಮಾಡಲು ಇಚ್ಛಿಸುತ್ತಾನೆ ? ಆತನ ಅಭೀಷ್ಟವೇನು ಎನ್ನುವುದನ್ನೂ ನಾನು ಸಂಶೋಧಿಸಿ ತಿಳಿಯಬೇಕು" ಎನ್ನುವುದಾಗಿತ್ತು.

ಪ್ರಕೃತಿಯಲ್ಲಿ ಇರುವುದೆಲ್ಲವೂ ತರ್ಕಬದ್ಧವಾಗಿ ಸೃಷ್ಟಿಸಲ್ಪಟ್ಟಿವೆ ಎಂದು ನಂಬಿದ್ದ. ಎಲ್ಲವನ್ನೂ "ಏತಕ್ಕಾಗಿ, ಯಾವ ಕಾರಣದಿಂದ" ಎನ್ನುವುದನ್ನು ಒಂದಕ್ಕೊಂದು ಹೊಂದಿಕೊಂಡಿರುವುದು ಪ್ರಮಾಣೀಕರಿಸುತ್ತಿದೆ ಎಂದು ತಿಳಿದುಕೊಂಡಿದ್ದ. ದಿನಂಪ್ರತಿ ಬೆಳಗಾಗುವುದು ಮಾನವನನ್ನು ಸಂತೋಷಪಡಿಸಲಿಕ್ಕೆ ಎಂದು ತಿಳಿದ. ಹಗಲು ಇರುವುದು ಬೆಳೆಗಳನ್ನು ಮಾಡಿಸಲು, ಮಳೆ ಅವುಗಳಿಗೆ ನೀರುಣಿಸಲು, ಸಂಧ್ಯಾ ಸಮಯ ಜನರು ಮಲಗಿ ವಿಶ್ರಾಂತಿ ಪಡೆಯಲು ತಯಾರಿ ಮಾಡಿಕೊಳ್ಳಲೂ ಹಾಗೂ ರಾತ್ರಿಗಳು ನಿದ್ರೆ ಮಾಡಲೂ ಮಾಡಲ್ಪಟ್ಟಿವೆ ಎಂದು ತಿಳಿದ.

ವರ್ಷದಲ್ಲಿ ನಾಲ್ಕು ಋತುಗಳು ಇರುವುದು ವ್ಯವಸಾಯಕ್ಕೆ ಅನುಕೂಲ




ಒದಗಿಸುವುದಕ್ಕೆ ಎಂದು ಅರ್ಥಮಾಡಿಕೊಂಡ. ಆದರೆ ಪ್ರಕೃತಿಗೆ ಇಂತಹ ಯಾವ ಅಪೇಕ್ಷೆಯೂ ಇಲ್ಲವೆನ್ನುವ ಕಲ್ಪನೆ ಆತನಿಗೆ ಹೊಳೆಯಲಿಲ್ಲ. ಪ್ರಕೃತಿಯಲ್ಲಿ ಇರುವವರು ಕಾಲಕಾಲಕ್ಕೆ ಬರುವ ಸಂಕಷ್ಟಗಳನ್ನು ಎದುರಿಸುತ್ತಲೇ ಜೀವಿಸುತ್ತಿರುವುದು ಪಾದ್ರಿಯ ಬುದ್ಧಿಗೆ ಹೊಳೆಯಲೇ ಇಲ್ಲ.

ಈ ಪಾದ್ರಿ ಹೆಂಗಸರನ್ನು ದ್ವೇಷಿಸುತ್ತಿದ್ದ. ಆತನಿಗೆ ಅರಿವಿಲ್ಲದೆಯೇ ಈ ದ್ವೇಷ ಸಹಜ ಪ್ರವೃತ್ತಿಯಿಂದ ಉಂಟಾಗಿತ್ತು. ಆತ ಅನೇಕ ಬಾರಿ ಕ್ರಿಸ್ತನು ಹೇಳಿದ್ದ 'ಹೆಣ್ಣೇ, ನಿನ್ನ ಸಂಗ ನನಗೇಕೆ ಬೇಕು' ಎಂಬ ವಾಕ್ಯವನ್ನು ಹೇಳುತ್ತಿದ್ದ. ಅಲ್ಲದೆ, ದೇವರೂ ಸಹ ತನ್ನ ಸೃಷ್ಟಿಯ ಭಾಗವಾದ ಹೆಣ್ಣನ್ನು ನೋಡಿ ಅಸಹ್ಯಪಟ್ಟ ಎನ್ನುತ್ತಿದ್ದ. ಆತನಿಗೆ ಹೆಣ್ಣು ಎಂದರೆ ಹನ್ನೆರಡರಷ್ಟು ಕೊಳಕು ಮಗು. ಕವಿಯೂ ಅದೇ ರೀತಿ ಹೆಣ್ಣನ್ನು ತೆಗಳಿದ್ದಾನೆ. ಆಕೆಯೇ ಪ್ರಥಮ ಮಾನವನನ್ನು ತಪ್ಪೆಸಗುವಂತೆ ಪ್ರೇರೇಪಿಸಿದವಳು. ಇದು ಬೈಬಲ್ ಆಧಾರಿತ ತಿಳಿವಳಿಕೆ. ಈಗಲೂ ಮಾನವನನ್ನು ಪಾತಾಳಕ್ಕೆ ಎಳೆಯುವವಳು ಅವಳೇ, ದುರ್ಬಲ ಮನಸ್ಸಿನವಳು, ಅಪಾಯಕಾರಿ. ಯಾರಿಗೂ ಅರಿವಾಗದ ರೀತಿ ತೊಂದರೆಗೆ ಸಿಲುಕಿಸುವವಳು. ಹೆಣ್ಣಿನ ವಿಷಪೂರಿತ ಸೌಂದರ್ಯಕ್ಕಿಂತ ಹೆಚ್ಚಾಗಿ ಅವಳ ಆತ್ಮವನ್ನು ದ್ವೇಷಿಸುತ್ತಿದ್ದ. ಹೆಣ್ಣಿನ ಆಕರ್ಷಕ ಮೃದುತ್ವದಿಂದ ಮಾನವ ಅಪಾಯಕ್ಕೆ ಈಡಾಗುವ ಸಂದರ್ಭದಲ್ಲಿ ಸಿಕ್ಕಿಹಾಕಿಕೊಂಡಿದ್ದೂ ಉಂಟು. ಆದರೆ ತಾನು ಅಂತಹುದನ್ನು ಧೈರ್ಯವಾಗಿ ಎದುರಿಸಲು ಸಮರ್ಥನಾಗಿದ್ದೇನೆ ಎಂದುಕೊಂಡ. ತಲ್ಲಣಿಸುವಂತೆ ಮಾಡುವ ಪ್ರೀತಿ, ಪ್ರೇಮದ ಬಗ್ಗೆ ಅಸಹನೀಯ ದೃಷ್ಟಿಯನ್ನು ಬೆಳೆಸಿಕೊಂಡ.

ಆ ಪಾದ್ರಿಯ ದೃಷ್ಟಿಯಲ್ಲಿ ದೇವರು ಹೆಣ್ಣನ್ನು ಸೃಷ್ಟಿಸಿರುವುದು ಮನುಷ್ಯನನ್ನು ಪರೀಕ್ಷಿಸಲು ಮತ್ತು ಅವನನ್ನು ಮರುಳುಮಾಡುವುದಕ್ಕೆ; ಆದ್ದರಿಂದ ಮಾನವ ಅವಳನ್ನು ಎದುರಿಸಲು ತಕ್ಕ ರಕ್ಷಣೆಗಳನ್ನು ಇಟ್ಟುಕೊಂಡೇ ಸಮೀಪಿಸಬೇಕು ಎಂದು ದೃಢವಾಗಿ ನಂಬಿದ್ದ. ಹೆಣ್ಣು ಗಂಡಿಗೆ ಯಾವಾಗಲೂ ಒಂದು ಆಪತ್ತು ಇದ್ದಂತೆ, ತನ್ನ ಎರಡು ಕೈಗಳನ್ನು ಎತ್ತಿ ತುಟಿಗಳನ್ನು ಮುತ್ತಿಡಲು ಆಹ್ವಾನಿಸುವಂತೆ ಇರುವಳು ಎಂಬ ಭಾವನೆಯನ್ನು ಹೊಂದಿದ್ದ.

ಆದರೆ ಸನ್ಯಾಸಿನಿಗಳನ್ನು ಕಂಡರೆ ಅವರ ಬಗ್ಗೆ ಆ ಭಾವನೆ ಇರಲಿಲ್ಲ. ಏಕೆಂದರೆ ಅವರು ಸೇವೆಯ ದೀಕ್ಷೆಯನ್ನು ತೆಗೆದುಕೊಂಡಿರುವುದರಿಂದ ಅಪಾಯವಿಲ್ಲವೆಂದು ಭಾವಿಸಿದ್ದ. ಆದರೂ ಅವರನ್ನು ಕ್ರೂರವಾಗಿಯೇ ನಡೆಸಿಕೊಳ್ಳುತ್ತಿದ್ದ. ದೀಕ್ಷಾಬದ್ಧರಾಗಿದ್ದು ತಮ್ಮ ಕಟ್ಟುನಿಟ್ಟು ಜೀವನಕ್ರಮದಲ್ಲಿ ಜೀವನ ನಡೆಸುತ್ತಿದ್ದರೂ ಅವರ ಅಂತರಾತ್ಮದಲ್ಲಿ ತಮ್ಮ ಕೋಮಲತೆಯನ್ನು ಉಳಿಸಿಕೊಂಡು ತನ್ನ ಬಗ್ಗೆ ತಾನು ಪಾದ್ರಿಯಾಗಿದ್ದರೂ ಮಧುರ ಭಾವನೆಯನ್ನು ತೋರುವುದು ತನ್ನ ಗಮನಕ್ಕೆ ಬರದೇ ಇರಲಿಲ್ಲ.

ಈ ಪಾದ್ರಿಗೆ ತನ್ನ ತಂಗಿಯ ಮಗಳಿದ್ದಳು. ತಾಯಿಯೊಂದಿಗೆ ಹತ್ತಿರದ ಒಂದು ಚಿಕ್ಕ ಮನೆಯಲ್ಲಿ ವಾಸಿಸುತ್ತಿದ್ದಳು. ಅವಳನ್ನು ಹೇಗಾದರೂ ಮಾಡಿ "ಸಿಸ್ಟರ್ ಆಫ್ ಚಾರಿಟಿ" ಯನ್ನಾಗಿ ಮಾಡಬೇಕೆಂದು ನಿರ್ಧರಿಸಿದ್ದ. ಅವಳು ನೋಡಲು ಅಂದವಾಗಿದ್ದು, ತುಂಬ ಚಟುವಟಿಕೆಯಿಂದ ತನ್ನ ಮಾವನನ್ನು ಆಗಿಂದಾಗ್ಗೆ ಕೀಟಲೆ ಮಾಡುವಷ್ಟು ಆಪ್ತಳಾಗಿದ್ದಳು. ಪಾದ್ರಿ ತನ್ನ ಬೋಧನೆಯನ್ನು ನೀಡುವಾಗ ಹುಡುಗಿ ನಗುತ್ತಿದ್ದಳು. ಈತ ಕೋಪಗೊಂಡರೆ ಅವಳು ಮಾವನನ್ನು ತನ್ನ ಕೋಮಲ ತೋಳುಗಳಿಂದ ಬಂಧಿಸಿ ಮುತ್ತಿಡುತ್ತಿದ್ದಳು. ಆದರೆ ಕೋಪಿಷ್ಟ ಪಾದ್ರಿ ಅವಳ ಬಿಗಿಹಿಡಿತದಿಂದ ಬಿಡಿಸಿಕೊಳ್ಳಲು ಹೆಣಗಾಡುತ್ತಿದ್ದ. ಆದರೆ ಈ ಅನುಭವ ತನಗೆ ಅರಿವಿಲ್ಲದೆ ಸುಮಧುರ ಭಾವನೆಯನ್ನು ಕೊಡುವಂತಹದಾಗಿತ್ತು. ಒಂದು ರೀತಿಯ ಆನಂದವನ್ನು ಅನುಭವಿಸುತ್ತಿದ್ದ. ಇದರೊಂದಿಗೆ ತನಗೆ ಅರಿವಿಲ್ಲದೆ ತಂದೆಯಾಗುವ ಅವ್ಯಕ್ತ ಭಾವನೆಯನ್ನು ಹೊಡೆದೆಬ್ಬಿಸುವಂತೆ ಆಗುತ್ತಿತ್ತು. ಇದು ಮನುಷ್ಯನಿಗೆ ಸ್ವಾಭಾವಿಕ ಅಲ್ಲವೆ ?

ಈತ ಹಲವು ಬಾರಿ ಅವಳೊಂದಿಗೆ ದೇವರ ಕುರಿತು ಚರ್ಚಿಸುತ್ತಿದ್ದ. ಇದು ತಾನು ಪಕ್ಕದ

ಜಮೀನಿನಲ್ಲಿ ಅವಳೊಂದಿಗೆ ಓಡಾಡುವಾಗ ನಡೆಯುತ್ತಿತ್ತು. ಅವಳು ಈತನ ಮಾತನ್ನು ಗಮನಿಸುತ್ತಿರಲಿಲ್ಲ. ಅವಳ ಗಮನವೆಲ್ಲ ಸುಂದರವಾದ ಪುಷ್ಪಗಳು, ಹಸಿರು ಹುಲ್ಲು, ಎಲೆ, ಆಕಾಶ, ಮೋಡಗಳ ಮೇಲಿರುತ್ತಿದ್ದು, ಅದರಿಂದ ಆನಂದಪಡುವುದನ್ನು ಅವಳ ಕಣ್ಣುಗಳು ಸೂಚಿಸುತ್ತಿದ್ದವು. ಅಂತೆಯೇ ಇವಳು ಹಾರುವ ಚಿಟ್ಟೆಗಳನ್ನು ಹಿಡಿದು "ಮಾವ, ನೋಡು ಈ ಚಿಟ್ಟೆ ಎಷ್ಟು ಸುಂದರವಾಗಿದೆ !" ಎಂದು ಆತನ ಗಮನವನ್ನು ಆ ಹಾರುವ ಚಿಟ್ಟೆ ಕಡೆ ಸೆಳೆಯುತ್ತಿದ್ದಳು ಮತ್ತು ಅದಕ್ಕೆ ಮುತ್ತಿಡಲು ಹೋಗುತ್ತಿದ್ದಳು.

ಹಾರುವ ಚಿಟ್ಟೆಗಳನ್ನು, ಸುಂದರ ಹೂಗಳನ್ನು ಮುತ್ತಿಡುವುದು ಪಾದ್ರಿ ಮಾವನನ್ನು ಸಿಟ್ಟಿಗೆಬ್ಬಿಸುತ್ತಿತ್ತು. ಅದರಲ್ಲಿ ಈ ಪಾದ್ರಿಗೆ ಹೆಂಗಸರಲ್ಲಿ ಕಾಣುವ ಸ್ವಾಭಾವಿಕ ಮೃದುತ್ವವನ್ನು ಗುರುತಿಸಿದ. ಈ ಕೋಮಲತೆ ಸ್ತ್ರೀ ಸಹಜವಾದ ಭಾವನೆ ಎನ್ನುವುದು ಸತ್ಯ ತಾನೆ ! ಅವರ ಹೃದಯಗಳಲ್ಲಿ ಎಂದಿಗೂ ದೂರೀಕರಿಸಲಾಗದ ಕೋಮಲತೆ, ಮೃದುತ್ವ ಶಾಶ್ವತ ನೆಲೆಹೊಂದಿ ಸದಾಕಾಲ ಹೊರಹೊಮ್ಮುವುದನ್ನು ಕಾಣಬಹುದಲ್ಲವೆ !

ಒಂದು ದಿನ ಕ್ರೈಸ್ತ ಅನುಯಾಯಿಗಳಲ್ಲಿ ಧಾರ್ಮಿಕ ವಿಧಿಗಳನ್ನು ಮಾಡಿಸುವ ಅಧಿಕಾರಿಯ ಪತ್ನಿ ಈ ಪಾದ್ರಿಯ ಮನೆಯನ್ನು ನೋಡಿಕೊಳ್ಳುತ್ತಿದ್ದ, ಈತನ ಸೊಸೆಯ (ತಂಗಿಯ ಮಗಳು) ಬಗ್ಗೆ ಒಂದು ಆಘಾತಕಾರಿ ಸುದ್ದಿಯನ್ನು ಹೇಳಿದಳು, ಆ ಹುಡುಗಿಗೆ ಒಬ್ಬ ಪ್ರೇಮಿ ಇದ್ದಾನೆ ಎಂದು. ಪಾದ್ರಿಗೆ ಆಘಾತವಾಯಿತು. ಉಸಿರುಕಟ್ಟಿದಂತಾಗಿ ಎದ್ದುನಿಂತ. ಮುಖದ ಮೇಲೆ ಸೋಪಿನ ನೊರೆ ಹರಡಿತ್ತು. ಕ್ಷೌರ ಮಾಡಿಕೊಳ್ಳುತ್ತಿದ್ದುದು ಹಾಗೆ ನಿಂತಿತು. ಮನೆ ಸೇವಕಿ, ಮೆಲನಿಯನ್ನು ಕುರಿತು ಹೇಳಿದ, "ನೀನು ಹೇಳುತ್ತಿರುವುದು ಸುಳ್ಳು, ಅಪ್ಪಟ ಸುಳ್ಳು, ನಂಬಲಾರದ ಸುಳ್ಳು." ಆಕೆ ಎದೆಯ ಮೇಲೆ ಕೈಯಿಟ್ಟು ಉತ್ತರಿಸಿದಳು : "ಮಾನ್ಯ ಪಾದ್ರಿಯವರೆ, ದೇವರು ನನ್ನನ್ನು ಶಿಕ್ಷಿಸಲಿ ನಾನೇನಾದರೂ ಸುಳ್ಳು ಹೇಳಿದರೆ. ಹುಡುಗಿ ಪ್ರತಿ ರಾತ್ರಿ ನಿಮ್ಮ ಸೋದರಿ ಮಲಗಿದ ನಂತರ ತನ್ನ ಪ್ರೇಮಿಯನ್ನು ಭೇಟಿ ಮಾಡಲು ತೆರಳುತ್ತಾಳೆ. ಅವರಿಬ್ಬರೂ ನದಿಯ ದಡದಲ್ಲಿ ಸಂಧಿಸುತ್ತಾರೆ. ಬೇಕಾದರೆ ನೀವು ರಾತ್ರಿ ೧೧ರಿಂದ ೧೨ರ ಹೊತ್ತಿಗೆ ಅಲ್ಲಿಗೆ ಹೋಗಿ ಪರೀಕ್ಷಿಸಬಹುದು." ಪಾದ್ರಿ ಗಡ್ಡ ಕೆರೆಯುವುದನ್ನು ನಿಲ್ಲಿಸಿ ತಾನು ಗಹನವಾದ ವಿಷಯಕ್ಕೆ ತುತ್ತಾದಾಗ ಮಾಡುತ್ತಿದ್ದಂತೆ ಕೊಠಡಿಯಲ್ಲಿ ಅತ್ತಿಂದಿತ್ತ ವೇಗವಾಗಿ ಸುತ್ತಾಡತೊಡಗಿದ. ಮತ್ತೆ ಕ್ಷೌರ ಮಾಡಿಕೊಳ್ಳುವುದನ್ನು ಆರಂಭಿಸಿ ಮೂಗಿನಿಂದ ಕಿವಿಯವರೆಗೆ ಮೂರು ಕಡೆ ಗಾಯ ಮಾಡಿಕೊಂಡ.

ಆ ದಿನ ಪೂರ್ತಿ ಸಂಪೂರ್ಣ ಮೌನಿಯಾದ. ಸಿಟ್ಟು ತಡೆಯಲಾಗದೆ ಕೋಪದಿಂದ ಮುಖ ಗಂಟುಕಟ್ಟಿತ್ತು. ಪ್ರೇಮ – ಪ್ರೀತಿಯ ಶಕ್ತಿಯ ವಿರುದ್ಧ ಪಾದ್ರಿಯ ವಿರೋಧದ ಜೊತೆಗೆ ಎಲ್ಲ ಕ್ರೈಸ್ತ ಜನಾಂಗದ ಆಧ್ಯಾತ್ಮಿಕ ತಂದೆಯಾಗಿ, ಗುರುವಾಗಿ, ಆತ್ಮಸಂರಕ್ಷಕನಾಗಿ ಒಂದು ಮಗುವಿನಿಂದ ಸೋಲುಣಬೇಕಾಯಿತಲ್ಲಾ ಎಂದು ಆತ್ಮಾಭಿಮಾನ ಕೆರಳಿತು. ತಂದೆ ತಾಯಿಗಳಿಗೆ ತಾವು ಬೇಡವೆಂದು ಬುದ್ಧಿವಾದ ಹೇಳಿದರೂ ಮಗಳು ತಾನು ಮದುವೆಯಾಗಲು ನಿರ್ಧರಿಸಿದ್ದೇನೆ ಎಂದರೆ ಎಷ್ಟು ಕೋಪ ಬರುವುದೋ ಅದಕ್ಕಿಂತ ಹೆಚ್ಚಿನ ಕೋಪ, ನೋವನ್ನು ಅನುಭವಿಸಿದ ಈ ಪಾದ್ರಿ.

ರಾತ್ರಿ ಊಟದ ನಂತರ ಓದಲು ಪ್ರಯತ್ನಿಸಿದ. ಆದರೆ ಮನಸ್ಸು ಸಿಡಿಮಿಡಿ ಗೊಂಡಿತ್ತು. ಮೇಲಿಂದ ಮೇಲೆ ಕೋಪ ಉಕ್ಕುತ್ತಿತ್ತು. ರಾತ್ರಿ ಹತ್ತು ಘಂಟೆ. ದಿಢೀರನೆ ಎದ್ದು ಓಕ್ ಮರದ ದೊಣ್ಣೆಯನ್ನು ಕೈಗೆತ್ತಿಕೊಂಡು ಅದನ್ನು ಗಾಳಿಯಲ್ಲಿ ತಿರುಗಿಸುತ್ತಾ ಇದ್ದಕ್ಕಿದ್ದಂತೆ ಆ ದೊಣ್ಣೆಯನ್ನು ಎತ್ತಿ, ಹಲ್ಲು ಕಚ್ಚುತ್ತ ಹತ್ತಿರದ ಕುರ್ಚಿಯನ್ನು ಬಡಿದ. ಕುರ್ಚಿ ಇಬ್ಭಾಗವಾಗಿ ನೆಲದ ಮೇಲೆ ಬಿತ್ತು. ಹೊರಹೋಗಲು ಬಾಗಿಲು ತೆರೆದ. ಹೆಬ್ಬಾಗಿಲ ಬಳಿ ನಿಂತು ಬೆಳದಿಂಗಳನ್ನು ಆಶ್ಚರ್ಯಭರಿತ ಕಣ್ಣುಗಳಿಂದ ನೋಡಿದ. ಅದರ ಸೌಂದರ್ಯಕ್ಕೆ ಚರ್ಚ್ ಸಂಸ್ಥೆಯನ್ನು ಕಟ್ಟಿ ಬೆಳೆಸಿದ ಸನ್ಯಾಸಿ ಆದರ್ಶವಾದಿಗಳು ಹೇಗೆ ವಿಸ್ಮಯಭರಿತ ಬೆಡಗಿನಿಂದ ನೋಡಿದ್ದರೋ ಅದೇ ಭಾವನೆ ಈ ಪಾದ್ರಿಯಲ್ಲಿ ಉದಯವಾಗಿ ಪ್ರಸನ್ನತೆ ಮನೆ ಮಾಡಿತು. ಆದರ್ಶವಾದಿ ಪಾದ್ರಿಯಾಗಿದ್ದರಿಂದ ಈ ಪ್ರಸನ್ನತೆಗೆ ಎಡೆಯಾಗಲು ಸಾಧ್ಯವಾಯಿತು.

ಮನೆಯ ಸುತ್ತಲೂ ಇದ್ದ ತೋಟದಲ್ಲಿ ತಣ್ಣನೆಯ ಪ್ರಶಾಂತ ಬೆಳದಿಂಗಳು ಎಲ್ಲವನ್ನೂ ಆವರಿಸಿಕೊಂಡು ಬೆರಗುಗೊಳ್ಳುವಂತೆ ಮಾಡಿತ್ತು. ಹಣ್ಣಿನ ಮರಗಳು ಸುಮಧುರ ಬೆಳದಿಂಗಳಲ್ಲಿ ತಮ್ಮ ಆಕಾರವನ್ನು ಹಸಿರಿಲ್ಲದ ನೆಲದ ಮೇಲೆ ಬೀಳಿಸಿದ್ದವು. ಎತ್ತರಕ್ಕೆ ಬೆಳೆಯುವ ಹನಿಮೂನ್ ಬಳ್ಳಿ ಮನೆಯ ಮೇಲೆ ಬೆಳೆದು ನಿಂತಿತ್ತು, ಅದರ ಹೂಗಳು ಅರಳಿ ಸುಗಂಧವನ್ನು ಸುತ್ತಲೂ ಪಸರಿಸಿದ್ದವು. ಪಾದ್ರಿ ದೀರ್ಘವಾಗಿ ಉಸಿರಾಡಿದ. ಈ ಪರಿಮಳಭರಿತ ಗಾಳಿಯನ್ನು ಶ್ವಾಸದಲ್ಲಿ ತುಂಬಿ ಬಿಡುವುದು ಒಬ್ಬ ರಸಿಕ ಕುಡುಕ ಮತ್ತೇರಿಸುವ ಪಾನೀಯವನ್ನು ಸೇವಿಸಿದ ನಂತರ ಆನಂದಿಸಿದಂತೆ ಆನಂದಭರಿತನಾದ. ಈ ಆನಂದದ ಅತಿರೇಕದಲ್ಲಿ ತನ್ನ ತಂಗಿಯ ಮಗಳ ವಿಷಯ ಮರೆತೇಹೋಗಿತ್ತು.

ಪಾದ್ರಿ ವಿಶಾಲ ನೆಲದ ಮೇಲೆ ಹೆಜ್ಜೆ ಹಾಕಿದ. ಒಮ್ಮೆ ನಿಂತು ತನಗಾದ ನೋವಿನ ಬಗ್ಗೆ ಯೋಚಿಸತೊಡಗಿದ. ಆ ನೋವು ಸುತ್ತಲೂ ಹರಡಿದ್ದ ಶಾಂತವಾದ ಮುತ್ತಿಡುವ ಕಂಪಿನಿಂದ ತುಂಬಿದ ಬೆಳದಿಂಗಳ ಮಧುರ ಭಾವವನ್ನು ಉಕ್ಕಿಸುವ ವಾತಾವರಣಕ್ಕೆ ಹಿಮ್ಮೇಳವಾಗಿ ಅಲ್ಲಲ್ಲಿ ಕಪ್ಪೆಗಳ ಕರ್ಕಶ ಶಬ್ದಗಳ ಜೊತೆಯಲ್ಲಿ ದೂರದಿಂದ ಬರುತ್ತಿದ್ದ ನೈಟಿಂಗೇಲ್ ಹಕ್ಕಿಗಳ ಸುಮಧುರ ಸಂಗೀತವೂ ಸೇರಿ ಯೋಚನೆಗಳಿಗೆ ತಡೆಹಾಕಿ ಕನಸಿನ ಲೋಕಕ್ಕೆ ಕರೆದೊಯ್ಯುತ್ತಿತ್ತು ಹಾಗೂ ಆಹ್ಲಾದಕರ ಮತ್ತು ಅನುಭವಿಸುವ ಭಾವವನ್ನು ಕೆರಳಿಸುತ್ತಿತ್ತು.

ಪಾದ್ರಿಯು ತನ್ನ ಓಡಾಟವನ್ನು ಮುಂದುವರಿಸಿದ. ತನ್ನ ಧೈರ್ಯ ತನಗರಿವಿಲ್ಲದೆ ಕುಂದಿತ್ತು. ಏಕೋ ನಿಶ್ಶಕ್ತಿ ಕಾಣಿಸಿತು. ಸುಸ್ತಾಯಿತು. ಕುಳಿತುಕೊಳ್ಳಲು ಆಸೆ ಆಯಿತು. ಹಾಗೆಯೇ ಅಲ್ಲೇ ದೈವ ಸೃಷ್ಟಿಯ ಎಲ್ಲವನ್ನೂ ಮನಸಾರೆ ಹೊಗಳಿ ದೇವರನ್ನು ಪೂಜಿಸಬೇಕೆನಿಸಿತು. ಸ್ವಲ್ಪ ಕೆಳಗೆ ಪುಟ್ಟ ನದಿಯ ದಂಡೆಯ ಮೇಲೆ ಪಾಪ್ಲರ್ ಮರಗಳು ನಿಂತಿದ್ದವು. ಮರಗಳ ರೆಂಬೆಗಳ ಮೇಲೆ ಮಂಜು ತುಂಬಿತ್ತು. ಬಿಳಿ ಹನಿಗಳು ಥಳಥಳಿಸುತ್ತಿದ್ದವು. ಚಂದ್ರನ ಬೆಳಕು ಅವುಗಳ ಮೇಲೆ ಬಿದ್ದು ಮಿನುಗುತ್ತಿದ್ದವು. ಪಾದ್ರಿ ನಿಧಾನಿಸಿದ. ಅವನ ಆತ್ಮದಲ್ಲಿ ಬಲವಾದ ಒಂದು ಭಾವನೆ ರೂಪುಗೊಳ್ಳುತ್ತಿತ್ತು. ಒಂದು ರೀತಿಯ ಅನುಮಾನ, ಅಸಮಾಧಾನ ಅವನನ್ನು ಆವರಿಸಿತು. ಆತನಲ್ಲಿ ಆಗಿಂದಾಗ್ಗೆ ಕಾಣಿಸಿಕೊಳ್ಳುತ್ತಿದ್ದ ಪ್ರಶ್ನೆ ಮತ್ತೆ ಉದ್ಭವಿಸಿತು.

ದೇವರು ಇದನ್ನು ಏಕೆ ಮಾಡಿದ ? ರಾತ್ರಿ ವಿಶ್ರಾಂತಿಗೆ ಎಂದರೆ, ಏಕೆ ರಾತ್ರಿ ಹಗಲಿಗಿಂತ ಹೆಚ್ಚು ಆಹ್ಲಾದಕರವಾಗಿರಬೇಕು ? ಬೆಳಗಿನ ಮತ್ತು ಸೂರ್ಯಾಸ್ತಮಯ ಕ್ಕಿಂತ ಮಿಗಿಲಾದ ಆನಂದವನ್ನು ತರಬೇಕು ? ಮರುಳುಗೊಳಿಸುವ ಚಂದ್ರನ ಬೆಳಕು ಸೂರ್ಯನ ಕಾಂತಿಗಿಂತ ಹೆಚ್ಚು ಕಾವ್ಯಮಯವಾಗಿ, ಎಲ್ಲವನ್ನೂ ಕೋಮಲವಾದ, ಅರ್ಥಗರ್ಭಿತವಾದ ತನ್ನ ಕಿರಣಗಳಲ್ಲಿ ಮೀಯುವಂತೆ ಮಾಡಬೇಕು ? ರಾತ್ರಿ ವೇಳೆ ಮಾನವನ ಹೃದಯವೇಕೆ ಭಾವನಾಪರವಶವಾಗಿ ತಲ್ಲಣಿಸಬೇಕು ? ಈ ಅತ್ಯದ್ಭುತ ದೃಶ್ಯ ಕಾವ್ಯಮಯವಾದ ಬೆಳದಿಂಗಳು ಮೇಲಿಂದ ಧರೆಯ ಮೇಲೆ ಬೀಳಬೇಕು ? ಪಾದ್ರಿಯ ಬುದ್ಧಿಗೆ ನಿಲುಕಲಾರದ ಒಗಟಾಯಿತು.

ಆ ವೇಳೆಗೆ ಸರಿಯಾಗಿ ನದಿಯ ದಂಡೆಯ ಮೇಲೆ ಮರಗಳ ನೆರಳಲ್ಲಿ ಎರಡು ಮಾನವ ಆಕೃತಿಗಳ ನೆರಳು ಅಸ್ಪಷ್ಟವಾಗಿ ಪಾದ್ರಿಯ ಕಣ್ಣಿಗೆ ಬಿತ್ತು. ಗಂಡಸಿನ ನೆರಳು ಎತ್ತರವಾಗಿದ್ದು ಆತನ ಕೈಗಳು ಪಕ್ಕದಲ್ಲಿದ್ದ ತನ್ನ ಪ್ರೇಯಸಿಯ ಕತ್ತನ್ನು ಬಳಸಿದ್ದವು. ಆ ವ್ಯಕ್ತಿ ತನ್ನ ಪ್ರೇಯಸಿಯನ್ನು ಮುತ್ತಿಡುತ್ತಿದ್ದ. ಆ ನಿರ್ಜೀವ ರಾತ್ರಿಗೆ ಇಬ್ಬರೂ ಜೀವಕಳೆ ತುಂಬಿದಂತೆ ಭಾಸವಾಯ್ತು. ಆ ಪರಿಸರ ಪ್ರೇಮಿಗಳಿಗಾಗಿ ಮಾಡಿದಂತೆ ಕಂಡಿತು. ಇಬ್ಬರೂ ಸೇರಿ ಒಬ್ಬರಾದಂತೆ ಕಂಡಿತು. ಅವರಿಗಾಗಿಯೇ ಆ ಪ್ರಶಾಂತ ಪ್ರೇಮಮಯ ತಿಂಗಳ ರಾತ್ರಿಯಾಗಿ ಕಂಡಿತು. ಇಬ್ಬರೂ ಪಾದ್ರಿಯ ಬಳಿ ಬಂದಿದ್ದು ಪಾದ್ರಿಯು ಅರ್ಥ ಮಾಡಿಕೊಳ್ಳಲಾರದ ಪ್ರಶ್ನೆಗೆ ಜೀವಂತ ಉತ್ತರವಾಗಿತ್ತು.

ಪಾದ್ರಿ ಮಾತಿಲ್ಲದೆ ಮೌನವಾಗಿ ನಿಂತು ತನ್ನ ಹೃದಯದ ಬಡಿತವನ್ನು ಕಡಿಮೆ ಗೊಳಿಸಲು ಯತ್ನಿಸಿದ. ಬೈಬಲ್ಲಿನಲ್ಲಿ ನಮೂದಿಸಿದ ಅಮರ ಪ್ರೇಮಿಗಳ ಕಥೆಗಳು ತನ್ನ ದೃಷ್ಟಿ ಪಟಲದಲ್ಲಿ ಸುಳಿದಾಡಿದವು. ಅವನ ಬುದ್ಧಿಗೆ ಗೋಚರವಾಗಿದ್ದು ಅಮರ ಪ್ರೇಮಿಗಳ ಕತೆಗಳು. ಮಾನವನ ಜೀವನದಲ್ಲಿ ಶರೀರದ ಹೆಬ್ಬಯಕೆಯನ್ನು ತಣಿಸುವ ಎಲ್ಲ ಮಾನವ ಕೋಟಿಯು ಮಾನ್ಯಮಾಡಿರುವ ಪ್ರೇಮಮಯ ಜೀವನದ ಆದರ್ಶ. ಪಾದ್ರಿ ಹೇಳಿಕೊಂಡ ಇಂತಹ ಪ್ರೇಮಮಯ ರಾತ್ರಿಗಳು ಸೃಷ್ಟಿಯಲ್ಲಿರುವುದು ಅದಕ್ಕಾಗಿಯೇ ಎಂದು.

ಆತ ಈ ಇಬ್ಬರು ಪ್ರೇಮಿಗಳನ್ನು ಬಿಟ್ಟು ಹೊರಟುಹೋದ. ಪ್ರೇಮಿಗಳು ಒಬ್ಬರನೊಬ್ಬರು ಬಳಸಿಕೊಂಡು ನಿರ್ಗಮಿಸಿದರು. ಪಾದ್ರಿಗೆ ದೇವರು ಪ್ರೇಮಮಯ ಜೀವನಕ್ಕೆ ಒಪ್ಪಿಗೆ ಇತ್ತಿದ್ದಾನೆ ಎನ್ನುವ ಸತ್ಯ ಅರ್ಥವಾಗಿತ್ತು. ಪಾದ್ರಿಗೆ ನಾಚಿಕೆ ಆಗಿತ್ತು. ತನಗೆ ಅರಿವಿಲ್ಲದೆಯೇ ಪ್ರೇಮಿಗಳ ದೇವಸ್ಥಾನಕ್ಕೆ ಕಾಲಿಡಲು ಪ್ರಯತ್ನಿಸಿದ್ದು ತಪ್ಪು ಎನ್ನುವುದು ಅರಿವಾಗಿ ನಾಚಿ ಕಾಲ್ಕಿತ್ತಿದ್ದ.

---

ಮೂಲ : **ಮಾಪಸ**

ಕನ್ನಡಕ್ಕೆ : **ಬಿ. ಕೆ. ಹನುಮಂತಯ್ಯ**
ನಂ. ೯೦, ೧೭ನೇ ಮುಖ್ಯರಸ್ತೆ, ಬನಶಂಕರಿ ೧ನೇ ಹಂತ, ಬೆಂಗಳೂರು – ೫೬೦ ೦೫೦

# ತೊಟ್ಟಿಲಿನಿಂದ ಚಟ್ಟದವರೆಗೆ

ರೇಣುಕಾಗಿರಿ ಬಾರಿಕಾಯಿ

ಪ್ಲಾಸ್ಟಿಕ್ ಬಳಕೆ ಅಧಿಕವಾದಂತೆಲ್ಲ, ಜಗತ್ತು ಆಧುನೀಕರಣಗೊಳ್ಳುತ್ತಿದ್ದಂತೆ ಮೇಧಾರ ಬುಡಕಟ್ಟಿನ ಬುಡಕ್ಕೆ ಕೊಡಲಿ ಪೆಟ್ಟು ಕೊಟ್ಟಂತಾಗಿದೆ. ಎಲೆಕ್ಟ್ರಾನಿಕ್ ವಸ್ತುಗಳ ಬಳಕೆ ಅಧಿಕವಾದಂತೆಲ್ಲ ಬಡವ, ಕಡುಬಡವರ ಮನೆಗಳಲ್ಲೂ ಫ್ಯಾನ್‌ಗಳು ಬಳಕೆಯಾಗುತ್ತಿವೆ. ಆ ಕಾರಣಕ್ಕೆ ಇವರು ಹೆಣೆಯುತ್ತಿದ್ದ ಬೀಸಣಿಕೆ ಈಗ ಕಣ್ಮರೆಯಾಗಿದೆ. ರೊಟ್ಟಿ-ಚಪಾತಿ ಇರಿಸಲು ಬಳಸುತ್ತಿದ್ದ ಬುಟ್ಟಿಗಳ ಜಾಗವನ್ನು ಹಾಟ್‌ಬಾಕ್ಸ್ ಆಕ್ರಮಿಸಿಕೊಂಡಿದೆ. ವಿಭೂತಿ, ಗಂಧ, ಇರಿಸುತ್ತಿದ್ದ ಚಿಕ್ಕ-ಚಿಕ್ಕ ಕಲಾತ್ಮಕ ಬುಟ್ಟಿಗಳ ಬದಲು ಪ್ಲಾಸ್ಟಿಕ್‌ನ ಬಣ್ಣದ ಡಬ್ಬಿಗಳು ಬಂದಿವೆ.

ನಿಸರ್ಗದ ಮಡಿಲಲ್ಲಿ ಹೇರಳವಾಗಿ ದೊರೆಯುವ ಕಲ್ಲು, ಮಣ್ಣು, ಮರ, ಮರದ ಎಲೆ, ಬೇರು, ತೊಗಟೆ, ಹೂಗಳನ್ನು ಬಳಸಿಕೊಂಡು, ಅವುಗಳಲ್ಲಿಯೇ ಕಲೆಯನ್ನು ಅರಳಿಸಿ ಮಾರಾಟ ಮಾಡುವುದು, ತಮ್ಮ ನಿತ್ಯದ ಬಳಕೆಗೆ ಅಳವಡಿಸಿಕೊಂಡು ಬದುಕುವ ಯಾರಿಗೂ, ಯಾವುದಕ್ಕೂ ಧಕ್ಕೆ ಬಾರದಂತೆ ಸರಳ ಸುಲಭ ಜೀವನ ಸಾಗಿಸುವ ಬುಡಕಟ್ಟು ಜನಾಂಗಗಳಲ್ಲಿ ಮೇಧಾರ ಜನಾಂಗವೂ ಒಂದು.

ಮೇಧಾರ ಗುಲ್ಬರ್ಗಾ, ಧಾರವಾಡ, ಕೊಪ್ಪಳ, ಬಳ್ಳಾರಿ, ಹಾವೇರಿ, ಕೋಲಾರ, ದಕ್ಷಿಣ ಕನ್ನಡ, ಶಿವಮೊಗ್ಗ ಮುಂತಾದ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡುಬರುವ ಜನಾಂಗ.

ಇಂದು ಪ್ರಪಂಚದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ದೇಶ ಡಿಜಿಟಲೀಕರಣಗೊಳ್ಳುತ್ತಿದೆ. ಆದರೆ ಇಂಥ ಯುಗದಲ್ಲಿಯೂ ತಮ್ಮ ತುತ್ತಿನ ಚೀಲವೊಂದು ತುಂಬಿದರೆ ಸಾಕು ಎಂಬ ಯಥಾರ್ಥ ಭಾವನೆಯಿಂದ, ತಮ್ಮ ಜನಾಂಗದ ಆಚಾರ-ವಿಚಾರ, ನಡತೆ, ಸಂಪ್ರದಾಯ ಮತ್ತು ಮೂಲ ಉದ್ಯೋಗವನ್ನು ಬಿಟ್ಟುಕೊಡದೆ, ತಮ್ಮ ಕಾಯಕವನ್ನು ಅನಾದಿಕಾಲದಿಂದಲೂ, ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಮುಂದುವರಿಸಿಕೊಂಡು, ತಮ್ಮ ಅಸ್ತಿತ್ವ ಕಾಪಾಡಿಕೊಂಡು ಬಂದಿರುವ ಜನಾಂಗ ಮೇಧಾರ ಜನಾಂಗ.

ಪುರಾತನ ಕಾಲದಿಂದಲೂ ಬಿದಿರು ಮತ್ತು ಬೆತ್ತದ ಉಪಕರಣಗಳು ಮಾನವನ ಜೀವನದಲ್ಲಿ ತೊಟ್ಟಿಲಿನಿಂದ ಹಿಡಿದು ಚಟ್ಟದವರೆಗೂ ಬಳಕೆಯಾಗುತ್ತಿವೆ.

ಬಿದಿರು ಗೆದ್ದಲು ತಿಂದು ತೂತಾಗುವ ತನ್ನ ದೇಹವನ್ನು ಕಂಡು ಮರುಗುವುದಿಲ್ಲ. ಬದಲಾಗಿ, ಅದು ಕೊಳಲಾಗಿ ಆಲಾಪದ ಮೂಲಕ ತನ್ನ ಅಳಲನ್ನು ತೋಡಿಕೊಳ್ಳುತ್ತದೆ. ಸಂಗೀತಗಾರನ ಬಿಸಿಯುಸಿರಿಗೆ ಮಧುರ ಸಂಗೀತ ನೀಡುವ ಪರಿಕರವಾಗುತ್ತದೆ. ಪರಿ ಪರಿ ರಾಗವಾಗಿ ಹೊರಹೊಮ್ಮುತ್ತದೆ. ತಾನು ಬಿದಿರೆಂಬುದನ್ನು ಮರೆತು ಕೊಳಲೆಂದು ಪರಿಚಯಿಸಿಕೊಳ್ಳುತ್ತದೆ. ಮಕ್ಕಳ ಗಾಳಿಪಟಕ್ಕೆ, ದೀಪಾವಳಿಯ ಶಿವನ ಬುಟ್ಟಿಗೆ, ಪೀಪಿಗೆ ಬೇಕು ಬಿದಿರು.

ಉತ್ತರ ಕರ್ನಾಟಕದ ಪ್ರಮುಖ ವಾಣಿಜ್ಯ ಬೆಳೆಯಾದ ಈರುಳ್ಳಿ ಬೆಳೆಯನ್ನು ಕಟಾವು ಮಾಡಿ ಮಳೆ, ಗಾಳಿ, ಬಿಸಿಲಿನಿಂದ ರಕ್ಷಣೆ ಮಾಡಲು, ಬಿದಿರಿನಿಂದ ತಯಾರಿಸಿದ ಗುಡಿಸಲೊಂದು ಬೇಕು. ಬಿಲ್ಲು-ಬತ್ತಳಿಕೆಗೆ ಬಳಸುತ್ತಿದ್ದುದು ಬಿದಿರು, ಕೋಲಾಟದ ಕೋಲಿಗೆ ಬಿದಿರೇ ಆಧಾರ. ಹಸುಗಳಿಗೆ ಕಾಯಿಲೆ ಬಂದಾಗ ಔಷಧಿ ಹಾಕಲು ಬಳಕೆಯಾಗುವುದು, ಗೊಟ್ಟದ ಕೊಳವೆಯಾಗುವುದು ಬಿದಿರು.

ಮೇಧಾರರು ಬಿದಿರನ್ನು ಬಳಸಿ ಹೆಣೆಯುವ ಚಾಪೆ ಪ್ರತಿಯೊಬ್ಬರ ಕಾರ್ಯಕ್ರಮಗಳಲ್ಲಿ, ಮನೆಗೆ ಬಂದ ಅತಿಥಿಗಳ ಉಪಚಾರಗಳಲ್ಲಿ, ಊಟಕ್ಕೆ ಕುಳಿತುಕೊಳ್ಳಲು, ಮಲಗಲು ಹಾಸಿಗೆಯಾಗಿ ಬಳಕೆಯಾಗುತ್ತದೆ. ರೊಟ್ಟಿ-ಚಪಾತಿ ಇರಿಸಲು ಬುಟ್ಟಿ, ಧಾನ್ಯಗಳನ್ನು ಸ್ವಚ್ಛಗೊಳಿಸಲು ಮೊರ, ಮಾಳಿಗೆಯ



ಮೇಲೇರಲು ನಿಚ್ಚಣಿಕೆ, ಗಾಳಿಯಿಲ್ಲದಾಗ ಬೀಸಣಿಕೆ, ಹಸುಕಂದಮ್ಮಗಳಿಗೆ ತೊಟ್ಟಿಲು, ವಯಸ್ಸಾದವರಿಗೆ, ಅಶಕ್ತರಿಗೆ, ಕುಂಟರಿಗೆ, ಕುರುಡರಿಗೆ ನಡೆದು ಸಾಗಲು ಊರುಗೋಲು ಇತ್ಯಾದಿ ತಯಾರಾಗುವುದು ಬಿದಿರಿನಿಂದಲೇ, ಕರ್ನಾಟಕದಲ್ಲಿ ಇದು ಮೇಧಾರರ ಕುಲಕಸುಬಾಗಿದೆ.

ಬಸವಣ್ಣನವರ ಕಾಲದಿಂದಲೂ ಮೇಧಾರ ಜನಾಂಗದ ಇರುವಿಕೆಗೆ ಮಾಹಿತಿಯಿದೆ. ಜಗದ್ಗುರು ಬಸವೇಶ್ವರರ ಕಾಲದಲ್ಲಿ ಒಂದೊಂದು ಜನಾಂಗವನ್ನು ಬಿಂಬಿಸುವ ಪ್ರತಿನಿಧಿಸುವ ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಮಾದಾರ ಚನ್ನಯ್ಯ, ಮೇಧಾರ ಕೇತಯ್ಯ – ಹೀಗೆ ಒಬ್ಬೊಬ್ಬರು ಒಂದೊಂದು ಜನಾಂಗವನ್ನು ಪ್ರತಿನಿಧಿಸುವ ಶರಣರ ಹೆಸರುಗಳಿವೆ.

ಪ್ರತಿಯೊಂದು ಜನಾಂಗವು ತನ್ನದೇ ಆದ ಉದ್ಯೋಗಕ್ಕೆ ಮೀಸಲಾಗಿದೆ. ಈ ವೃತ್ತಿ ಪ್ರತಿಯೊಬ್ಬರಿಗೂ ವಂಶ ಪಾರಂಪರ್ಯವಾಗಿ ಬಂದದ್ದು. ಬಿದಿರಿನಿಂದ ನಿತ್ಯೋಪಯೋಗಿ ವಸ್ತುಗಳನ್ನು ತಯಾರುಮಾಡುವುದು ಮೇಧಾರರ ಕುಲಕಸುಬು. ೧೨ನೆಯ ಶತಮಾನದಲ್ಲಿ ಕುಲವನ್ನು ಪ್ರತಿನಿಧಿಸಿದ ಮೇಧಾರ ಕೇತಯ್ಯ ಇಂದು ಈ ಜನಾಂಗದ ಕುಲದೇವತೆ. ಅದಕ್ಕಾಗಿಯೇ ಈ ಜನಾಂಗಗಳಲ್ಲಿ ಕೇತಯ್ಯ, ಕೇತಕಯ್ಯ, ಕೇತಮ್ಮ ಎಂಬ ಹೆಸರುಗಳು ಇಂದಿಗೂ ಕೇಳಿಬರುತ್ತವೆ.

ಭಿನ್ನ ಭೌಗೋಳಿಕ ವಿಂಗಡನೆ, ಭಿನ್ನ ಭಾಷೆಯಿಂದಾಗಿ ಕರ್ನಾಟಕದಲ್ಲಿ ಇವರನ್ನು ಎರಡು ಭಿನ್ನ ಕೋಮಿನವರೆಂದೇ ಗುರುತಿಸುತ್ತಾರೆ. ಇವರಲ್ಲಿ ಒಂದು ಕೋಮಿನವರು ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕೊಡಗಿನಲ್ಲಿದ್ದು, ತುಳು, ಕೊಡವ ಭಾಷೆಗಳನ್ನು ಮಾತಾಡುತ್ತಾರೆ. ಇವರನ್ನು ಕೊಡವರು ಪರಿಶಿಷ್ಟ ಜನಾಂಗದವರು ಎಂದು ಗುರುತಿಸುತ್ತಾರೆ. ಇನ್ನೊಂದು ಮೇಧ ಕೋಮಿನವರು ಉತ್ತರ ಕರ್ನಾಟಕದ ಬೆಳಗಾವಿ, ರಾಯಚೂರು, ಕೊಪ್ಪಳ, ವಿಜಯಪುರ, ಬಾಗಲಕೋಟೆ ನಗರಗಳಲ್ಲಿ ಕಂಡುಬರುತ್ತಾರೆ. ಇವರು ಕನ್ನಡ, ಕೊಡವ ಭಾಷೆ ಮಾತನಾಡುವವರಾಗಿದ್ದು, ಬರವಣಿಗೆಗೆ ಬಳಸುವ ಲಿಪಿ ಮಾತ್ರ ಕನ್ನಡವಾಗಿರುತ್ತದೆ.

ಮೂಲತಃ ಗುಂಪಾಗಿ ಕೆಲಸ ಮಾಡುವ ಈ ಜನಾಂಗದವರು ತಮ್ಮ ವೃತ್ತಿಯಲ್ಲೂ ಸಂಘಟಿತರಾಗಿ ಬದುಕುತ್ತಾರೆ. ತಾವು ವಾಸ ಮಾಡುವ ಗಲ್ಲಿಯನ್ನು ಇವರು ಮೇಧಾರರ ಬೀದಿಯೆಂದೇ ಅಂಕಿತಗೊಳಿಸಿರುತ್ತಾರೆ. ಪ್ರತಿವರ್ಷ ಹೊಸದಾಗಿ ಬಿದಿರು ಬಳಸುವ ಮುನ್ನ ಅದಕ್ಕೆ ಪೂಜೆ ಕೈಗೊಳ್ಳುತ್ತಾರೆ. ಇದನ್ನು ಹಬ್ಬದಂತೆ ಸಾಮೂಹಿಕವಾಗಿ ಆಚರಿಸುತ್ತಾರೆ.

ಮೇಧಾರರಲ್ಲಿ ಯಾವುದೇ ಸಾಮಾಜಿಕ ಶ್ರೇಣಿಗಳಿಲ್ಲ. ಇವರು ವೈವಾಹಿಕ ಸಂಬಂಧಗಳನ್ನು ಮಾತ್ರ ಸೋದರತ್ತೆ, ಸೋದರಮಾವನ ಮಕ್ಕಳೊಂದಿಗೆ ಬೆಳೆಸುತ್ತಾರೆ.

ಈ ಜನಾಂಗದವರು ಪಾಷಾಣ ಮೂರ್ತಿಯಂತಹ ಭೂತದೊಂದಿಗೆ, ಭಗವತಿ, ಶಿವ, ಕಾವೇರಿಯಾದಿ ದೇವತೆಗಳನ್ನು ಪೂಜಿಸುತ್ತಾರೆ. ಕೊಡಗುವಾಸಿಗಳಿಗೆ ಹುತ್ತರಿ ಮತ್ತು ಕೊಯ್ಲು ಮುಹೂರ್ತ ಹೊಸ ಬಿದಿರು ಬಳಕೆಗೆ ಸೂಕ್ತ ಸಮಯ.

ಬಿಳಿಗಿರಿರಂಗನ ಬೆಟ್ಟದಲ್ಲಿ ಬಿದಿರು ಹೇರಳವಾಗಿ ಲಭ್ಯವಿರುವುದರಿಂದ ಇಲ್ಲಿನ ಮೇಧಾರ ಬುಡಕಟ್ಟು ಜನಾಂಗದವರಿಗೆ ಬಿದಿರು ಹುಡುಕಿಕೊಂಡು ಕಾಡು ಅಲೆಯುವ ಕಷ್ಟವಿಲ್ಲ. ಬಿದಿರನ್ನು ವಿವಿಧ ಹಂತಗಳಲ್ಲಿ ಬಳಸಿಕೊಂಡು, ಬುಟ್ಟಿ ಕೊಕ್ಕೆ, ರೇಶ್ಮೀ ತಟ್ಟೆ ಚಂದ್ರಿಕೆ, ಮುಂತಾದವುಗಳನ್ನು ಹೇರಳವಾಗಿ ಹೆಣೆಯುತ್ತಾರೆ.

ಇನ್ನು ಕೊಳ್ಳೆಗಾಲದ ಕಡೆ ವಾಸಿಸುವ ತೋಡ ಎಂದು ಕರೆಯಿಸಿಕೊಳ್ಳುವ ಮೇಧಾರ ಜನಾಂಗದ ಮಹಿಳೆಯರು ಶಾಲುಗಳ ನೇಯ್ಗೆಯಲ್ಲಿ ನಿಸ್ಸೀಮರು. ಮಹಿಳೆಯರು, ತಾರಬುಟ್ಟಿ, ಕರಾಪ್ಲಿ, ಕಿವಿಯಂಚಿನ ಆಭರಣ ಕುರುಕು, ವಿವಿಧ ಬಗೆಯ ಮೂಗುತಿಗಳು, ಗರ್ತಿ ಕರಿಮಣಿ ಸರ, ಅಪ್ಪನ ಮನೆ ಕರಿಮಣಿ, ಗಂಡನ ಮನೆ ಕರಿಮಣಿ, ಬಣ್ಣದ ಮಣಿಸರ, ಬುಕ್ರೀವ ಮಣಿಸರ, ತೋಳಿಗೆ ತೋಳ ಬಂದಿ, ಬೀಜದ ಮಣಿಸರ, ಕಾಲ್ಮಣಿ ಸರ, ಮುಳ್ಳಹಣ್ಣಿನ ಮಣಿಸರ, ಸಕ್ರಿಮಣಿ, ಹವಳ ಮಣಿ, ಗುಲಗಂಜಿ ಸರಗಳನ್ನು ಬಳಸುತ್ತಾರೆ.

ಇತ್ತೀಚಿನ ದಿನಗಳಲ್ಲಿ ಗೃಹ ಆಲಂಕಾರಿಕ ವಸ್ತುಗಳಾದ ಸೋಫಾ, ಐಶಾರಾಮಿ ಜೋಕಾಲಿ, ಕುರ್ಚಿ, ಟೇಬಲ್, ಟೀಪಾಯಿ, ಹೂ ಕುಂಡ ಮತ್ತು ಕೃತಕ ಹೂಗಳನ್ನು ತಯಾರಿಸುತ್ತಾರೆ. ಬೆಂಗಳೂರಿನಂತಹ ಮಹಾನಗರಗಳಲ್ಲಿಯೂ ಸಹ ಇವರು ತಮ್ಮದೇ ಆದ ಬಡಾವಣೆ, ಬೀದಿಯನ್ನು ನಿರ್ಮಿಸಿಕೊಂಡಿರುವುದನ್ನು ಕಾಣಬಹುದು. ಈ ಸಮುದಾಯದವರು ಆಧುನಿಕ ಯುಗದಲ್ಲೂ ತಮ್ಮ ಕುಲಕಸುಬನ್ನು ಪ್ರೀತಿಯಿಂದ ಮುಂದುವರಿಸಿಕೊಂಡು ಬಂದಿದ್ದಾರೆ.

ಪ್ಲಾಸ್ಟಿಕ್ ಬಳಕೆ ಅಧಿಕವಾದಂತೆಲ್ಲ ಜಗತ್ತು ಆಧುನೀಕರಣಗೊಳ್ಳುತ್ತಿದ್ದಂತೆ ಮೇಧಾರ ಬುಡಕಟ್ಟಿನ ಬುಡಕ್ಕೆ ಕೊಡಲಿ ಪೆಟ್ಟು ಕೊಟ್ಟಂತಾಗಿದೆ. ಎಲೆಕ್ಟ್ರಾನಿಕ್ ವಸ್ತುಗಳ ಬಳಕೆ ಅಧಿಕವಾದಂತೆಲ್ಲ ಬಡವ, ಕಡುಬಡವರ ಮನೆಗಳಲ್ಲೂ ಫ್ಯಾನ್‌ಗಳು ಬಳಕೆಯಾಗುತ್ತಿವೆ. ಆ ಕಾರಣಕ್ಕೆ ಇವರು ಹೆಣೆಯುತ್ತಿದ್ದ ಬೀಸಣಿಕೆ ಈಗ ಕಣ್ಮರೆಯಾಗಿದೆ. ರೊಟ್ಟಿ–ಚಪಾತಿ ಇರಿಸಲು ಬಳಸುತ್ತಿದ್ದ ಬುಟ್ಟಿಗಳ ಜಾಗವನ್ನು ಹಾಟ್‌ಬಾಕ್ಸ್ ಆಕ್ರಮಿಸಿಕೊಂಡಿದೆ. ವಿಭೂತಿ, ಗಂಧ, ಇರಿಸುತ್ತಿದ್ದ ಚಿಕ್ಕ–ಚಿಕ್ಕ ಕಲಾತ್ಮಕ ಬುಟ್ಟಿಗಳ ಬದಲು ಪ್ಲಾಸ್ಟಿಕ್‌ನ ಬಣ್ಣದ ಡಬ್ಬಿಗಳು ಬಂದಿವೆ.

ಸಂಪ್ರದಾಯ ಸಂಸ್ಕೃತಿಯಲ್ಲಿ ಬದಲಾವಣೆ ಬಯಸುತ್ತಿರುವ ಮಾನವನ ಅರ್ಥವಿಲ್ಲದ ಬದುಕಿನ ಸ್ವಾರ್ಥಭರಿತ ಬಿನ್ನಾಣದ ಹೊಡೆತಕ್ಕೆ, ನಮ್ಮ ಹಿರಿಯರು ಬಳಸುತ್ತಿದ್ದ ಬೀಸಣಿಕೆಗಳು ಮಾಯವಾಗುತ್ತಿವೆ. ಹಿಂದೆ ಗಂಡ, ಮಕ್ಕಳು, ಅತ್ತೆ–ಮಾವಂದಿರು ಊಟಕ್ಕೆ ಕುಳಿತಾಗ ಅವರಿಗೆ ಊಟ ಬಡಿಸಿ ಪಕ್ಕದಲ್ಲಿ ಕುಳಿತು ಅವರ ತಟ್ಟೆಗೆ ನೊಣ, ನೊರಜು ಬಾರದಂತೆ ತಡೆಯಲು ಬಿದಿರಿನಿಂದ ಅಂದವಾಗಿ ಬಣ್ಣಗಳನ್ನು ಹಾಕಿ ಹೆಣೆದ ಬಣ್ಣ ಬಣ್ಣದ ಕಲಾತ್ಮಕ ಬೀಸಣಿಕೆ ಬೀಸುತ್ತಿದ್ದರೆ, ಗಾಳಿ ಬೀಸುವವರ ಕೈಬಳೆಯ ಝಣ್ ಝಣ್ ನಿನಾದದೊಂದಿಗೆ ಎಳೆ ಎಳೆಯಾಗಿ ಸೂಸಿ ಬರುವ ಗಾಳಿಯಿಂದ ಊಟ ಮಾಡುವ ವ್ಯಕ್ತಿ ತೃಪ್ತಿಯಿಂದ ತನ್ನ ಭೋಜನ ಸವಿದು ಆನಂದಪಡುತ್ತಿದ್ದ. ಮಲಗುವಾಗಲೂ ಅದೇ ಬೀಸಣಿಕೆ ಸಹಾಯ ಮಾಡುತ್ತಿತ್ತು.

ಅಷ್ಟೇ ಏಕೆ, ಬಿದಿರಿನಿಂದ ಕಲಾತ್ಮಕ ಶೈಲಿಯಲ್ಲಿ ಹೆಣೆದ ಬೀಸಣಿಕೆಗಳು ರಾಜ ಮಹಾರಾಜರ ಅರಮನೆಗಳಲ್ಲಿಯೂ ರಾರಾಜಿಸುವ ಕಾಲವೊಂದಿತ್ತು. ಆದರೆ ಈಗದು ಕೇವಲ ನೆನಪಾಗಿ ಮಾತ್ರ ಉಳಿದಿದೆ.



ಕಾಲ ಬದಲಾದಂತೆ ಕಲೆ ಬಳಕೆಯ ಶೈಲಿಯೂ ಬದಲಾಗಿದೆ. ಇಂದು ಸ್ಟೀಲ್, ಪ್ಲಾಸ್ಟಿಕ್, ಹಿಂಡಾಲಿಯಮ್‌ನಿಂದ ತಯಾರಿಸಿದ ವಸ್ತುಗಳು ಹೆಚ್ಚಾಗಿ ವಿವಿಧ ಬಣ್ಣಗಳಿಂದ ವೈವಿಧ್ಯಮಯವಾಗಿ ಹೆಣೆದ ಕುಸುರಿ ಕಲೆಗಳನ್ನು ಬಳಸಿ ಹೆಣೆದ ಹೂಕುಂಡ, ಹೂಗಳು, ಗೃಹೋಪಯೋಗಿ ವಸ್ತುಗಳು, ತಯಾರಾಗುತ್ತಿವೆಯಾದರೂ, ಕುರುಡರು, ವಯಸ್ಸಾದವರು, ಕುಂಟರು ಬಳಸುತ್ತಿದ್ದ ಊರುಗೋಲು, ಬೆತ್ತ ಕಣ್ಮರೆಯಾಗುತ್ತಿವೆ.

ಸರ್ಕಾರ ಹಿಂದುಳಿದ ಈ ಜನಾಂಗದ ಅಭಿವೃದ್ಧಿಗಾಗಿ, ಅವರ ಬಿದಿರಿನ ತಯಾರಿಕೆ ವಸ್ತುಗಳ ಮಾರಾಟಕ್ಕೆ ಸೂಕ್ತ ದೇಶ–ವಿದೇಶಿ ಮಾರುಕಟ್ಟೆ ಒದಗಿಸಿದರೆ ಅವರು ಕೂಡ ಎಲ್ಲರಂತೆ ತಮ್ಮ ಜೀವನ ನಡೆಸಲು ಅನುಕೂಲವಾಗುತ್ತದೆ.

**ರೇಣುಕಾಗಿರಿ ಬಾರಿಕಾಯಿ**
ಪತ್ರಿಕೋದ್ಯಮ ಮತ್ತು ಸಮೂಹ ಸಂವಹನ ವಿಭಾಗ, ಜ್ಞಾನಶಕ್ತಿ ಆವರಣ
ಕ.ರಾ.ಮ.ವಿ.ವಿ. ವಿಜಯಪುರ

ನಾವಿಂದು ವೈಚಾರಿಕ ಅಸಮ್ಮತಿಯ ಅನಿವಾರ್ಯ ಕಾಲಘಟ್ಟದಲ್ಲಿದ್ದೇವೆ. ಆಳುವ ವರ್ಗದ ಸರ್ವಾಧಿಕಾರದ ನಿರ್ಧಾರಗಳಿಗೆ ಅಸಮ್ಮತಿಯ ಭಿನ್ನಮತ ಸೂಚಿಸದ ಹೊರತು ಸ್ವಾತಂತ್ರ್ಯದ ಸಾಕ್ಷಾತ್ಕಾರ ದುಸ್ತರ. ರೋಸಾ ಲಕ್ಸೆಂಬರ್ಗ್ ಹೇಳುವಂತೆ, "ಯಾವಾಗಲೂ ಸ್ವಾತಂತ್ರ್ಯ ಎಂದರೆ ಭಿನ್ನಮತ ಹೊಂದಿದವನಿಗೆ ದೊರೆಯುವ ಸ್ವಾತಂತ್ರ್ಯ." ಆಳುವ ವರ್ಗಕ್ಕೆ ಪ್ರಶ್ನಾತೀತ ಸಮ್ಮತಿ ಸೂಚಿಸುವವನಿಗೆ ಸ್ವಾತಂತ್ರ್ಯ ಇಲ್ಲ, ಅದು ಅವನಿಗೆ ಬೇಕಾಗಿಯೂ ಇಲ್ಲ. ಆದರೆ ಅಸಮ್ಮತಿಯನ್ನು ಸೂಚಿಸುವವನಿಗೆ ಸ್ವಾತಂತ್ರ್ಯದ ಅಗತ್ಯವಿದೆ. ದೇಶಭಕ್ತಿ, ಧರ್ಮಭಕ್ತಿ, ಪಕ್ಷಭಕ್ತಿ ಮತ್ತು 'ನಮೋ' ಭಕ್ತಿಯ ಮೂಲಕ ನಡೆಯುವ ಶಕ್ತ್ಯಾರಾಧನೆಗಳಿಗೆ ಅಸಮ್ಮತಿಯನ್ನು ಸೂಚಿಸಲು ಸ್ವಾತಂತ್ರ್ಯದ ಅಗತ್ಯವಿದೆ. ಬುದ್ಧ, ಕ್ರಿಸ್ತ, ಅಂಬೇಡ್ಕರರಂತೆ ಸ್ವತಂತ್ರಮತಿಗಳಾದಾಗ ಮಾತ್ರ ನಾವು ಅಸಮ್ಮತಿಯ ಕಹಳೆಯನ್ನು ಊದಲು ಸಾಧ್ಯ. ಅದೊಂದು ಸಮರಾರಂಭದ ಕಹಳೆ. ಆ ಸಮರದಲ್ಲಿ ಸ್ವತಂತ್ರಮತಿಗಳು ತಮ್ಮ ಅಸಮ್ಮತಿಗಾಗಿ ಗತಿಸುವುದು ಅನಿವಾರ್ಯವಾದೀತು.

# 'ಅಸಮ್ಮತಿಯ ಅಭಿವ್ಯಕ್ತಿ' ಅನಿವಾರ್ಯವಾದಾಗ



ಅದು ೧೯೪೦ರ ಮಾತು. ಜರ್ಮನಿಯ ಒಂದು ಪುಟ್ಟ ಊರು. ಕೆಫೆಯೊಂದರ ಮುಂದೆ ಬಿಡಿಸಿಟ್ಟ ಕುರ್ಚಿಯಲ್ಲಿ ಕುಳಿತ ಜರ್ಮನ್ ಯುವಕರು ಜೂನ್ ತಿಂಗಳ ಆಪ್ಯಾಯಮಾನ ಬಿಸಿಲಿಗೆ ಮೈಯೊಡ್ಡಿ ಉದ್ದನೆಯ ಲೋಟದಲ್ಲಿ ಕಾಫೀ ಹೀರುತ್ತಿದ್ದರು. ಕಾಫೀ ಮೆಶೀನಿನ ಮೇಲೆ ಇರಿಸಿದ್ದ ಜರ್ಮನ್ ಮೇಡ್ "ಗ್ರುಂಡಿಗ್" ರೇಡಿಯೋ ಇದ್ದಕ್ಕಿದ್ದಂತೆ ಸದ್ದು ಮಾಡತೊಡಗಿತು : "ಫ್ರಾನ್ಸ್ ದೇಶವು ಹಿಟ್ಲರನ ಜರ್ಮನಿಗೆ ಶರಣಾಗಿದೆ" ಎಂಬ ಸುದ್ದಿ ಗಟ್ಟಿ ಧ್ವನಿಯಲ್ಲಿ ಬಿತ್ತರವಾಗುತ್ತಿತ್ತು ! ಆ 'ಶುಭ ಸಂದೇಶ' ದೇಶಭಕ್ತ (ಹಿಟ್ಲರ್‌ಭಕ್ತ) ಜರ್ಮನ್ ಯುವಕರಲ್ಲಿ ತಲ್ಲಣ ಮೂಡಿಸಿತು. ಪಾದಮೆಟ್ಟಿನಿಂತ ಯುವಕರ ಕೈ ಗಗನದತ್ತ ಮುಖಮಾಡಿತ್ತು. "ಹೇಯ್ಲ್ ಹಿಟ್ಲರ್" ಎಂಬ ಘೋಷ ಒಕ್ಕೊರಲಿನಿಂದ ಭೂಮಿ ಬಿರಿಯುವಂತೆ ಹೊರಟಿತ್ತು. ಆದರೆ ಅಲ್ಲೊಬ್ಬ ಇಳಿರ ಪ್ರಾಯದ ಯುವಕ ಕುಳಿತಲ್ಲಿಂದ ಕದಲಲೂ ಇಲ್ಲ, ತನ್ನ ಕಾಫೀ ಲೋಟವನ್ನು ತುಟಿಯಿಂದ ತೆಗೆಯಲೂ ಇಲ್ಲ. ಫ್ರಾನ್ಸನ್ನು ಆಕ್ರಮಿಸಿದ ಜರ್ಮನಿಯ ಫ್ಯಾಸಿಸ್ಟ್ ಧೋರಣೆಗೆ ಆತ ತೋರಿದ ತೀವ್ರ ಮತ್ತು ಅಷ್ಟೇ ದಿಟ್ಟ ಅಸಮ್ಮತಿ ಅದಾಗಿತ್ತು ಮತ್ತು ಅದಾದ ಐದೇ ವರ್ಷಗಳಲ್ಲಿ ತನ್ನ ವೈಚಾರಿಕ ಅಸಮ್ಮತಿಗಾಗಿ ಅನ್ಯಾಯವಾಗಿ ಗಲ್ಲಿಗೇರಬೇಕಾಯ್ತು. ಡೀಟ್ರಿಚ್ ಬಾನ್‌ಹೋಫರ್ ಎಂಬ ಆ ಯುವ ಕ್ರೈಸ್ತ ಪಾದ್ರಿಯ ಅಸಮ್ಮತಿಯ ನಿಲುವು ದುಬಾರಿ ಬೆಲೆ ತೆರಬೇಕಾದ ಸತ್ಯಪರತೆಯನ್ನು ನೆನಪಿಸುವ ಚಾರಿತ್ರಿಕ ಘಟನೆಯಾಗಿ ಚರಿತ್ರೆಯ ಪುಟಗಳಲ್ಲಿ ಇಂದಿಗೂ ಅಜರಾಮರವಾಗಿದೆ.

ಇದು ೨೦೧೭ರ ಸಂದರ್ಭ. ಇಲ್ಲೆಲ್ಲೋ ಕರ್ನಾಟಕದ ಮೂಲೆಯಲ್ಲಿ ಯುವಕರ ಬೃಹತ್ ರ್‍ಯಾಲಿ. "ನಮೋ ಜಿಂದಾಬಾದ್" ಮುಗಿಲೆತ್ತರಕ್ಕೆ ಹಾರುತ್ತಿರುವ ಜೈಕಾರ. ಪಾಕಿಸ್ತಾನದ ವಿರುದ್ಧ ಸರ್ಜಿಕಲ್ ಸ್ಟ್ರೈಕ್ ! ದೇಶಭಕ್ತ (ನಮೋಭಕ್ತ) ಭಾರತೀಯ ಯುವಕರಲ್ಲಿ ಎಲ್ಲಿಲ್ಲದ ತಲ್ಲಣ. ಈ ತಲ್ಲಣವನ್ನು ತಣಿಸುವ ಯತ್ನವೇನಾದರೂ ನಡೆದರೆ ಜೋಕೆ ! "ದೇಶದ್ರೋಹಿಗಳು" ಎಂಬ ಹಣೆಪಟ್ಟಿ ಗ್ಯಾರಂಟಿ. ಅಷ್ಟೇ ಏಕೆ, ಜೀವಹಾನಿಯಾಗುವುದೂ ಅಚ್ಚರಿಯೇನಲ್ಲ.

ವೈಚಾರಿಕತೆಯಿಲ್ಲದ ವಿಶ್ವಾಸ ಮತ್ತು ವಿವೇಚನೆಯಿಲ್ಲದ ವಿಧೇಯತೆ ಇವು ಬಹು ಅಪಾಯಕಾರಿ. ವ್ಯಕ್ತಿಯನ್ನು ಅಂಥ ಅಪಾಯದಿಂದ ತಪ್ಪಿಸಿ ವೈಚಾರಿಕತೆಯತ್ತ ನಡೆಸುವುದೇ ಶಿಕ್ಷಣದ ಪರಮ ಗುರಿ. ಶಿಕ್ಷಣವು ವ್ಯಕ್ತಿ ಮತ್ತು ಸಮಾಜವನ್ನು ಜ್ಞಾನಾರ್ಜನೆಗೂ ಅರಿವಿನ ಅಭಿವ್ಯಕ್ತಿಗೂ ನಡೆಸುವ ಪರಿಣಾಮಕಾರೀ ಸಾಧನ. ಶತಮಾನಗಳಿಂದ ಸಾಂಸ್ಥಿಕವಾಗಿ ಮತ್ತು ಕ್ರಮಬದ್ಧವಾಗಿ ಹೊರೆಸಲ್ಪಟ್ಟ ಕಟ್ಟುಪಾಡುಗಳಿಗೆ ವೈಚಾರಿಕ ಅಸಮ್ಮತಿ ಸೂಚಿಸುವ ದಿಟ್ಟತನಕ್ಕೆ ಶಿಕ್ಷಣ ನಮ್ಮನ್ನು ನಡೆಸುತ್ತದೆ. ಆದರೆ ಜ್ಞಾನ ಸಂಪಾದನೆ ಹಾಗೂ ಅರಿವಿನ ಅಭಿವ್ಯಕ್ತಿ ಇವೆರಡೂ ಇಂದು ಅಪಾಯದ ಅಂಚಿನಲ್ಲಿವೆ. ಕಾರಣ ಇಷ್ಟೇ – ಸ್ವಾತಂತ್ರ್ಯದ ಅರಿವನ್ನು ಮೂಡಿಸುವ ಜ್ಞಾನದ ಅಭಿವ್ಯಕ್ತಿ ರಾಜಕೀಯ ಮತ್ತು ಧಾರ್ಮಿಕ ಪ್ರಭುತ್ವಗಳ ನಿದ್ದೆಗೆಡಿಸುವ ಶಕ್ತಿಯುತ ಪ್ರತಿಶಕ್ತಿ. ನಿದ್ದೆಗೆಟ್ಟ ಪ್ರಭುತ್ವಗಳು ತಮ್ಮ ಸುಖನಿದ್ದೆಗೆ ಧಕ್ಕೆಯಾದ ಶಕ್ತಿಗಳನ್ನು ದಮನಿಸದೇ ಬಿಡುವವೇ ? ಅರಿವಿನ ದಿಟ್ಟತನದ ಅಭಿವ್ಯಕ್ತಿಯನ್ನು ದೇಶದ್ರೋಹವೆಂದೂ ಭಯೋತ್ಪಾದಕವೆಂದೂ ರೂಪಿಸುವ ಕ್ರಮಬದ್ಧ ಷಡ್ಯಂತ್ರಗಳು ದಿನದಿಂದ ದಿನಕ್ಕೆ ಹೆಚ್ಚಾಗುತ್ತಲೇ ಇವೆ. ಆ ಮೂಲಕ ಸ್ವಾತಂತ್ರ್ಯ, ಸಮಾನತೆ ಮತ್ತು ಸತ್ಯಕ್ಕಾಗಿ ಬೊಬ್ಬಿಡುವ ಧ್ವನಿಗಳನ್ನು ಹತ್ತಿಕ್ಕುವ ಮತ್ತು ಪಳಗಿಸುವ ಯತ್ನಗಳು ಇಂದು ನಮ್ಮ ದೇಶದ ಅಧಿಕಾರ ವರ್ಗದ ಫ್ಯಾಸಿಸ್ಟ್ ಧೋರಣೆಗಳನ್ನು ಎತ್ತಿ ಹಿಡಿಯುತ್ತಿವೆ. ಹೈದರಾಬಾದ್ ಕೇಂದ್ರ ವಿಶ್ವವಿದ್ಯಾಲಯ ಮತ್ತು ದೆಹಲಿಯ ಜವಾಹರಲಾಲ್ ನೆಹರು ವಿಶ್ವವಿದ್ಯಾಲಯಗಳಲ್ಲಿ ನಡೆದ ಆಳುವ ವರ್ಗದ ವಿಧ್ವಂಸಕ ಕೃತ್ಯಗಳು ಮತ್ತು ನಮ್ಮದೇ ನೆಲದ ಹೆಮ್ಮೆಯ ಸಾಹಿತಿ ಎಂ. ಎಂ. ಕಲಬುರ್ಗಿಯವರ ದಾರುಣ ಹತ್ಯೆಯಂಥ ಬೀಭತ್ಸ ಘಟನೆಗಳು ಭಾರತೀಯರ ಮನಸ್ಸುಗಳಲ್ಲಿ ಇನ್ನೂ ಹಸಿಯಾಗಿವೆ. ವೈಚಾರಿಕ ಅಸಮ್ಮತಿಯೆಡೆಗೆ ನಡೆಸುವ ಶಿಕ್ಷಣದ ಸ್ವತಂತ್ರ ಶಕ್ತಿಯ ವಿರುದ್ಧ ಫ್ಯಾಸಿಸ್ಟ್

**ಡಾ|| ಗ್ಲ್ಯಾಡ್‌ಸನ್ ಜತ್ತನ್ನ**

ಮನಸ್ಸುಗಳು ನಡೆಸುತ್ತಿರುವ ಸಾಂಸ್ಥಿಕ ಆಕ್ರಮಣವಿದು.

ಕಳೆದ ಶತಮಾನದ ಆರಂಭದಲ್ಲೇ ರವೀಂದ್ರನಾಥ ಠಾಗೋರರು ಇಂತಹ ಪ್ರಭುತ್ವವಾದೀ ಆಡಳಿತ ವ್ಯವಸ್ಥೆಯ ಕುರಿತು ಎಚ್ಚರಿಸುತ್ತ "ದೇವರು ಮತ್ತು ಮಾನವತೆಯ ಪರ ಗೌರವಕ್ಕಿಂತ ದೇಶವನ್ನು ವಿಗ್ರಹವನ್ನಾಗಿಸಿ ಆರಾಧಿಸುವುದು ಹಿರಿದು ಎಂಬ ಬೋಧನೆ ಬಹು ಹಾನಿಕಾರಕ ಮತ್ತು ಇಡೀ ಮಾನವತೆಗೇ ಕಂಟಕಪ್ರಾಯ" ಎಂದಿದ್ದರು. ಇಂದು ಆಗುತ್ತಿರುವುದು ಅದೇ. ದೇಶ ಇಂದು ಪೂಜಿಸಲ್ಪಡುವ ವಿಗ್ರಹವಾಗಿಬಿಟ್ಟಿದೆ. ಸಿನಿಮಾ ಮಂದಿರದಲ್ಲಿ ರಾಷ್ಟ್ರಗೀತೆಗೆ ಎದ್ದುನಿಲ್ಲುವ ಇಲ್ಲವೇ ನಿಲ್ಲದ ನಿರ್ಧಾರದ ಪರಿಧಿಯೊಳಗೆ ದೇಶಭಕ್ತಿ ವ್ಯಾಖ್ಯಾನದ ವಸ್ತುವಾಗಿ ಬಿಟ್ಟಿದೆ! ಆಳುವ ಅರಸ ನುಡಿದದ್ದೆಲ್ಲಾ ವೇದಾಂತ ಎಂಬ ಮನೋಧೋರಣೆ ಬಲಾಢ್ಯವಾಗುತ್ತಿದೆ. ಪ್ರಶ್ನಾತೀತ ಸಮ್ಮತಿಯ ಸಂಸ್ಕೃತಿ ಭಯ ಹುಟ್ಟಿಸುವಷ್ಟು ಬೃಹದಾಕಾರವಾಗಿ ಬೆಳೆಯುತ್ತಿದೆ.

ನಿಜವಾದ ದೇಶಭಕ್ತ ಯಾರು ಎಂಬ ಪ್ರಶ್ನೆಗೆ ಬೆನೆಡಿಕ್ಟ್ ಆ್ಯಂಡರ್‌ಸನ್ ನೀಡುವ ಉತ್ತರ ಇಲ್ಲಿ ಗಮನಾರ್ಹ: "ತನ್ನ ದೇಶ ಅಥವಾ ಸರ್ಕಾರವು ನಡೆಸುತ್ತಿರುವ ಎಲ್ಲಾ ಅಪರಾಧಗಳನ್ನು ಮತ್ತು ತನ್ನ ಸಹಪ್ರಜೆಯ ವಿರುದ್ಧ ಅದು ಎಸಗುತ್ತಿರುವ ವಿಧ್ವಂಸಕ ಕೃತ್ಯಗಳನ್ನು ಕಂಡು ನಾಚಿಕೊಳ್ಳದ ಯಾವನೂ/ಳೂ ದೇಶಭಕ್ತನಾ/ಳಾಗಲಾರ." ಇಂದು ನಮ್ಮ ದೇಶದಲ್ಲಿ ಆಳುವ ವರ್ಗ ನಡೆದು ಕೊಳ್ಳುತ್ತಿರುವ ರೀತಿ ನಮ್ಮನ್ನು ನಾಚಿಕೆಗೀಡುಮಾಡದಿದ್ದರೆ ನಮ್ಮ 'ದೇಶಭಕ್ತಿ'ಯ ಘೋಷಣೆಗಳೇ ಲಜ್ಜಾಸ್ಪದ. ದೇಶಭಕ್ತಿಯ ಅಮಲು 'ಭಕ್ತ'ನನ್ನು ಕುರುಡಾಗಿಸಿರುವುದರಿಂದಲೇ ಆತ ಜನನಾಯಕನಿಗೂ ಸರ್ವಾಧಿಕಾರಿಗೂ ನಡುವೆ ವ್ಯತ್ಯಾಸ ಗುರುತಿಸುವಲ್ಲಿ ಸೋತಿರುವುದು. ಸಂತನಿಗೂ ಕಳ್ಳಸ್ವಾಮಿಗೂ, ಬೆಂಕಿಗೂ ಬೆಳಕಿಗೂ ನಡುವೆ ವ್ಯತ್ಯಾಸ ಕಾಣದಷ್ಟು ಕುರುಡನಾಗಿದ್ದಾನೆ ಈ 'ಭಕ್ತ'. 'ಭಕ್ತ'ರಾಗಲು ಅಸಮ್ಮತಿಸುವವರೆಗೆ ಬಕ್ರಗಳನ್ನಾಗಿಸುವ ಯತ್ನ ಸಾಗಿಯೇ ಇರುತ್ತದೆ. ಮತ್ತೆ ಮುಂದೊಂದು ದಿನ ಬಲಿಗಂಬದ ಮೇಲೆ ಕೊರಳಿಡುವ ಅನಿವಾರ್ಯತೆ ಬಕ್ರಗಳಾದ ಭಕ್ತರಿಗೆ ಕಟ್ಟಿಟ್ಟ ಬುತ್ತಿ.

ನಾವಿಂದು ವೈಚಾರಿಕ ಅಸಮ್ಮತಿಯ ಅನಿವಾರ್ಯ ಕಾಲಘಟ್ಟದಲ್ಲಿದ್ದೇವೆ. ಆಳುವ ವರ್ಗದ ಸರ್ವಾಧಿಕಾರದ ನಿರ್ಧಾರಗಳಿಗೆ ಅಸಮ್ಮತಿಯ ಭಿನ್ನಮತ ಸೂಚಿಸದ ಹೊರತು ಸ್ವಾತಂತ್ರ್ಯದ ಸಾಕ್ಷಾತ್ಕಾರ ದುಸ್ತರ. ರೋಸಾ ಲಕ್ಸೆಂಬರ್ಗ್ ಹೇಳುವಂತೆ, "ಯಾವಾಗಲೂ ಸ್ವಾತಂತ್ರ್ಯ ಎಂದರೆ ಭಿನ್ನಮತ ಹೊಂದಿದವನಿಗೆ ದೊರೆಯುವ ಸ್ವಾತಂತ್ರ್ಯ." ಆಳುವ ವರ್ಗಕ್ಕೆ ಪ್ರಶ್ನಾತೀತ ಸಮ್ಮತಿ ಸೂಚಿಸುವವನಿಗೆ ಸ್ವಾತಂತ್ರ್ಯ ಇಲ್ಲ, ಅದು ಅವನಿಗೆ ಬೇಕಾಗಿಯೂ ಇಲ್ಲ. ಆದರೆ ಅಸಮ್ಮತಿಯನ್ನು ಸೂಚಿಸುವವನಿಗೆ ಸ್ವಾತಂತ್ರ್ಯದ ಅಗತ್ಯವಿದೆ. ದೇಶಭಕ್ತಿ, ಧರ್ಮಭಕ್ತಿ, ಪಕ್ಷಭಕ್ತಿ ಮತ್ತು 'ನಮೋ' ಭಕ್ತಿಯ ಮೂಲಕ ನಡೆಯುವ ಶಕ್ತ್ಯಾರಾಧನೆಗಳಿಗೆ ಅಸಮ್ಮತಿಯನ್ನು ಸೂಚಿಸಲು ಸ್ವಾತಂತ್ರ್ಯದ ಅಗತ್ಯವಿದೆ. ಬುದ್ಧ, ಕ್ರಿಸ್ತ, ಅಂಬೇಡ್ಕರರಂತೆ ಸ್ವತಂತ್ರಮತಿಗಳಾದಾಗ ಮಾತ್ರ ನಾವು ಅಸಮ್ಮತಿಯ ಕಹಳೆಯನ್ನು ಊದಲು ಸಾಧ್ಯ. ಅದೊಂದು ಸಮರಾರಂಭದ ಕಹಳೆ. ಆ ಸಮರದಲ್ಲಿ ಸ್ವತಂತ್ರಮತಿಗಳು ತಮ್ಮ ಅಸಮ್ಮತಿಗಾಗಿ ಗತಿಸುವುದು ಅನಿವಾರ್ಯವಾದೀತು. ಆದರೆ ಅನ್ಯಾಯದ ಪ್ರಭುತ್ವಕ್ಕೆ ಮೌನ ಸಮ್ಮತಿಯನ್ನು ನೀಡಿ ಬಲಿಗಂಬದ ಮೇಲೆ ಕೊರಳನ್ನಿಡುವ ನರಸತ್ತ ಬದುಕಿಗಿಂತ ಅಧರ್ಮದ ಆಧಿಪತ್ಯದ ವಿರುದ್ಧ ಅಸಮ್ಮತಿಯ ದಂಗೆ ಏಳುವ ಬದುಕು ಎಷ್ಟೋ ಮೇಲು. ಲೆಬನಾನಿನ ಜನಕವಿ ಖಲೀಲ್ ಗಿಬ್ರಾನ ನೂರು ವರ್ಷಗಳ ಹಿಂದೆ ದುಃಖಿಸಿದ್ದು ಇದಕ್ಕೇ ಅಲ್ಲವೇ ?

*ತಮಟೆ ಬಡಿದು ಆಕ್ರಮಣಕಾರರ*
*ಬರಮಾಡಿಕೊಳ್ಳುವ*
*ನಾಡಿನ ಬಗೆಗೆ ದುಃಖವಾಗುತ್ತಿದೆ.*
*ನಿದ್ರೆಯಲ್ಲಷ್ಟೇ ಆಕ್ರಮಣವನ್ನು ದ್ವೇಷಿಸುತ್ತ*
*ಎಚ್ಚರದಲ್ಲಿ ಒಪ್ಪಿಕೊಂಡಿರುವ*
*ನಾಡಿನ ಬಗೆಗೆ ದುಃಖವಾಗುತ್ತಿದೆ.*
*ಬಲಿಗಂಬದ ಮೇಲೆ ಕೊರಳನ್ನಿಡುವ ತನಕ*
*ದಂಗೆ ಏಳದ ನಾಡನ್ನು ಕಂಡು*
*ದುಃಖವಾಗುತ್ತಿದೆ ನನಗೆ*

**ಡಾ॥ ಗ್ಲ್ಯಾಡ್‌ಸನ್ ಜತ್ತನ್ನ**
ಕರ್ನಾಟಕ ಥಿಯೊಲಾಜಿಕಲ್ ಕಾಲೇಜು ಆವರಣ, ಬಲ್ಮಠ
ಮಂಗಳೂರು – ೫೭೫ ೦೦೧






ದಿನಾಂಕ ೨೮-೮-೨೦೧೭ರಿಂದ ೩೦-೮-೨೦೧೭ರವರೆಗೆ ಮೈಸೂರಿನ ಸೈಂಟ್ ಫಿಲೋಮಿನಾ ಪದವಿ ಕಾಲೇಜಿನಲ್ಲಿ ಏರ್ಪಡಿಸಿದ್ದ ನವಕರ್ನಾಟಕ ಪುಸ್ತಕ ಪ್ರದರ್ಶನ ಉದ್ಘಾಟನಾ ಸಮಾರಂಭದಲ್ಲಿ ನವಕರ್ನಾಟಕ ಪ್ರಕಾಶನದ 'ಚಿವ್ ಚಿವ್ ಗುಬ್ಬಿ' ಮತ್ತು 'ವಾನಪ್ರಸ್ಥ' ಈ ಎರಡು ಕೃತಿಗಳನ್ನು ಕಾಲೇಜಿನ ಮುಖ್ಯಾಧಿಕಾರಿ ಮತ್ತು ವ್ಯವಸ್ಥಾಪಕರಾದ ರೆ. ಫಾ. ಬೆರ್ನಾರ್ಡ್ ಪಿ. ಬಾರ್ನಿಸ್ ಇವರು ಲೋಕಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ರೆ. ಫಾ. ಡಾ॥ ಎಮ್. ವಿನ್ಸೆಂಟ್, ಪ್ರೊ॥ ಸಂಜಯ್ ನಾಯರ್, ರೆ. ಫಾ. ಸಂಜಯ್ ಕುಮಾರ್, ಶ್ರೀ ಎ. ಟಿ. ಸಡೆಬೋಸ್ ಮತ್ತು ನವಕರ್ನಾಟಕ ಪ್ರಕಾಶನದ ಮೈಸೂರು ಶಾಖೆಯ ವ್ಯವಸ್ಥಾಪಕ ಶ್ರೀ ಎನ್. ಕೆ. ಸತ್ಯನಾರಾಯಣ ಮುಂತಾದವರು ವೇದಿಕೆಯಲ್ಲಿ ಉಪಸ್ಥಿತರಿದ್ದರು.

ಕಲಬುರ್ಗಿಯವರು ನಮ್ಮಿಂದ ಅಗಲಿ ಎರಡು ಸಂವತ್ಸರಗಳೇ ಕಳೆದು ಹೋಗಿವೆ ಆದರೂ ಅವರ ಕೀರ್ತಿಯು ಇಂದು ನಮ್ಮೊಡನೆ ಉಸಿರಾಡುತ್ತಾ ಇದೆ. ಹೀಗಿರುವಾಗ ಕಲಬುರ್ಗಿಯವರ ಕುರಿತು ಹಲವು ವಿಷಯ ವಿವಾದಗಳು ನಡೆಯುವಾಗ ಅದರ ನಿಜಾಂಶದ ಬಗ್ಗೆ ಜನಸಾಮಾನ್ಯರಿಗೆ ಅರಿವುಂಟಾಗಲಿ ಎಂಬ ಸದುದ್ದೇಶದಿಂದ ನಿಮ್ಮ ಮುಂದೆ ವಿವರಿಸುತ್ತಿದ್ದೇನೆ.

ಕಲಬುರ್ಗಿಯವರು ವಿಜಾಪುರದವರಾದರೂ ಧಾರವಾಡ ಸಾಹಿತಿಗಾರರಲ್ಲೊಬ್ಬರಾದದ್ದು ಹೇಗೆಂಬ ಪ್ರಶ್ನೆ ನಿಮ್ಮಲ್ಲಿ ಮೂಡಿಬಂದಿರ ಬಹುದು. ಆದರೂ ಅದು ಹೇಗೆಂಬುದು ತಿಳಿಯುವುದು ಮತ್ತೊಂದು ಪ್ರಮುಖವಾದಂತಹ ವಿಷಯ.

ಯಾವುದೇ ಒಬ್ಬ ವ್ಯಕ್ತಿ ತನ್ನ ವ್ಯಕ್ತಿತ್ವವನ್ನು ಪ್ರದರ್ಶಿಸುವುದು ಒಂದೋ ಸಾಮಾಜಿಕ ಕೆಲಸಗಳಲ್ಲಿ, ಸಾಹಿತ್ಯದಲ್ಲಿ ಅಥವಾ ನಡೆಗುಣಗಳಿಂದಾಗ ಬಹುದು. ಆದರೆ ಕಲಬುರ್ಗಿಯವರ ಕುರಿತು ಹೇಳುವುದಾದರೆ ಅವರೊಬ್ಬ ಸಾಹಿತ್ಯಗಾರರೂ ಮಾತ್ರವಾಗಿರಲಿಲ್ಲ ಹೊರತು ಚೈತನ್ಯಶೀಲ ಹಾಗೂ ಕ್ರಿಯಾಶೀಲ ವ್ಯಕ್ತಿಯಾಗಿದ್ದರು.

ಯಾವುದಾದರೊಂದು ನೈಜಾಂಶವನ್ನು ಸಮಾಜದ ಮುಂದೆ ಬಿಚ್ಚಿಟ್ಟರೆ ಅದನ್ನು ದೊಡ್ಡತಪ್ಪೆಂದು ವಾದಿಸುವ ಅದಕ್ಕಾಗಿ ಹೋರಾಟ ಮಾಡುವವರ ಮುಂದೆ ಗರ್ಜಿಸುವ ಸಿಂಹದಂತೆ, ಸಾವಿರ ಅಶ್ವಶಕ್ತಿಯಂತೆ ಸತ್ಯವನ್ನು ಬಿಚ್ಚಿಡುವ ಅಪರೂಪ ವ್ಯಕ್ತಿಗಳಲ್ಲೊಬ್ಬರಾಗಿದ್ದಾರೆ ಡಾ॥ ಎಂ. ಎಂ. ಕಲಬುರ್ಗಿಯವರು. ಅವರಿಗೆ ಉರಿಯ ನಾಲಗೆಯಿತ್ತು. ಅದು ನೀರಿನಂತೆ ತಣ್ಣಗಿರಲಿಲ್ಲ. ಇದರಿಂದಲೇ ಅವರು ತಮ್ಮ ಪ್ರಾಣವನ್ನು ಅಂಗೈಯಲ್ಲೇ ಹಿಡಿದುಕೊಂಡು ಕೆಲಸ ಮಾಡಬೇಕಾಯಿತು. ಈ ಕಾರಣದಿಂದಲೇ ನಮ್ಮ ಸಾಹಿತ್ಯಲೋಕಕ್ಕೆ ಆದಂತಹ ಅಪಾರ ನಷ್ಟವು ಇವರ ಸತ್ಯಕ್ಕೆ ಒದಗಿರುವ ಬೆದರಿಕೆಯಾಗಿತ್ತು ಅಷ್ಟೆ. ಕಲಬುರ್ಗಿಯವರು ಯಾವುದೇ ವಿಷಯ ವಾಗಿದ್ದರೂ ಅದನ್ನು ಆಳವಾಗಿ ಅಧ್ಯಯನ ನಡೆಸಿ ಸಂಶೋಧನೆ ಮಾಡಿ ನಂತರ ಅದನ್ನು ಜನರ ಮುಂದೆ ಸಮರ್ಪಿಸುತ್ತಿದ್ದರು. ಸಂಶೋಧನೆ ಎನ್ನುವುದೊಂದು ರೀತಿಯ ಗಂಡಾಂತರ ಕ್ಷೇತ್ರ, ಎಷ್ಟೋಸಲ ಹೊಸ ವಿಷಯಗಳ ಶೋಧ ಆದಾಗ ಹಳೆಯ ನಂಬಿಕೆಗಳು, ಹಳೆಯ ವಿಚಾರಗಳು ಇವಕ್ಕೆಲ್ಲ ಧಕ್ಕೆ ಬರುತ್ತದೆ.

ಸಹಜವಾಗಿಯೇ ಅದಕ್ಕೆ ಪ್ರತಿಕ್ರಿಯೆಯೂ ಕೂಡ ಅಷ್ಟೇ ಕಠಿಣವಾಗಿಯೇ ಇರುತ್ತದೆ. ನಮ್ಮ ಭಾರತೀಯ ಸಾಹಿತ್ಯ ಮತ್ತು ಧರ್ಮ ಇವೆರಡಕ್ಕೂ ಒಂದು ನಿಕಟವಾದಂತಹ ಸಂಬಂಧ ಇದೆ ! ಪ್ರಾಚೀನಕಾಲ ದಿಂದಲೂ ಸಾಹಿತ್ಯ ಮತ್ತು ಧರ್ಮ ಇವೆರಡು ಒಟ್ಟಿಗೆ ನಡೆದಂತಹ ವಿಷಯಗಳು. ಅದರಿಂದ ಸಾಹಿತ್ಯದಲ್ಲಿ ನಡೆದಂತಹ ಸಂಶೋಧನೆಗೂ, ಧಾರ್ಮಿಕ ಭಾವನೆಗಳಿಗೂ ಕೆಲವು ಸಲ ಆಘಾತವಾಗುವಂತಹ ಸಂದರ್ಭವಿದೆ. ಅಂತಹ ಕೆಲವೊಂದು ಪ್ರಸಂಗಗಳು ಕಲಬುರ್ಗಿಯವರ ವಿಷಯದಲ್ಲಿ ನಡೆದವು. ಆದರೆ ಅವರು ಇಂತಹ ವಾದ – ವಿವಾದ ಗಳಿಂದಾಗಲೀ, ವಿರೋಧಗಳಿಂದಾಗಲೀ, ಟೀಕೆಗಳಿಂದಾಗಲೀ ಧೃತಿಗೆಟ್ಟವರಲ್ಲ ಮತ್ತು ಅವರ ಮಾರ್ಗದಿಂದ ವಿಚಲಿತರಾದಂಥವರಲ್ಲ.

ಹೀಗೆಯೇ ಇವರ ಜೀವನದ ಅಮೂಲ್ಯವಾದಂತಹ ಸಮಯವನ್ನು ತನ್ನ ಜನತೆಗಾಗಿ ಮೀಸಲಿಟ್ಟ ಅವರು ಶಿಕ್ಷಣ, ಸಂಶೋಧನೆ, ಆಡಳಿತ, ಸಂಘಟನೆ ಮೊದಲಾದಂತಹ ಕ್ಷೇತ್ರಗಳಲ್ಲಿ ತಮ್ಮನ್ನೂ ತಾವೇ ಸತತವಾಗಿ ತೊಡಗಿಸಿಕೊಂಡಿದ್ದರು. ಇಂಥವರ ಅವಿರತವಾದಂತಹ ದುಡಿಮೆಯ ಫಲವೇ ಇಂದಿನ ಕನ್ನಡ ಸಂಸ್ಕೃತಿ.

ಅವರು ಧಾರವಾಡಕ್ಕೆ ಬಂದು ಸಾಹಿತ್ಯದ ಮಹಾ ಸ್ಫೋಟವನ್ನೇ ಸೃಷ್ಟಿಸಿದರು. ಧಾರವಾಡದಲ್ಲಿ ಸಾಹಿತ್ಯಕ್ಕೊಂದು ದೊಡ್ಡಪರಂಪರೆ ಇದ್ದ ಹಾಗೆ ಸಂಶೋಧನೆಗೂ ಅದರಷ್ಟೇ ದೊಡ್ಡ ಪರಂಪರೆಯಿದೆ.

ಆದರೆ ಇದು ಹೆಚ್ಚಿನವರಿಗೆ ಪರಿಚಿತವಾದಂತಹ ವಿಷಯವಲ್ಲ. ಯಾಕೆಂದರೆ ಕವಿಗಳಿಗೆ, ಕಾದಂಬರಿಗಾರರಿಗೆ ದೊರೆತಂತಹ ಪ್ರಶಸ್ತಿ, ಪ್ರಚಾರ, ಗೌರವಗಳು ಸಂಶೋಧಕರಿಗೆ ಸಿಕ್ಕಿಲ್ಲವೆಂಬುದೇ ನೈಜ ಸತ್ಯ .

ಕಲಬುರ್ಗಿಯವರ ಚಟುವಟಿಕೆ ನೋಡಿದರೆ ಅವರು ಕೇವಲ ಸಾಹಿತ್ಯ ಕ್ಷೇತ್ರದಲ್ಲಿ ಮಾತ್ರವಲ್ಲ, ಎಲ್ಲಾ ಕ್ಷೇತ್ರದಲ್ಲೂ ತೊಡಗಿಸಿಕೊಂಡಿದ್ದು ಕಂಡುಬರುತ್ತದೆ. ಅವರು ಸಾಹಿತ್ಯ ಸಂಶೋಧನೆಯ ಸತ್ವವನ್ನು ಹೀರಿಕೊಂಡು ಬೆಳೆದರು.

ಆಮೇಲೆ ತಮ್ಮದೇ ಆದಂತಹ ವ್ಯಕ್ತಿತ್ವವನ್ನು ರೂಢಿಸಿಕೊಂಡು ಹಿರಿಯರಿಗೆ, ಕಿರಿಯರಿಗೆ ಮಾದರಿಯಾದರೂ ಕಲಬುರ್ಗಿಯವರ ಕೆಲಸ ಇನ್ನೂ ಮುಂದುವರಿಸಬಹುದಿತ್ತು. ಆದರೆ ಅವರಿಗಾದದ್ದೇ ಬೇರೆ.

'ಅನುಭವವೂ ಸವಿಯಲ್ಲ ಅದರ ನೆನಪೇ ಸವಿಯೆಂದು' ಕಡೆಂಗೋಡ್ಲು ಶಂಕರಭಟ್ಟರ ಕವಿತೆಯೊಂದು ಹೇಳುತ್ತದೆ. ಅದೇ ರೀತಿ ತನ್ನ ಸಾಧನೆಯ ಮಾರ್ಗದಲ್ಲಿನ ಅನೇಕ ಅಗ್ನಿಕುಂಡಗಳನ್ನು ಕಲಬುರ್ಗಿಯವರು ದಾಟಬೇಕಾಯಿತು. ಇಷ್ಟಾದರೂ ಅವರ ಕಾಯಕ ಶ್ರದ್ಧೆ, ಜೀವನೋತ್ಸಾಹಗಳಿಗೆ ಎಂದೂ ಕುಂದುಂಟಾಗಲಿಲ್ಲ.

ಚೆನ್ನವೀರ ಕಣವಿಯವರು ಕಲಬುರ್ಗಿಯವರ ಒಂದು ನೆನಪನ್ನು ನಮ್ಮ ಮುಂದಿಡುತ್ತಾರೆ. ೧೯೯೮ರಲ್ಲಿ ಕಲಬುರ್ಗಿಯವರ ೬೦ರ ಸಮಾರಂಭ 'ನ ಭೂತೋ ನ ಭವಿಷ್ಯತಿ' ಎನ್ನುವ ರೀತಿಯಲ್ಲಿ ಧಾರವಾಡದ ಕಲಾಭವನದಲ್ಲಿ ನೆರವೇರಿತು. ಆಗ

ಝುಬೈರ್



# ಕಲಬುರ್ಗಿ : ಸಂಶೋಧನೆಯನ್ನು ಅರಸುತ್ತಾ...

ಅವರು ತಮ್ಮ ಭಾಷಣದ ಕೊನೆಯಲ್ಲಿ ಹೇಳಿದ ಮಾತು ಇನ್ನೂ ನನ್ನ ನೆನಪಿನಲ್ಲಿದೆ. "ವ್ಯಕ್ತಿಕೇಂದ್ರಿತ ಬದುಕಿಗಿಂತ ಸಮಾಜಕೇಂದ್ರಿತ ಬದುಕು ಹೆಚ್ಚು ದುಃಖಮಯವಾದದು... ನನಗೆ ಈ ದುಃಖದಲ್ಲಿಯೇ ಸುಖವಿದೆ, ಈ ದುಃಖದ ಆಚೆ ಇನ್ನೂ ದೊಡ್ಡ ಸುಖವಿದೆ ಎಂದು ನನಗೆ ತಿಳಿದಿದೆ... ಆದ್ದರಿಂದ ನಾನು ಸುದೈವಿಯೆಂದೇ ಹೇಳಬೇಕು." ಇಂಥ ವ್ಯಕ್ತಿಯನ್ನು ಕಳೆದುಕೊಂಡ ನಮ್ಮ ಸಾಹಿತ್ಯಲೋಕದ ಕನ್ನಡಿಗರು ಒಂದರ್ಥದಲ್ಲಿ ಅನಾಥರೇ...

ಸಂಶೋಧನೆಯ ಮೂಲಕ ಸತ್ಯವೂ ಹೆಕ್ಕಿತೆಗೆಯುವಂತಹ ಸಂದರ್ಭ ದಲ್ಲಾಗಿತ್ತು ಅವರು 'ಹೊಸಮಾರ್ಗದಲ್ಲಿ ಸತ್ಯದ ಕಡೆಗೆ ಹೋಗಬೇಕಾದ ಅನಿವಾರ್ಯ ಒದಗಿಬಂದದದ್ದು.'

ಆಕರಗಳ ಬಗ್ಗೆ ಕಲಬುರ್ಗಿಯವರು ತಾಳುವ ಗಾಢ ವಿಶ್ವಾಸಕ್ಕೆ ಪ್ರಮುಖ ಕಾರಣವಾದದ್ದು ಅವರೆಗೆ ನಡೆಸಿದ ಸಂಶೋಧನೆ ಮತ್ತು ಫಲಶ್ರುತಿಯಾಗಿತ್ತು. ಈ ಮಾರ್ಗವೂ ಇಷ್ಟಕ್ಕೆ ನಿಂತಿದ್ದರೆ ಕಲಬುರ್ಗಿಯವರು ಯೋಜನಾ ಬದ್ಧವಾದಂತಹ ಹೊಸವಿಧಾನವನ್ನು ರೂಪಿಸುತ್ತಿರಲಿಲ್ಲ. ಇದರಿಂದ ಅವರು ಹೊಸ ರೀತಿಯಾದಂತಹ ಮಾರ್ಗದೆಡೆಗೆ ತನ್ನನ್ನೂ ತಾನೇ ಎಳೆದುಕೊಂಡು ಹೋಗುವುದರಲ್ಲಿ ಸತತವಾಗಿ ಫಲವನ್ನು ಕಂಡರು. ಅವರ ಪ್ರಕಾರವಾಗಿ ಸಂಶೋಧನೆ ಎನ್ನುವುದು ಕೇವಲ ಇತಿಹಾಸದ ಶೋಧವಲ್ಲ. ಸುಳ್ಳು ಇತಿಹಾಸವನ್ನು ಮುಂದು ಮಾಡಿಕೊಂಡು ವರ್ತಮಾನವನ್ನು ದುರುಪಯೋಗಮಾಡಿಕೊಳ್ಳುವವ ರೊಂದಿಗೆ ನಡೆಸುವ ಹೋರಾಟವೂ ಆಗಿದೆ. ಅಂದರೆ ಸತ್ಯವೆಂಬ ಭೂತಕಾಲದ ಬಲದಿಂದ ಅಸತ್ಯವೆಂಬ ವರ್ತಮಾನ ಕಾಲವನ್ನು ಸರಿಪಡಿಸುವುದಾಗಿದೆ.

ಧರ್ಮ ಮತ್ತು ಧಾರ್ಮಿಕತೆ, ಅದೇ ರೀತಿಯಾಗಿ ದೇವರು ಮತ್ತು ದೈವಕ್ಕೆ ಸಂಬಂಧಿಸಿದ ಅಂಶಗಳನ್ನು ತಮ್ಮದೇ ಆದ ಸಂಶೋಧನಾ ವಿಧಾನದಿಂದ ಪ್ರಕಟಿಸುವಾಗ ಅದರಲ್ಲೂ ವಿಶೇಷವಾಗಿ ಧಾರ್ಮಿಕ ವಲಯದಲ್ಲಿ ತಮ್ಮ ಆಕರಗಳ ಹಲವು ಆಯಾಮಗಳನ್ನು ದುಡಿಸಿಕೊಂಡು ಪ್ರಮೇಯಗಳನ್ನು ಪ್ರಕಟಿಸುವಾಗ ಕಲಬುರ್ಗಿಯವರು ಒಪ್ಪಿತ ಸತ್ಯ, ಅರ್ಧ ಸತ್ಯ, ಸಂಭಾವ್ಯ ಸತ್ಯ, ವಾಸ್ತವಿಕ ಸತ್ಯ, ಅಂತಿಮ ಸತ್ಯಗಳನ್ನು ತಮ್ಮ ಮುಂದೆ ಹರವಿಕೊಂಡು ಬಿಡಿಸಬೇಕಾದಂತಹ ಸಂಕೀರ್ಣ ಪರಿಣಾಮಗಳನ್ನು ಎದುರಿಸುತ್ತಾರೆ. ಇದು ಅವರ ಪ್ರಶಂಸೆಗೂ, ಮೆಚ್ಚುಗೆಗೂ, ಟೀಕೆಗೂ, ನಿಂದನೆಗೂ, ಅಂತಿಮವಾಗಿ ತೀವ್ರವಾದಂತಹ ಪ್ರತಿಭಟನೆ ಗಳಿಗೂ ಒಳಗಾಗಿದೆ. ಇದು ಒಂದರ್ಥದಲ್ಲಿ ಶೈಕ್ಷಣಿಕ ವಲಯದ ಕ್ರಿಯಾಶೀಲ ಸಂಶೋಧಕನೊಬ್ಬ ತನ್ನ ವ್ಯಾಪ್ತಿಯನ್ನು ಮೀರಿ ಸಾಮಾಜಿಕ ಧಾರ್ಮಿಕ ವಲಯದಲ್ಲಿ ಪರಿಣಾಮವನ್ನುಂಟುಮಾಡುತ್ತಾನೆಂಬ ಘನತೆ ಪ್ರಾಪ್ತವಾಯಿತೆಂಬ ಅಂಶವನ್ನು ಒಳಗೊಳ್ಳುತ್ತದೆ.

ಭಾರತೀಯ ಸಾಮಾಜಿಕ ಸಂಬಂಧವಾಗಲೀ ಧಾರ್ಮಿಕ ನಿಷ್ಠೆಯಾಗಲೀ ಕಲಬುರ್ಗಿಯವರ ಅರಿವಿನಲ್ಲಿ ಇಲ್ಲವೆಂಬುದು ಮೇಲೆ ಹೇಳಿದ ಮಾತಿನ ಅರ್ಥವಲ್ಲ, ಅವರೇ ಒಂದು ಕಡೆ ಹೀಗೆ ಹೇಳಿಕೊಂಡಿದ್ದಾರೆ. "ಭಾರತದಂತಹ ಭಾವನಿಷ್ಠ ರಾಷ್ಟ್ರದಲ್ಲಿ ಸಂಶೋಧನೆಯೆಂಬುದು ಸರಳದಾರಿಯಲ್ಲ. ಕಹಿಸತ್ಯ ಹೇಳಬಾರದೆಂಬ ಸಂಪ್ರದಾಯದ ವಾರಸ್ಸುದಾರರಾದ ಭಾರತೀಯರಿಗೆ ಅಂಥ ಸತ್ಯ ಸಹಜವಾಗಿಯೇ ಸಿಹಿಯೆನ್ನಿಸುವುದಿಲ್ಲ. ಹೀಗಾಗಿ ಈ ರಾಷ್ಟ್ರದಲ್ಲಿ ಸಂಶೋಧಕ ಆಗಾಗ ಸಣ್ಣ ಸಣ್ಣ ಶಿಲುಬೆಗಳನ್ನೇರಬೇಕಾಗುತ್ತದೆ. ಮುಗ್ಧರೊಂದಿಗೆ ಜಾಣರು ಕೆಲವೊಮ್ಮೆ ಇದಕ್ಕೆ ಕೈ ಜೋಡಿಸಿ ಸಂಶೋಧಕನನ್ನು ಅಂದರೆ ಸತ್ಯವನ್ನು ಹಿಂಸಿಸುವಲ್ಲಿ ತೃಪ್ತಿಪಡುತ್ತಾರೆ. ಇಂತಹ ಕಾರಣಗಳಿಂದಲೇ ಅನೇಕ ಭಾರತೀಯ ಸಂಶೋಧಕರು ಅನೇಕ ಅಗ್ನಿಕುಂಡಗಳನ್ನು ದಾಟಲೇಬೇಕಾಗುತ್ತದೆ." ಸಂಶೋಧನೆ ಎಂದರೆ ಸತ್ಯವನ್ನು ಹೇಳಿ ಭೂತಕಾಲದ ಆಗುಹೋಗುಗಳಿಗೆ ವರ್ತಮಾನಕಾಲದಲ್ಲಿ ಪರಿಹಾರವನ್ನು ಸೂಚಿಸುವುದು. ಕಲಬುರ್ಗಿಯವರು ಉನ್ನತ ಮಟ್ಟಕ್ಕೆ ಏರಲು ಕಾರಣವೇನೆಂದರೆ ಅವರ ಕಾಲ ಕೆಳಗಿನ ಬೆಂಕಿಗಿಂತ ಕಣ್ಣಮುಂದಿನ ಬೆಳಕೇ ದೊಡ್ಡದೆಂಬ ನಂಬಿಕೆ. ಸಂಶೋಧನೆಯೆಂಬುದು ಸುಲಭದ ವಿಚಾರವಲ್ಲ ಎಂದು ಮನಗಂಡಿರುವುದರಿಂದಲೇ ಅವರು ಹೇಳುತ್ತಾರೆ: "ಸಂಶೋಧನೆಯೆಂಬುದು ಬಹಳಷ್ಟು ಅಲ್ಪವಿರಾಮ, ಅರ್ಧವಿರಾಮಗಳ ಮೂಲಕ ಪೂರ್ಣವಿರಾಮಕ್ಕೆ ಸಾಗುವ ಕ್ರಿಯೆಯಾಗಿದೆ." ಸಹಜವಾಗಿಯೇ ನಮಗೆ ಗೊತ್ತಿರುವ ಹಾಗೆ ಹೊಸ ಹೊಸ ಆಕರಗಳು ಲಭ್ಯವಾದಂತೆ ಸಂಶೋಧಕನೊಬ್ಬನು ತನ್ನ ಅಭಿಪ್ರಾಯವನ್ನು ತಿದ್ದಿಕೊಳ್ಳಲೇಬೇಕಾಗುತ್ತದೆ. ಸಂಶೋಧಕ ತಪ್ಪು ಹೇಳಿರಬಹುದು, ಸುಳ್ಳು ಹೇಳಿರಲಾರ ಎನ್ನುವುದು ಈ ಅರ್ಥದಲ್ಲಿ. ಸಂಶೋಧನ ಪ್ರಬಂಧಗಳನ್ನು ಬರೆಯುವಾಗ ಈ ಎಲ್ಲಾ ಆದರ್ಶಗಳು ಸಂಶೋಧಕನ ಮನಸ್ಸಿನಲ್ಲಿರುತ್ತವೆ. 'ಜನಮೆಚ್ಚಿ ನಡೆದುಕೊಂಡರೇನುಂಟು ಲೋಕದಿ ಮನಮೆಚ್ಚಿ ನಡೆದುಕೊಂಬುದೇ ಚೆಂದವೂ' ಎಂಬುವುದಂತೂ ನನ್ನನ್ನೂ ಸದಾ ಎಚ್ಚರಿಸುತ್ತಲಿರುತ್ತದೆಂದು ವಿನಯವಾಗಿ ಹೇಳಬಯಸುತ್ತೇನೆ ಎಂಬುದು ಕಲಬುರ್ಗಿಯವರ ಸತ್ಯ ಪ್ರತಿಪಾದನೆ ಮತ್ತು ಅದರ ಪ್ರಕಟಣೆಗೆ ಅನುಭವಿಸಿರುವ ಮಾನಸಿಕ ಎಚ್ಚರಿಕೆಯನ್ನು ಸ್ಪಷ್ಟಪಡಿಸುತ್ತದೆ.

ವಚನಕಾರರ ಬದುಕು ಮತ್ತು ಬೋಧನೆಗಳಿಗೂ ಸಮುದಾಯದ ಬೋಧನೆಗಳಿಗೂ ಸಮುದಾಯದ ಪ್ರಚಲಿತ ವಿಕೃತಗಳಿಗೂ ಇದ್ದ ಅಂತರವನ್ನು ಕುರಿತು ಅವರು ಆಕ್ರೋಶದಿಂದ ಬರೆದರು. ತತ್ವಗಳು ಮತ್ತು ಆಚರಣೆ ನಡುವೆ ಬಹುದೊಡ್ಡ ಅಂತರವನ್ನು ಸೃಷ್ಟಿಸಿದೆ. ನಂತರ ಕಳೆದ ೮೦೦ ವರ್ಷಗಳ ರಾಜ ಸಂಧಾನಗಳನ್ನು ಕಲಬುರ್ಗಿಯವರು ಪ್ರಶ್ನಿಸಿದರು.

ಇತ್ತೀಚಿನ ದಶಕಗಳಲ್ಲಿ ವೀರಶೈವ – ಲಿಂಗಾಯತವೆಂಬ ಪದಗಳು ಒಂದು ಚಳುವಳಿಯ ಭಾಗವೋ ಅಥವಾ ಎರಡು ವಿಭಿನ್ನ ಚಳುವಳಿಗಳೋ ಎಂಬ ವಿಚಾರದಲ್ಲಿ ಭಿನ್ನ ಮತ ಮೂಡಿತ್ತು. ವೀರಶೈವವೆಂಬುದು ಬಸವ ಪೂರ್ವಕಾಲಮಾನಕ್ಕೆ ಸೇರಿದ್ದು. ೧೨ನೇ ಶತಮಾನದಲ್ಲಿ ಬಸವೇಶ್ವರರವರು ಪ್ರಾರಂಭಿಸಿದ ಚಳುವಳಿಗೂ ಇದಕ್ಕೂ ಸಂಬಂಧವಿಲ್ಲ ಎಂಬ ವಾದವನ್ನು ಒಂದು ಗುಂಪು ಮುಂದಿಟ್ಟಿತು. ಕಲಬುರ್ಗಿಯವರು ಈ ಪದಗಳ ಬಳಕೆಯ ಇತಿಹಾಸವನ್ನು ಕುರಿತು ಸಂಶೋಧನೆ ನಡೆಸಿ ಈ ವಿವಾದವೂ ಅಪ್ರಸ್ತುತ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಅವರು ಪ್ರಕಟಿಸಿದ "ಮಾರ್ಗ" ಎಂಬ ಗ್ರಂಥದ ೬ ಸಂಪುಟಗಳ ೬೦೦ ಸಾಂದರ್ಭಿಕ ಲೇಖನಗಳಲ್ಲಿ ಸುಮಾರು ೨೮೦ ಲೇಖನಗಳು, ವಚನಗಳು ಮತ್ತು ಅವು ಪ್ರತಿಪಾದಿಸಿದ ಜೀವನ ಶೈಲಿಯ ವಿಶ್ಲೇಷಣೆಯ ಜೊತೆಗೆ ಈ ವಿಷಯವನ್ನು ಕುರಿತಾದ ಚರ್ಚೆಯು ಅದರಲ್ಲಿ ಒಳಗೊಂಡಿದೆ. ಬೌದ್ಧ, ಜೈನ ಮತ್ತು ಸಿಖ್ ಧರ್ಮಗಳಂತೆಯೇ ವೀರಶೈವ ಧರ್ಮವು ಹಿಂದು ಧರ್ಮದ ಭಾಗವಾಗಿರದೇ ಭಾರತದ ಒಂದು ಸ್ವತಂತ್ರ ಧರ್ಮ ಎಂದು ಕಲಬುರ್ಗಿಯವರು ಪ್ರಬಲವಾಗಿ ವಾದಿಸಿದಾಗಲೂ ವೈದಿಕ ಹಿಂದು ಧರ್ಮದೊಂದಿಗೆ ಅವರು ಎಂದೂ ಸಂಘರ್ಷಕ್ಕೆ ಇಳಿದವರಲ್ಲ. ವೇದಗಳು ಮತ್ತು ಭಗವದ್ಗೀತೆಯನ್ನು ಪ್ರಮಾಣ ಗ್ರಂಥಗಳೆಂದು ಅವರು ಒಪ್ಪಿಕೊಂಡಿರಲಿಲ್ಲ. ವರ್ಣ ವ್ಯವಸ್ಥೆಯನ್ನು ಪುರಸ್ಕರಿಸಲಿಲ್ಲ. ಆಗಮಗಳನ್ನು ಆದರಿಸಲಿಲ್ಲ; ದೇವರು ದೇವಾಲಯಗಳಲ್ಲಿ ಇರುತ್ತಾನೆ ಎಂಬುದನ್ನು ಸಹ ನಂಬಲಿಲ್ಲ, ಕರ್ಮ ಮತ್ತು ಪುನರ್ಜನ್ಮಗಳಲ್ಲಿ ನಂಬಿಕೆ ಇಡಲಿಲ್ಲ, ಎಂಬುದನ್ನು ಅಧ್ಯಯನ ಮಾಡಲು ವಚನಗಳ ಅಧ್ಯಯನದಿಂದ ಸಹಕಾರಿ ಯಾಯಿತು. ಅದೇ ರೀತಿ "ದೇವರ ಅಥವಾ ಪ್ರೇತಗಳ ವಿಗ್ರಹಗಳ ಮೇಲೆ ಮೂತ್ರ ವಿಸರ್ಜನೆ ಮಾಡಿದಾಗಲು ತನಗೆ ಯಾವ ತೊಂದರೆಯೂ ಆಗಲಿಲ್ಲ" ಎಂಬ ಯು. ಆರ್. ಅನಂತಮೂರ್ತಿಯವರ ಹೇಳಿಕೆಯನ್ನು ಬೆಂಬಲಿಸಿದರು. ಇವರ ನಾಲಗೆಯು ಸುಡುವ ನಾಲಿಗೆಯಾದ್ದರಿಂದ ಇವರು ಹಿಂದು ಧರ್ಮದಲ್ಲಿನ ಮೂಢನಂಬಿಕೆಗಳನ್ನು ಜನರ ಮುಂದೆ ಗರ್ಜಿಸುವ ಸಿಂಹದಂತೆ ಹೇಳಿದಾಗ ಅದನ್ನು ತಡೆಯಲು 'ಹಿಂದು ಪರ ಸಂಘಟನೆ'ಗಳು ಮಾಡಿದ ದುಷ್ಕರ್ಮದಿಂದಲೇ ನಮ್ಮ ಸಾಹಿತ್ಯಲೋಕವು ಅವರ ವಿರಹವನ್ನು ಇಂದು ಅನುಭವಿಸುತ್ತಿರುವುದು ಅದೇ ರೀತಿಯಲ್ಲಾಗಿದೆ. ಗೋವಿಂದ ಪಾನ್ಸಾರೆಯವರನ್ನು ಸಹ ದುಷ್ಕರ್ಮಿಗಳು ಇದೇ ಕಾರಣದಿಂದ ನಿಷ್ಠೂರ ಹತ್ಯೆಯನ್ನು ಮಾಡಿದ್ದಾರೆ.

ಇನ್ನು ವಾದ – ವಿವಾದಗಳು ಇದ್ದೇ ಇರುತ್ತವೆ. ಈ ವಾದ ವಿವಾದಗಳಿಂದಲೇ ನಮ್ಮ ನಿಜವಾದ ತಿಳಿವಳಿಕೆ ಹುಟ್ಟಲು ನಮ್ಮ ಸಂಶೋಧನೆ ಬೆಳೆಯಲು ಹಾಗೂ ಸಾಮಾಜಿಕ ನಿರ್ಣಯಗಳನ್ನು ತೆಗೆದುಕೊಳ್ಳಲು ಸಹಾಯಕವಾಗುತ್ತದೆ. ನಾವು ನ್ಯೆಜಾಂಶವನ್ನು ಜನರ ಮುಂದಿಡುವಾಗ ಕಲಬುರ್ಗಿಯವರಂತಹ ಸಾಹಿತಿಗಳು ಕಹಿಯಾದಂತಹ ದಾರಿಯನ್ನು ಹಿಡಿದು ಅದರಲ್ಲಿ ಸಿಹಿಯನ್ನು ಕಂಡುಕೊಳ್ಳುವುದರ ಮೂಲಕ ಮುಂದಿನ ಪೀಳಿಗೆಗೆ ಒಂದು ಆದರ್ಶ ವ್ಯಕ್ತಿಯಾಗಬಹುದೆಂದೆ ಈ ಮೇಲಿನ ಸಾರಾಂಶ.

ಝುಬೈರ್
ಕೊಂಡಂಗೇರಿ, ಮರ್ಕಝ್, ಹಿದಾಯ ವಿದ್ಯಾಸಂಸ್ಥೆ, ಕೊಟ್ಟಮುಡಿ, ಕೊಡಗು – ೫೭೧ ೨೧೪



ಮಾರ್ಕ್ಸ್ ಹೇಳಿರುವಂತೆ, "ಮತಧರ್ಮವು ಮುಗ್ಧ ಜನತೆಯ ಅಫೀಮು." ಸಿನಿಕತನದಿಂದ ಕೂಡಿದ ಇಂತಹ ಸಾಮಾಜಿಕ ರಾಜಕೀಯ ಪರಿಸ್ಥಿತಿಯಿಂದಾಗಿ ಡೇರಾಗಳು ರಾಜಕೀಯವಾಗಿ ಲಾಭ ಪಡೆದು ಎಸ್‌ಎ ಡಿ - ಬಿಜೆಪಿ ಅಥವಾ ಕಾಂಗ್ರೆಸ್ ಪಕ್ಷಗಳಿಗೆ ಸವಾಲೊಡ್ಡುತ್ತಿವೆ. ಇತ್ತೀಚೆಗೆ ಹರಿಯಾಣದ ಬಿಜೆಪಿ ಸರ್ಕಾರ ಡೇರಾ ಸಚ್ಚಾ ಸೌದಾಗೆ ೫೧ ಲಕ್ಷ ರೂ.ಗಳ ದೇಣಿಗೆ ನೀಡಿರುವುದು ದಿವಾಳಿಯೆದ್ದಿರುವ ನಮ್ಮ ಅರ್ಥಹೀನ ರಾಜಕೀಯ ವ್ಯವಸ್ಥೆಗೆ ಕೇವಲ ಒಂದು ಸಣ್ಣ ಉದಾಹರಣೆಯಷ್ಟೆ. ಈ ಮೂಲಕ ಆ ರಾಜ್ಯದ ಪ್ರಭುತ್ವವು ತಾನು ನಿರ್ವಹಿಸಬೇಕಾದ ಜವಾಬ್ದಾರಿಗಳನ್ನು ದೇವಮಾನವರ ಕೈಗಿತ್ತು ಕೈ ತೊಳೆದುಕೊಂಡುಬಿಟ್ಟಿದೆ. ಜನಸಾಮಾನ್ಯರ ದಿನನಿತ್ಯದ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಅವನ್ನು ನಿವಾರಿಸುವ ದಿಶೆಯಲ್ಲಿ ಹೋರಾಟಗಳನ್ನು ಸಂಘಟಿಸುವ ಬದಲು ಬಿಜೆಪಿಯಂತಹ ಪಕ್ಷಗಳು ರಾಜಕೀಯವಾಗಿ ಲಾಭ ಗಳಿಸುವ ಸಲುವಾಗಿ ಅಂತಹ ದೇವಮಾನವರೊಂದಿಗೆ ಶಾಮೀಲಾಗುತ್ತವೆ. ಇಂತಹ ಅಹಿತಕರ ಬೆಳವಣಿಗೆಗಳು ದಿವಾಳಿಯೆದ್ದಿರುವ ಕೆಲವು ರಾಜಕೀಯ ಪಕ್ಷಗಳ ಸಮಯ ಸಾಧಕತನವನ್ನು ಎತ್ತಿ ತೋರಿಸುತ್ತವೆ.

# ಡೇರಾಗಳ ರಾಜಕೀಯ ಆರ್ಥಿಕತೆ

ಹರಿಯಾಣದಲ್ಲಿರುವ ಡೇರಾ ಸಚ್ಚಾ ಸೌದಾದ ಮುಖ್ಯಸ್ಥ ಬಾಬಾ ಗುರ್ಮೀತ್ ಸಿಂಗ್‌ಅನ್ನು ಅಪರಾಧಿ ಎಂದು ಘೋಷಿಸಿದ ಹಿನ್ನೆಲೆಯಲ್ಲಿ ವ್ಯಾಪಕವಾದ ಹಿಂಸಾಚಾರ ಸಂಭವಿಸಿತು. ಇದು ಇತ್ತೀಚೆಗೆ ತಾನೆ ನಡೆದ ಘಟನೆ. ಸಾರ್ವಜನಿಕ ಆಸ್ತಿಪಾಸ್ತಿಗಳನ್ನು ನಾಶಗೊಳಿಸಲಾಯಿತು. ಹಲವಾರು ಮುಗ್ಧ ಜನರು ಸಾವಿಗೀಡಾದರು. ಸಹಜವಾಗಿಯೇ ಈ ಸಮಾಜಘಾತುಕ ಕೃತ್ಯಗಳನ್ನು ಮಾಧ್ಯಮಗಳು ಖಂಡಿಸಿವೆ, ನಿಜ. ಆದರೆ ಈ ಬಾಬಾಗೆ ಯಾಕೆ ಅಷ್ಟೊಂದು ಮಂದಿ ಜನಸಾಮಾನ್ಯರ ಬೆಂಬಲವಿದೆ ಎಂಬುದರ ಕುರಿತು ವಿಶ್ಲೇಷಿಸುವಲ್ಲಿ ಮಾಧ್ಯಮಗಳು ಸೋತಿವೆ ಎಂದೆನಿಸುತ್ತದೆ. ಅಲ್ಲದೆ, ಅಂತಹ ಬೆಂಬಲಿಗರಿಗೆಲ್ಲ ಸಾರಾಸಗಟಾಗಿ ಬಾಬಾನ ಅಂಧಾಭಿಮಾನಿಗಳೆಂಬ ಹಣೆಪಟ್ಟಿ ಕಟ್ಟುವುದು ಎಷ್ಟು ಸರಿ ಎಂಬ ಪ್ರಶ್ನೆಯೂ ಎದುರಾಗುತ್ತದೆ. ಇಲ್ಲದ ಭಕ್ತಿಯಿಂದ ಆರಾಧಿಸುವ ಭಕ್ತರಿರುವುದರಿಂದಾಗಿಯೇ ಇಂತಹ ಬಾಬಾಗಳು ತಲೆಯೆತ್ತುತ್ತಾರೆ; ಮತ್ತು ಈ ಮುಗ್ಧ ಜನಸಮೂಹ "ಸುಭದ್ರವಾದ ವೋಟ್ ಬ್ಯಾಂಕ್" ಆಗಿಬಿಡುತ್ತಾರೆ; ಪರಿಣಾಮವಾಗಿ, ಸಹಜವಾಗಿಯೇ ಆಡಳಿತ ವರ್ಗಗಳು ಸ್ವಾರ್ಥ ದೃಷ್ಟಿಯಿಂದ ರಾಜಕೀಯವಾಗಿ ತಮ್ಮ ಬೇಳೆ ಬೇಯಿಸಿಕೊಳ್ಳಲು ಇಂತಹ ಜನರ ಪೋಷಣೆಗೆ ಮುಂದಾಗುತ್ತವೆ ಎಂದು ವಿಮರ್ಶಿಸುವುದಲ್ಲದೆ ಈ ದೇವಮಾನವರು ಅಪಾರ ಜನಪ್ರಿಯತೆ ಗಳಿಸಲು ಇಂತಹ ಭಕ್ತವೃಂದಗಳೇ ಕಾರಣ ಎಂದು ದೂಷಿಸುವ ಮಟ್ಟಕ್ಕೆ ಹೋಗಿವೆ ಅನೇಕ ಟಿ. ವಿ. ಚಾನಲ್ಲುಗಳು. ಟಿ. ವಿ. ಚಾನಲ್ಲುಗಳ ಈ ದೃಷ್ಟಿಕೋನ ಅತಿರೇಕವಾಗಿರುವುದಲ್ಲದೆ ಅತ್ಯಂತ ಸಂಕುಚಿತ ಮನೋಭಾವದಿಂದಲೂ ಕೂಡಿದೆ ಮತ್ತು ಅಂತಹ ದೇವಮಾನವರು ಸದಾಕಾಲ ಇರುತ್ತಾರೆ ಎಂಬ ಅವುಗಳ ಅತಾರ್ಕಿಕ ನಿಲುವು ಅರ್ಥಹೀನ ವಾದುದು. ಇವೆಲ್ಲವುಗಳನ್ನು ಕುರಿತು ವಿಮರ್ಶಿಸುವ ಮುನ್ನ ಕೆಲವು ವಾಸ್ತವಾಂಶಗಳತ್ತ ದೃಷ್ಟಿ ಹರಿಸೋಣ.

ಅದೇನೇ ಇರಲಿ, ಇಲ್ಲಿ ಒಂದು ಅಂಶವನ್ನಂತೂ ಸ್ಪಷ್ಟಪಡಿಸಬೇಕಿದೆ. ಅದೇಂದರೆ, ಈ ಲೇಖನ ಉದ್ದೇಶ ಅಲ್ಲಿನ ಎಲ್ಲ ಡೇರಾಗಳು ಹಾಗೂ ದೇವಮಾನವರು ಪರಿಶುದ್ಧ; ಅಲ್ಲದೆ, ಯಾವುದೇ ಹೀನಕೃತ್ಯಗಳಲ್ಲಿ ತೊಡಗುವುದೇ ಇಲ್ಲ ಎಂದು ಹೇಳುವುದಕ್ಕಲ್ಲ. ಒಟ್ಟಾರೆ ಯಾಗಿ, ನಮ್ಮ ಸಮಾಜದಲ್ಲಿರುವ ಸಾಮಾಜಿಕ–ಆರ್ಥಿಕ ಸ್ಥಿತಿಗತಿಗಳು ಅಂತಹ ದೇವಮಾನವರು, ಪಂಥಗಳು ತಮ್ಮದೇ ಆದ ಭಕ್ತವೃಂದಗಳನ್ನು ಸೃಷ್ಟಿಸಿ ಕೊಳ್ಳಲು ಹೇಗೆ ಕಾರಣವಾಗುತ್ತವೆ ಎಂಬುದನ್ನು ಓದುಗರ ಗಮನಕ್ಕೆ ತರಲು ಪ್ರಯತ್ನಿಸಿದ್ದೇನೆ. ಹೀಗೆ ತಾರ್ಕಿಕವಾಗಿ ಅಲ್ಲಿನ ಆಗುಹೋಗುಗಳನ್ನು ವಿಶ್ಲೇಷಿಸು ವುದರ ಮೂಲಕ ಇಂತಹ ಸಮಸ್ಯೆಗಳನ್ನು ಎದುರಿಸಲು ಸಾಧ್ಯವಾಗುತ್ತದೆ. ಇಲ್ಲದಿದ್ದರೆ ಈ ಬಗೆಯ ಸಾಮಾಜಿಕ ಅನಿಷ್ಟಗಳು ತಲೆಯೆತ್ತಲು ಮೂಲ ಕಾರಣಗಳೇನು ಎಂಬುದನ್ನು ಕಂಡುಹಿಡಿಯುವ ಬದಲು ಅವುಗಳ ಮೇಲ್ಮೈ ಲಕ್ಷಣಗಳ ಬಗ್ಗೆ ಮಾತ್ರ ಚರ್ಚಿಸುತ್ತಲೇ ಇರಬೇಕಾಗುತ್ತದೆ.

**ಸತ್ಯಾನಂದ ಎಂ.**

ಡೇರಾ ಸಚ್ಚಾ ಸೌದಾ ಮತ್ತಿತರ ಡೇರಾಗಳು ಅಪಾರ ಸಂಖ್ಯೆಯ ದಲಿತ ಅನುಯಾಯಿಗಳನ್ನು ಹೊಂದಿವೆ. ಭಾರತದ ಎಲ್ಲ ರಾಜ್ಯಗಳ ಪೈಕಿ ಅತಿ ಹೆಚ್ಚಿನ ಸಂಖ್ಯೆಯ ದಲಿತರಿರುವುದು ಪಂಜಾಬಿನಲ್ಲಿ. ಆ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೩೨ರಷ್ಟು ಮಂದಿ ದಲಿತರಿದ್ದಾರೆ. ಸಿಖ್ ಧರ್ಮ ಸಮಾನತೆಯನ್ನು ಪ್ರತಿಪಾದಿಸುತ್ತದೆ. ಅಲ್ಲದೆ, ಜಾತಿಯ ಆಧಾರದ ಮೇಲೆ ಯಾವುದೇ ರೀತಿಯ ತಾರತಮ್ಯ ತೋರುವುದನ್ನು ಕಟ್ಟುನಿಟ್ಟಾಗಿ ನಿಷೇಧಿಸುತ್ತದೆ. ಆದರೆ ವಾಸ್ತವಾಂಶ ಸಿಖ್ ಧರ್ಮದ ಮೂಲ ಆಶಯಗಳಿಗೆ ತದ್ವಿರುದ್ಧವಾಗಿದೆ. ಎಲ್ಲೆಡೆ ತಾರತಮ್ಯ ಮನೋಭಾವ ಆಚರಣೆಯಲ್ಲಿರುವುದು ಕಣ್ಣಿಗೆ ರಾಚುವಂತಿದೆ. ಗುರುದ್ವಾರಗಳು ಮತ್ತು ಸ್ಮಶಾನಗಳಂತಹ ಸ್ಥಳಗಳಲ್ಲಂತೂ ದಲಿತರು ಹಾಗೂ ಜಾಟ್ ಸಿಖ್ ಸಮುದಾಯಗಳ ನಡುವೆ ಇರುವ ಭೇದಭಾವ ಅಲ್ಲಿನ ದಿನನಿತ್ಯದ ಸಂಗತಿ. ಮುಂಚಿ ನಿಂದಲೂ ಜಾಟ್ ಸಿಖ್ಖರ ಭದ್ರಕೋಟೆಗಳಂತಿರುವ ಕೆಲವು ಗುರುದ್ವಾರಗಳೊಳಗೆ ಪ್ರವೇಶಿಸಲು ದಲಿತ ಸಿಖ್ಖರು ಪ್ರಯತ್ನಿಸಿದ ಹಲವಾರು ಸಂದರ್ಭಗಳಲ್ಲಿ ಹಿಂಸಾತ್ಮಕ ಕೃತ್ಯಗಳು ಜರುಗಿವೆಯೆಂದು ವರದಿ ಯಾಗಿದೆ. ೨೦೦೯ರಲ್ಲಿ, ರವಿದಾಸ್ಸಿಯ ಪಂಥದ ಬಹುತೇಕ ಮಂದಿ ಅನುಯಾಯಿಗಳನ್ನು ಹೊಂದಿದ್ದ, ಸಚ್‌ಖಂಡ್ ಬಲ್ಲನ್‌ನ ಉಪಮುಖ್ಯಸ್ಥರಾಗಿದ್ದ ಸಂತ

ರಮಾನಂದರ ಕೊಲೆಯಾದಾಗಲೂ ದಲಿತರು ಮತ್ತು ಜಾಟ್ ಸಿಖ್ಖರ ನಡುವೆ ಘಟಿಸಿದ ಸಂಘರ್ಷದಲ್ಲಿ ವ್ಯಾಪಕವಾದ ಹಿಂಸಾಚಾರ ನಡೆಯಿತು. ಸಂಘಟಿತ ಸಿಖ್ ಧರ್ಮದ ಭಾಗವಾಗಿರುವ ದಲಿತರು ಮತ್ತು ಜಾಟ್ ಸಿಖ್ಖರ ನಡುವಣ ಪರಸ್ಪರ ತಿಕ್ಕಾಟ, ಉದ್ವಿಗ್ನತೆ ಇಂದು ನಿನ್ನೆಯದಲ್ಲ. ಸಮಾಜದ ಹಲವಾರು ಕ್ಷೇತ್ರಗಳಲ್ಲಿ ಸಂಪೂರ್ಣ ಹತೋಟಿ ಹೊಂದಿರುವ ಜಾಟ್ ಸಿಖ್ಖರು, ಆ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ. ೨೩ರಷ್ಟಿದ್ದರೂ ಶ್ರೀ ಗುರುದ್ವಾರ ಪ್ರಬಂಧಕ್ ಸಮಿತಿಯ ಪದಾಧಿಕಾರಿಗಳ ಸಂಖ್ಯೆಯಲ್ಲಿ ಶೇ. ೭೦ ರಷ್ಟಿದ್ದಾರೆ. ಶ್ರಮಿಕರು ಮತ್ತು ಭೂಮಾಲೀಕ ಸಮುದಾಯಗಳ ನಡುವೆ ಮುಂಚಿನಿಂದಲೂ ಇದ್ದ ಆರ್ಥಿಕ ಅಸಮಾನತೆಯನ್ನು ಹಸಿರುಕ್ರಾಂತಿ ಮತ್ತಷ್ಟು ಉಲ್ಬಣಗೊಳಿಸಿತು. ಸಾಮಾಜಿಕ ತಾರತಮ್ಯ ಮತ್ತು ಪಕ್ಷಪಾತಗಳಿಗೆ ಬಲಿಯಾಗಿರುವ, ಪಂಜಾಬಿನ ಒಟ್ಟು ಸಂಖ್ಯೆಯ ಶೇ. ೩೨ರಷ್ಟಿರುವ ದಲಿತರು ಕೇವಲ ಶೇ. ೨ರಷ್ಟು ಭೂಮಾಲೀಕತ್ವ ಹೊಂದಿದ್ದಾರೆ. ಸಾಂಪ್ರದಾಯಿಕವಾಗಿ ಜಾಟ್ ಸಿಖ್ಖರೇ ಬಹುಪಾಲು ಭೂಮಿಯ ಒಡೆತನ ಹೊಂದಿದ್ದಾರೆ. ಆದ್ದರಿಂದಲೇ ಹಸಿರುಕ್ರಾಂತಿ ಯಿಂದಾಗಿ ಹರಿದುಬಂದ ಅಭಿವೃದ್ಧಿಯ ಹೆಚ್ಚಿನ ಪಾಲನ್ನು ತಮ್ಮದಾಗಿಸಿಕೊಂಡಿದ್ದಾರೆ. ಆ ರಾಜ್ಯದ ಪ್ರಮುಖ ರಾಜಕೀಯ ಪಕ್ಷಗಳಾದ ಕಾಂಗ್ರೆಸ್ ಮತ್ತು ಎಸ್‌ಎಡಿ ದಲಿತರ ಸಮಸ್ಯೆಗಳನ್ನು ಗಂಭೀರವಾಗಿ ಪರಿಗಣಿಸದೆ ನಾಟಕೀಯವಾಗಿ ಅನುಕಂಪ ವ್ಯಕ್ತಪಡಿಸುತ್ತಲೇ ಆ ಸಮುದಾಯದವರು ಯಾವುದೇ ರೀತಿಯಲ್ಲಿ ರಾಜಕೀಯ ಕ್ಷೇತ್ರಗಳಲ್ಲಿ ಪ್ರಮುಖ ಸ್ಥಾನಗಳನ್ನು ಪಡೆಯದಂತೆ ಸಂಚುಹೂಡಿ, ಅವರನ್ನು ಮೂಲೆಗುಂಪು ಮಾಡಿದ್ದಾರೆ. ಜೊತೆಗೆ, ನವ ಉದಾರೀಕರಣ ನೀತಿಗಳನ್ನು ಜಾರಿಗೆ ತಂದಮೇಲಂತೂ ಈಗಾಗಲೇ ತುಳಿತಕ್ಕೊಳಗಾಗಿರುವ ಈ ಸಮುದಾಯದವರ ಪರಿಸ್ಥಿತಿ ಮತ್ತಷ್ಟು ಹದಗೆಟ್ಟಿದೆ. ಕಳೆದ ೨೫ – ೩೦ ವರ್ಷಗಳ ಅವಧಿಯಲ್ಲಿ ರಾಜ್ಯ ಸರ್ಕಾರವು ಶಿಕ್ಷಣ, ಆರೋಗ್ಯ ಮತ್ತು ಸಾಮಾಜಿಕ ಕ್ಷೇಮಾಭಿವೃದ್ಧಿ ಕ್ಷೇತ್ರಗಳಿಂದ ಕ್ರಮೇಣ ದೂರ ಸರಿಯುತ್ತಿದೆ. ಪ್ರಜಾಕಲ್ಯಾಣ ರಾಜ್ಯ ಎಂಬುದೇ ಅರ್ಥ ಕಳೆದುಕೊಳ್ಳುತ್ತಿರುವ ಇಂದಿನ ಸಂದರ್ಭದಲ್ಲಿ ಹಿಂದುಳಿದ ಜನವಿಭಾಗಗಳ ಪರಿಸ್ಥಿತಿ ದುರಂತಮಯವಾಗುತ್ತಿದೆ. ಕಳೆದ ೨ ದಶಕಗಳ ಅವಧಿಯು ಆಗಾಗ್ಗೆ ಸಂಭವಿಸುವ ಕೃಷಿ ಬಿಕ್ಕಟ್ಟುಗಳು, ನಿರುದ್ಯೋಗ ಮತ್ತು ಉದ್ಯೋಗ ಸೃಷ್ಟಿ ಅನೌಪಚಾರಿಕವಾಗುತ್ತಿರುವುದಕ್ಕೆ ಸಾಕ್ಷಿಯಾಗಿದೆ. ಆರ್ಥಿಕತೆಯಲ್ಲಾಗುತ್ತಿರುವ ರಾಚನಿಕ ಬದಲಾವಣೆಗಳು ಶಿಕ್ಷಣ ಮತ್ತು ಆರೋಗ್ಯ ಕ್ಷೇತ್ರಗಳು ಮತ್ತಷ್ಟು ಖಾಸಗೀಕರಣ ಪ್ರಕ್ರಿಯೆಗೆ ಒಳಗಾಗಲು ಎಡೆಮಾಡಿಕೊಟ್ಟಿವೆ. ಇಡೀ ದೇಶದಲ್ಲಿ ಸಾರ್ವಜನಿಕ ಶಿಕ್ಷಣ ಮತ್ತು ಆರೋಗ್ಯ ಕ್ಷೇತ್ರಗಳು ತೀವ್ರ ಅನಾದರಕ್ಕೆ ಗುರಿಯಾಗು ತ್ತಿರುವುದು ಆತಂಕದ ಸಂಗತಿ. ಇವೆಲ್ಲದರ ಹಿನ್ನೆಲೆಯಲ್ಲಿ ಪಂಜಾಬಿನ ಮಾಲ್ವ ಪ್ರಾಂತದ ಸಾಕಷ್ಟು ಮಂದಿ ದಲಿತ ಸಿಖ್ಖರು ಜೀವನೋಪಾಯಕ್ಕಾಗಿ ಹೊರದೇಶ ಗಳಿಗೆ ವಲಸೆಹೋಗುತ್ತಿರುವ ಪರಿಸ್ಥಿತಿ ಉಂಟಾಗಿದೆ. ಅದೇ ವೇಳೆ ಈಗೀಗ ತಾನೆ ಹೊಸಬಾಳು ಕಂಡುಕೊಳ್ಳುತ್ತಿರುವ, ಶ್ರೀಮಂತಿಕೆಯ ಹಂತ ತಲುಪುತ್ತಿರುವ ದಲಿತ ಸಿಖ್ಖರು ಮತ್ತು ಭೂಮಾಲೀಕರಾದ ಜಾಟ್ ಸಿಖ್ಖರ ನಡುವೆ ಹೊಸ ಸ್ವರೂಪದ ಸಂಘರ್ಷಗಳು ಸಂಭವಿಸುತ್ತಿವೆ. ಕಾಂಗ್ರೆಸ್, ಎಸ್‌ಎಡಿ – ಬಿಜೆಪಿ ಪಕ್ಷಗಳಿಗೆ ಪರ್ಯಾಯವೇ ಇಲ್ಲದಿರುವಂತಹ ಪಂಜಾಬಿನಲ್ಲಿ ಯಾವುದೇ ಭೇದಭಾವಗಳು ಆಚರಣೆಯಲ್ಲದಿರುವ ಡೇರಾಗಳಿಗೆ ಮೊರೆಹೋಗುವುದನ್ನು ಹೊರತುಪಡಿಸಿದಂತೆ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದಿರುವ ಸಮುದಾಯಗಳಿಗೆ ಬೇರೆ ಯಾವ ಪರ್ಯಾಯವೂ ಇಲ್ಲ. ಎಂದೇ "ಇನ್ಸಾನ್" ಎಂಬ ಉಪನಾಮ ದಲಿತರು ಯಾವುದೇ ಸಾಮಾಜಿಕ ಬಹಿಷ್ಕಾರ, ತಾರತಮ್ಯಗಳಿಲ್ಲದ, ಜಾತಿ ಆಧಾರಿತ




ಭೇದಭಾವವಿಲ್ಲದ ಮತ್ತು ಪ್ರತಿಯೊಬ್ಬರನ್ನೂ ಸಮಾನರಂತೆ ಕಾಣುವ ಲೋಕವೊಂದಿದೆ ಎಂಬ ಭರವಸೆ ಹೊಂದಲು ಕಾರಣವಾಗಿದೆ. ತಮ್ಮ ಎಲ್ಲ ನಿಷ್ಠಾವಂತರಿಗೂ ಡೇರಾಗಳು ಅತಿಕಡಿಮೆ ದರದಲ್ಲಿ ಇಲ್ಲವೇ ಪುಕ್ಕಟೆಯಾಗಿ ಆರೋಗ್ಯ ತಪಾಸಣೆ, ಚಿಕಿತ್ಸೆ ಮತ್ತು ಶಿಕ್ಷಣವನ್ನು ಒದಗಿಸುತ್ತವೆ. ಆದರಿಂದಲೇ ಅವುಗಳ ಅನುಯಾಯಿಗಳು ಡೇರಾಗಳಿಗೆ ನಿಷ್ಠೆಯಿಂದ ನಡೆದುಕೊಳ್ಳುತ್ತಾರೆ. ಆದರೆ ಅದನ್ನು ಅಂಧಾಭಿಮಾನ ಎಂದು ಜರಿಯುವುದರಲ್ಲಿ ಅರ್ಥವಿಲ್ಲ. ಅದು ನಿಜಕ್ಕೂ ತರ್ಕಬದ್ಧವಾಗಿದೆ ಮತ್ತು ಕಾಂಗ್ರೆಸ್, ಎಸ್‌ಎ ಡಿ – ಬಿಜೆಪಿ ಪಕ್ಷಗಳಿಗೆ ಪರ್ಯಾಯವೇ ಇಲ್ಲದಿರುವಂತಹ ಪಂಜಾಬಿನಲ್ಲಿ ಯಾವುದೇ ಸಾಮಾಜಿಕ ಭೇದಭಾವಗಳ ಆಚರಣೆ ಇಲ್ಲದಿರುವ ಡೇರಾಗಳಿಗೆ ಮೊರೆಹೋಗುವುದು ಬಿಟ್ಟು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದಿರುವ ಸಮುದಾಯಗಳಿಗೆ ಬೇರಾವ ಪರ್ಯಾವೂ ಇಲ್ಲ. ಎಂದೇ "ಇನ್ಸಾನ್" ಎಂಬ ಉಪನಾಮ ಅವರಲ್ಲಿ ಯಾವುದೇ ಸಾಮಾಜಿಕ ಬಹಿಷ್ಕಾರ, ತಾರತಮ್ಯಗಳಿಲ್ಲದ, ಜಾತಿ ಆಧಾರಿತ ಭೇದಭಾವವಿಲ್ಲದ ಮತ್ತು ಪ್ರತಿಯೊಬ್ಬರನ್ನೂ ಸಮಾನರಂತೆ ಕಾಣುವ ಲೋಕವೊಂದಿದೆ ಎಂಬ ಭರವಸೆ ಹೊಂದಲು ಕಾರಣವಾಗಿದೆ. ಡೇರಾಗಳು ಎಲ್ಲ ನಿಷ್ಠಾವಂತರಿಗೂ ಅತಿಕಡಿಮೆ ದರದಲ್ಲಿ ಅಥವಾ ಇಲ್ಲವೇ ಪುಕ್ಕಟೆಯಾಗಿ ಆರೋಗ್ಯ ತಪಾಸಣೆ, ಚಿಕಿತ್ಸೆ ಮತ್ತು ಶಿಕ್ಷಣ ನೀಡುವ ವ್ಯವಸ್ಥೆಯನ್ನು ಹೊಂದಿವೆ. ಆದ್ದರಿಂದ ಅವುಗಳ ಅನುಯಾಯಿಗಳು ತೋರುವ ನಿಷ್ಠೆಯನ್ನು ಅಂಧಾಭಿಮಾನ ಎಂದು ಜರಿಯುವುದರಲ್ಲಿ ಅರ್ಥವಿಲ್ಲ. ಅದು ನಿಜಕ್ಕೂ ತರ್ಕಬದ್ಧವಾಗಿದೆ ಮತ್ತು ಅದಕ್ಕೆ ನಮ್ಮೀ ಸಮಾಜದ ಪ್ರಸ್ತುತ ಸಾಮಾಜಿಕ – ಆರ್ಥಿಕ ವಾಸ್ತವಾಂಶಗಳ ಹಿನ್ನೆಲೆಯಿದೆ. ಸಂಘಟಿತ ಮತಧರ್ಮ ಮತ್ತು ಪ್ರಭುತ್ವ ತಮ್ಮ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸುವಲ್ಲಿ ಸಂಪೂರ್ಣವಾಗಿ ಸೋತಿವೆ. ಅದಕ್ಕೆ ನಮ್ಮೀ ಸಮಾಜದ ಪ್ರಸ್ತುತ ಸಾಮಾಜಿಕ – ಆರ್ಥಿಕ ವಾಸ್ತವಾಂಶಗಳ ಹಿನ್ನೆಲೆಯಿದೆ. ಸಂಘಟಿತ ಮತಧರ್ಮ ಮತ್ತು ಪ್ರಭುತ್ವ ತಮ್ಮ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸುವಲ್ಲಿ ಸಂಪೂರ್ಣವಾಗಿ ವಿಫಲಗೊಂಡಿವೆ. ಅದರ ಪರಿಣಾಮವಾಗಿ ಉಂಟಾಗಿರುವ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳು ಡೇರಾಗಳು ಪ್ರಾಮುಖ್ಯತೆ ಪಡೆಯಲು ಎಡೆಮಾಡಿಕೊಟ್ಟಿವೆ. ಮಾರ್ಕ್ಸ್ ಹೇಳಿರುವಂತೆ, "ಮತಧರ್ಮವು ಮುಗ್ಧ ಜನತೆಯ ಅಫೀಮು." ಸಿನಿಕತನದಿಂದ ಕೂಡಿದ ಇಂತಹ ಸಾಮಾಜಿಕ ರಾಜಕೀಯ ಪರಿಸ್ಥಿತಿಯಿಂದಾಗಿ ಡೇರಾಗಳು ರಾಜಕೀಯವಾಗಿ ಲಾಭ ಪಡೆದು ಎಸ್‌ಎ ಡಿ – ಬಿಜೆಪಿ ಅಥವಾ ಕಾಂಗ್ರೆಸ್ ಪಕ್ಷಗಳಿಗೆ ಸವಾಲೊಡ್ಡುತ್ತಿವೆ. ಇತ್ತೀಚೆಗೆ ಹರಿಯಾಣದ ಬಿಜೆಪಿ ಸರ್ಕಾರ ಡೇರಾ ಸಚ್ಚಾ ಸೌದಾಗೆ ೫೧ ಲಕ್ಷ ರೂ.ಗಳ ದೇಣಿಗೆ ನೀಡಿರುವುದು ದಿವಾಳಿಯೆದ್ದಿರುವ ನಮ್ಮ ಅರ್ಥಹೀನ ರಾಜಕೀಯ ವ್ಯವಸ್ಥೆಗೆ ಕೇವಲ ಒಂದು ಸಣ್ಣ ಉದಾಹರಣೆಯಷ್ಟೆ. ಈ ಮೂಲಕ ಆ ರಾಜ್ಯದ ಪ್ರಭುತ್ವವು ತಾನು ನಿರ್ವಹಿಸ ಬೇಕಾದ ಜವಾಬ್ದಾರಿಗಳನ್ನು ದೇವಮಾನವರ ಕೈಗಿತ್ತು ಕೈ ತೊಳೆದುಕೊಂಡು ಬಿಟ್ಟಿದೆ. ಜನಸಾಮಾನ್ಯರ ದಿನನಿತ್ಯದ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಅವನ್ನು ನಿವಾರಿಸುವ ದಿಶೆಯಲ್ಲಿ ಹೋರಾಟಗಳನ್ನು ಸಂಘಟಿಸುವ ಬದಲು ಬಿಜೆಪಿಯಂತಹ ಪಕ್ಷಗಳು ರಾಜಕೀಯವಾಗಿ ಲಾಭ ಗಳಿಸುವ ಸಲುವಾಗಿ ಅಂತಹ ದೇವಮಾನವರೊಂದಿಗೆ ಶಾಮೀಲಾಗುತ್ತವೆ. ಇಂತಹ ಅಹಿತಕರ ಬೆಳವಣಿಗೆಗಳು ದಿವಾಳಿಯೆದ್ದಿರುವ ಕೆಲವು ರಾಜಕೀಯ ಪಕ್ಷಗಳ ಸಮಯ ಸಾಧಕತನವನ್ನು ಎತ್ತಿ ತೋರಿಸುತ್ತವೆ.

**ಸತ್ಯಾನಂದ ಎಂ.**
ಎಸ್. ಎಫ್–೧, ಸೌತ್‌ಎಂಡ್ ಸಂಪೂರ್ಣ, ಮಾಡಲ್ ಹೌಸ್ ರಸ್ತೆ, ಬಸವನಗುಡಿ, ಬೆಂ–೪

# ತ್ರಿವಳಿ ತಲಾಕ್ ಇನ್ನಿಲ್ಲ
## ಸುಪ್ರೀಮ್‌ನ ಐತಿಹಾಸಿಕ ತೀರ್ಪು

**ಎಂ. ಅಬ್ದುಲ್ ರೆಹಮಾನ್ ಪಾಷ**

ಆಗಸ್ಟ್ ೨೨ಕ್ಕೆ ಭಾರತದಲ್ಲಿ ನಿಷೇಧಿತವಾದ ತ್ರಿವಳಿ ತಲಾಕ್ ಹೆಚ್ಚಿನ ಇಸ್ಲಾಮೀ ರಾಷ್ಟ್ರಗಳಲ್ಲಿಯೇ ರದ್ದುಪಡಿಸಲಾಗಿದೆ. ಒಂದೇ ಉಸಿರಿನಲ್ಲಿ ನೇರವಾಗಿ ತ್ರಿವಳಿ ತಲಾಕ್ ನೀಡುವ ಪದ್ಧತಿಗೆ ಮೊದಲಿಗೆ (೧೯೨೯ರಲ್ಲಿ) ಕೊನೆ ಹಾಡಿದ ರಾಷ್ಟ್ರ, ಶೇಕಡಾ ೯೦ಕ್ಕಿಂತಲೂ ಹೆಚ್ಚು ಮುಸ್ಲಿಮರಿರುವ ಈಜಿಪ್ಟ್. ಅದರಿಂದೀಚೆ ತ್ರಿವಳಿ ತಲಾಕ್ ಪದ್ಧತಿಯನ್ನು ನಿರ್ಬಂಧಿಸಿದ ಮುಸ್ಲಿಮ್ ರಾಷ್ಟ್ರಗಳು ಮತ್ತು ಮುಸ್ಲಿಮರು ಸಾಕಷ್ಟು ಸಂಖ್ಯೆಯಲ್ಲಿರುವ ರಾಷ್ಟ್ರಗಳು ಎಂದರೆ ಅಫ್ಘಾನಿಸ್ತಾನ್, ಟರ್ಕಿ, ಇರಾಕ್, ಇರಾನ್, ಅರಬ್ ಸಂಯುಕ್ತ ಒಕ್ಕೂಟ, ಕುವೈತ್, ಪಾಕಿಸ್ತಾನ, ಬಾಂಗ್ಲಾ ದೇಶ, ಶ್ರೀಲಂಕಾ, ಮಲೇಶ್ಯಾ, ಟ್ಯುನೀಶಿಯಾ, ಸಿರಿಯಾ, ಸೈಪ್ರಸ್, ಮೊರಾಕ್ಕೊ, ಕತಾರ್, ಅಲ್ಜೀರಿಯಾ, ಬ್ರೂನೆ, ಜೋರ್ಡಾನ್, ಲಿಬಿಯಾ, ಯೆಮನ್, ಇಂಡೋನೇಷ್ಯಾ. ಈಗ ೨೩ನೇ ರಾಷ್ಟ್ರವಾಗಿ ಭಾರತ.




ಆಗಸ್ಟ್ ೨೨ರ ಬೆಳಿಗ್ಗೆ ೧೦:೩೦ರ ಸಮಯ. ಸರ್ವೋಚ್ಚ ನ್ಯಾಯಾಲಯದ ಸಮುಚ್ಚಯದ ಮುಖ್ಯ ನ್ಯಾಯಾಧೀಶರ ನ್ಯಾಯಾಲಯ ಸಂಖ್ಯೆ ೧ರಲ್ಲಿ ವಾದಿ ಪ್ರತಿವಾದಿಗಳು, ವಕೀಲರು, ಪತ್ರಕರ್ತರು, ವೀಕ್ಷಕರಿಂದ ಕಿಕ್ಕಿರಿದು ತುಂಬಿತ್ತು. ಅಂದು ಮುಸ್ಲಿಮ್ ವೈಯಕ್ತಿಕ ಕಾನೂನಿನ ಭಾಗವಾಗಿದೆ ಎಂದು ಹೇಳಲಾಗುತ್ತಿದ್ದ ತ್ರಿವಳಿ ತಲಾಕ್ ಕುರಿತು ಮಹತ್ವದ ತೀರ್ಪು ಹೊರಬೀಳುವುದಿತ್ತು. ತೀರ್ಪು ಏನಿರಬಹುದು ಎಂಬ ಅಂದಾಜು ಇದ್ದರೂ ವಾಸ್ತವವಾಗಿ ಅದರ ಪಠ್ಯವೇನು, ಪರಿಣಾಮವೇನು ಎಂಬುದರ ಕುರಿತು ಎಲ್ಲರಿಗೂ ದಟ್ಟ ಕುತೂಹಲವಿತ್ತು. ಕೋರ್ಟ್ ಹಾಲಿಗೆ ಐವರು ನ್ಯಾಯಾಧೀಶರ ಪ್ರವೇಶವಾದಾಗ ಎಲ್ಲರೂ ಎದ್ದು ಗೌರವ ಸೂಚಿಸಿದರು, ಇಡೀ ಕೋರ್ಟ್ ಹಾಲ್ ನಿಶ್ಶಬ್ದವಾಯಿತು. ಮುಖ್ಯ ನ್ಯಾಯಾಧೀಶರು ಪೀಠದ ವತಿಯಿಂದ ತೀರ್ಪನ್ನು ಓದಿದರು. ಕಳೆದ ೧೪೦೦ ವರ್ಷಗಳಿಂದ ವಿವಾಹಿತ ಮುಸ್ಲಿಮ್ ಮಹಿಳೆಯರ ತಲೆಯ ಮೇಲೆ ತೂಗುತ್ತಿದ್ದ ಕತ್ತಿಯಂತಿದ್ದ ತ್ವರಿತ ತ್ರಿವಳಿ ತಲಾಕ್ ಪದ್ಧತಿ ತಕ್ಷಣದಿಂದ ಅಸಾಂವಿಧಾನಿಕ ಎಂದು ಘೋಷಣೆಯಾಯಿತು. ೩೯೫ ಪುಟಗಳ ಸುದೀರ್ಘ ತೀರ್ಪಿನಲ್ಲಿ ಪ್ರಕರಣದ ಎಲ್ಲಾ ವಿವರಗಳು, ವಾದವಿವಾದಗಳು, ಐತಿಹಾಸಿಕ, ಧಾರ್ಮಿಕ, ಕಾನೂನಾತ್ಮಕ ಆಧಾರಗಳ ವಿವರ ಇತ್ತು. ಅದರ ಪೂರ್ಣ ಪಾಠದ ಓದಿಗೆ ಮುನ್ನವೇ ತೀರ್ಪಿನ ಮುಖ್ಯ ಭಾಗದ ಪ್ರಕಟಣೆಯಿಂದ ಭಾವೋತ್ತೇಜಿತರಾದ ಭಾರತೀಯ ಮುಸ್ಲಿಮ್ ಮಹಿಳೆಯರು ದೇಶಾದ್ಯಂತ ವಿಜಯೋತ್ಸವವನ್ನು ಆಚರಿಸಿದರು.

ಇಡೀ ದೇಶದಲ್ಲಿ ಮುಸ್ಲಿಮ್ ಮಹಿಳೆಯರು, ಕೆಲವರು ಆನಂದದಿಂದ ಮಿಂಚುವ ಕಣ್ಣು ಮಾತ್ರ ಕಾಣಿಸುವ ಹಿಜಾಬ್‌ನಲ್ಲಿ, ಇನ್ನು ಕೆಲವರು ಗೆಲುವಿನ ಮುಖ ಮಾತ್ರ ಕಾಣುವ ಬುರಖಾದಲ್ಲಿ, ಇನ್ನು ಕೆಲವರು ಸಾಧಾರಣ ಉಡುಪಿನಲ್ಲಿ, ಮತ್ತೆ ಕೆಲವರು ಜೀನ್ಸ್ ಪ್ಯಾಂಟಿನಲ್ಲಿ – ಎಲ್ಲ ಬಗೆಯ ಮುಸ್ಲಿಮ್ ಯುವತಿಯರು, ಮಹಿಳೆಯರು ಬೀದಿಗಿಳಿದು ತಮ್ಮ ಹೋರಾಟಕ್ಕೆ ಗೆಲುವನ್ನು ಆಚರಿಸಿ, ವಿವಾಹ ವಿಚ್ಛೇದನದ ಈ ಅನಿಷ್ಟ ಪದ್ಧತಿಯನ್ನು ರದ್ದು ಮಾಡಿದ್ದಕ್ಕಾಗಿ ಸರ್ವೋಚ್ಚ ನ್ಯಾಯಾಲಯವನ್ನು ಅಭಿನಂದಿಸಿ ಪರಸ್ಪರ ಸಿಹಿ, ಸಂತೋಷವನ್ನು ಹಂಚಿಕೊಂಡು ಸಂಭ್ರಮಿಸಿದರು. ಅನೇಕ ಮುಸ್ಲಿಮೇತರ ಸ್ತ್ರೀ–ಪುರುಷರು ಇವರ ಹಿಗ್ಗಿನಲ್ಲಿ ಭಾಗಿಯಾದರು. ಆದರೆ ಕೆಲವು ಪ್ರಗತಿಪರರನ್ನು ಬಿಟ್ಟರೆ ಹೆಚ್ಚಿನ ಮುಸ್ಲಿಮ್ ಪುರುಷರು ಈ ಹಠಾತ್ ಬೆಳವಣಿಗೆಯಿಂದ ಏನನ್ನೋ ಕಳೆದುಕೊಂಡವರ ಹಾಗೆ, ಇದ್ದಕ್ಕಿದಂತೆ ಅನಾಥರಾದಂತೆ ತಬ್ಬಿಬ್ಬಾಗಿ ಹೇಗೆ ಪ್ರತಿಕ್ರಿಯಿಸಬೇಕು ಎಂಬ ಗೊಂದಲದಲ್ಲಿ, ನ್ಯಾಯಾಲಯದ ತೀರ್ಪನ್ನೇನೋ ನಾವು ಸ್ವಾಗತಿಸುತ್ತೇವೆ, ಆದರೂ.... ಎಂದು ಬೇರೆ ಬೇರೆ ಉದ್ದದ, ಬೇರೆ ಬೇರೆ ಶ್ರುತಿಯ ರಾಗ ಎಳೆದರು. ಸುದೀರ್ಘ ಸುನಾವಣೆಯ ಫಲವಾಗಿ

# ಕುರಾನ್‌ನಲ್ಲಿ ಏನಿದೆ?

ಮದುವೆ ಎಂಬುದನ್ನು ಒಂದು ಸಾಮಾಜಿಕ ಒಪ್ಪಂದವೆಂಬಂತೆ ಪ್ರತಿಪಾದಿಸಿರುವ ಧರ್ಮ ಇಸ್ಲಾಮ್. ಆದ್ದರಿಂದ ಇದರಲ್ಲಿ ಮದುವೆಯಾಗಲಿರುವ ಸ್ತ್ರೀ ಪುರುಷರ ನಡುವೆ ಒಪ್ಪಂದಕ್ಕೆ ಅವಕಾಶವಿದೆ. ಪುರುಷ ತಾನು ಮದುವೆಯಾಗಲಿರುವ ಸ್ತ್ರೀಗೆ ತನ್ನ ಯೋಗ್ಯತಾನುಸಾರ ಸ್ತ್ರೀ ಧನ ಅಥವಾ ವಿವಾಹ ಧನವನ್ನು ನೀಡಬೇಕಾಗುತ್ತದೆ, ಅದನ್ನು ನಿಕಾಹ್ ನಾಮದಲ್ಲಿ ಉಲ್ಲೇಖಿಸಬೇಕಾಗುತ್ತದೆ. ಇದು ಆಕೆಯ ಹಕ್ಕು. ಮದುವೆಯ ಹಾಗೆಯೇ ವಿಚ್ಛೇದನ (ತಲಾಕ್)ವನ್ನೂ ಸಾಮಾಜಿಕ ಒಪ್ಪಂದವನ್ನಾಗಿ ಮಾಡಿರುವುದೂ ಇಸ್ಲಾಮಿನ ಹೆಗ್ಗಳಿಕೆಯೇ ಆಗಿದೆ.

ಪುರುಷ ಮತ್ತು ಸ್ತ್ರೀಯರ ನಡುವಿನ ವೈಯಕ್ತಿಕ, ವೈವಾಹಿಕ ಸಂಬಂಧ, ಸಂಘರ್ಷ, ಬಿಡುಗಡೆ ಮತ್ತು ಆಯಾ ಸನ್ನಿವೇಶಗಳಲ್ಲಿ ಶ್ರದ್ಧಾವಂತ ಮುಸ್ಲಿಮರು ವರ್ತಿಸಬೇಕಾದ ವಿಧಿವಿಧಾನಗಳ ಕುರಿತು ಕುರಾನ್ ವಿಸ್ತೃತವಾಗಿ ಹೇಳುತ್ತದೆ. ಇದೊಂದು ಕಾನೂನು ಗ್ರಂಥವಲ್ಲ. ಹೀಗಾಗಿ ಈ ಎಲ್ಲ ವಿಷಯಗಳನ್ನು ಒಂದೇ ಅಧ್ಯಾಯದಲ್ಲಿ ಕ್ರಮಬದ್ಧವಾಗಿ ಹೇಳಲಾಗಿಲ್ಲ. ಸಂದರ್ಭಾನುಸಾರ ಐದು ಅಧ್ಯಾಯಗಳಲ್ಲಿರುವ ಸುಮಾರು ೨೫ ಶ್ಲೋಕಗಳಲ್ಲಿ ಇಂಥ ಆದೇಶಗಳಿವೆ. (ಅವೆಂದರೆ, ಅಧ್ಯಾಯ ಸಂಖ್ಯೆ, ಹೆಸರು ಮತ್ತು ಶ್ಲೋಕಗಳ ಸಂಖ್ಯೆ): ೨. ಅಲ್ ಬಕರಃ: ೨೨೬–೨೩೭, ೨೪೧; ೪. ಅನ್ನಿಸಾ: ೯, ೨೨–೨೩, ೩೪–೩೫, ೧೨೮; ೩೩. ಅಲ್ ಅಹಝಾಬ್: ೪೯; ೬೦. ಅಲ್ ಮುಮ್ತಹಿನಃ : ೧೦; ೬೫. ಅತ್ತಲಾಕ್: ೨, ೪–೭) (ಹೆಚ್ಚಿನ ಅಧ್ಯಯನದ ಆಸಕ್ತಿಯುಳ್ಳವರು ಶಾಂತಿ ಪ್ರಕಾಶನದ, ಎಸ್. ಅಬ್ದುಲ್ ಗಫ್ಫಾರರ ಪವಿತ್ರ ಕುರ್‌ಆನ್ ಕನ್ನಡಾನುವಾದವನ್ನು ಓದಬಹುದು). ಅವುಗಳ ಒಟ್ಟಾರೆ ಅಭಿಪ್ರಾಯ ಸಂಕ್ಷಿಪ್ತವಾಗಿ ಹೀಗಿದೆ:

ಕುರಾನಿನ ಸಂದೇಶಗಳನ್ನು ಸಮಗ್ರವಾಗಿ ಅಧ್ಯಯನ ಮಾಡಿದರೆ ಅಲ್ಲಾಹ್ ವಿಚ್ಛೇದನವನ್ನು ಕಿಂಚಿತ್ತೂ ಇಚ್ಛಿಸುವುದಿಲ್ಲ; ವೈವಾಹಿಕ ಸಂಬಂಧದ ದೃಢತೆ ಮತ್ತು ಮುಂದುವರಿಕೆಯನ್ನು ಉತ್ತೇಜಿಸುತ್ತಾನೆ ಎಂಬುದು ಸ್ಪಷ್ಟವಾಗುತ್ತದೆ. ತನ್ನ ಪತ್ನಿಗೆ ಅತ್ಯುತ್ತಮನಾಗಿರುವ ವ್ಯಕ್ತಿಯು ನಿಜವಾಗಿಯೂ ಅತ್ಯುತ್ತಮನಾಗಿರುತ್ತಾನೆ. ನಿಮ್ಮ ಪತ್ನಿಯರಲ್ಲಿ ನಿಮಗೆ ಏನಾದರೂ ಇಷ್ಟವಾಗದಿದ್ದಲ್ಲಿ ಅದನ್ನು ಒಪ್ಪಿಕೊಂಡೇ ಅವರೊಂದಿಗೆ ಸೌಹಾರ್ದವಾಗಿರಿ, ಮುಂದೆ ಅದೂ ನಿಮಗೆ ಇಷ್ಟವಾಗಬಹುದೆಂದು ಹೇಳಲಾಗಿದೆ. ಮದುವೆಯನ್ನು ಸಂರಕ್ಷಿಸುವುದು ಪತಿ ಪತ್ನಿ ಇಬ್ಬರ ಕರ್ತವ್ಯವೂ ಆಗಿದೆ.

ಕುರಾನ್‌ನಲ್ಲಿ ನಿಕಾಹ್‌ಅನ್ನು ಮಿಸಕನ್ ಗಲೀಜಾ – 'ಒಂದು ಬಲವಾದ ಬಂಧ' ಎಂದು ವರ್ಣಿಸಿದೆ. ಯಾರ ಜೊತೆ ಮತ್ತು ಹೇಗೆ ಈ ಬಂಧದಲ್ಲಿ ಒಳಗೊಳ್ಳಬಹುದು; ಮತ್ತು ಉಚಿತವಾದ ಕಾರಣವಿಲ್ಲದೇ ಸರಿಯಾದ ಕ್ರಮವಿಲ್ಲದೇ ಈ ಬಲವಾದ ಬಂಧವನ್ನು ಮುರಿಯಲಾಗದು ಎಂಬುದನ್ನೂ ವಿವರಿಸಲಾಗಿದೆ. ಖಂಡಿತವಾಗಿಯೂ ಈ ವಿವಾಹಬಂಧನವನ್ನು ಮನಸೇಚ್ಛೆ ರದ್ದುಪಡಿಸಲು ಆಗದು. ಕುರಾನ್ ಪ್ರಕಾರ, ವಿವಾಹ ವಿಚ್ಛೇದನವು ನಿರಂಕುಶವಾದ ಮತ್ತು ಹುಚ್ಚಾಟದ ವಿಚಾರವಲ್ಲ ಎಂಬುದನ್ನು ಸ್ಪಷ್ಟವಾಗಿ ಹೇಳಲಾಗಿದೆ.

ಪತಿ ಪತ್ನಿಯರಲ್ಲಿ ಯಾವುದೇ ಕಾರಣಕ್ಕೆ ಒಡಕು ಮೂಡಿದರೆ, ಅವರು ಪರಸ್ಪರ ಗೌರವಯುತವಾಗಿ ಪ್ರತ್ಯೇಕಗೊಳ್ಳಬಹುದಾಗಿದೆ. ಪುರುಷ ತಲಾಕ್ ಕೊಡಬಹುದು; ಸ್ತ್ರೀ ಖುಲಾ ಕೇಳಬಹುದು. ಮುಖ್ಯವಾಗಿ ತಲಾಕ್ ಕೊಡಲು ಹಲವು ವಿಧಿವಿಧಾನಗಳನ್ನು ಕುರಾನ್‌ನಲ್ಲಿ ಸೂಚಿಸಲಾಗಿದೆ. ಪತಿ ಪತ್ನಿಯರು ಒಟ್ಟಿಗೇ ಇರಲು ಸಾಧ್ಯವಾಗುತ್ತಿಲ್ಲ ಎಂಬ ಆತಂಕ ಮೂಡಿದರೆ ಪತಿ ಪತ್ನಿಯರನ್ನು ರಾಜಿ ಮಾಡಿಸಲು ಎರಡೂ ಕಡೆಯಿಂದ ಹಿರಿಯರನ್ನು ಮಧ್ಯಸ್ಥಿಕೆದಾರರನ್ನು ನೇಮಿಸಿಕೊಳ್ಳಬೇಕು. ಇದರ ಮೂಲಕ ಅವರಿಬ್ಬರೂ ರಾಜಿ ಮಾಡಿಕೊಳ್ಳಲು ಒಪ್ಪಿದರೆ ಅಲ್ಲಾಹ್ ಅವರನ್ನು ಒಂದುಗೂಡಿಸಲು ನೆರವಾಗುವನು. ಆದರೂ, ಪತಿ–ಪತ್ನಿಯರ ನಡುವೆ ಸಂಧಾನ ಸಾಧ್ಯವೇ ಇಲ್ಲ ಎಂದು ಕೊನೆಗೂ ಕಂಡುಬಂದಲ್ಲಿ ಅಂಥ 'ಅಸಾಧಾರಣ ಸನ್ನಿವೇಶಗಳಲ್ಲಿ' ವಿಚ್ಛೇದನಕ್ಕೆ ಅಲ್ಲಾಹ್‌ನ ಅನುಮತಿ ಇದೆ.

ಇಲ್ಲಿಯೂ ಕಾಲಾಂತರದಲ್ಲಿ ಪತಿ–ಪತ್ನಿಯರ ನಡುವೆ ಸೌಹಾರ್ದ ಮೂಡಲು ವಿಧಿಬದ್ಧವಾಗಿಯೇ ಅವಕಾಶ ಕಲ್ಪಿಸಲಾಗಿರುವುದು ಗಮನಾರ್ಹ. ಪತಿ, ಪತ್ನಿಗೆ ಮೂರು ಸಲ 'ತಲಾಕ್' ಹೇಳಬೇಕು. ಆದರೆ ಮೂರನ್ನೂ ಒಂದೇ ಬಾರಿಗೆ ಹೇಳಿ ಮುಗಿಸಬೇಕು ಎಂಬುದಕ್ಕೆ ಕುರಾನ್‌ನಲ್ಲಿ ಎಲ್ಲಿಯೂ ಅವಕಾಶವಿಲ್ಲ. ಹಾಗಿದ್ದರೆ ಮೂರು ಬಾರಿ ಹೇಳುವ ಅಗತ್ಯವಿರಲಿಲ್ಲ, ಒಂದೇ ಬಾರಿ ಉಚ್ಚರಿಸಿದರೂ ಸಾಕಾಗಿತ್ತಲ್ಲ! ಒಂದೇ ಬಾರಿಗೆ ಮೂರು ಸಲ ತಲಾಕ್ ಹೇಳಿದರೆ ಅದು ಒಂದು ಬಾರಿ ಹೇಳಿರುವುದಕ್ಕೆ ಸಮನಾಗುತ್ತದೆ. ಕೋಪದ ಭರದಲ್ಲಿ, ಕುಡಿದ ಮತ್ತಿನಲ್ಲಿ, ದುಷ್ಪ್ರೇರಣೆಗೆ ಪಕ್ಕಾಗಿ ಎಷ್ಟು ಸಲ ತಲಾಕ್ ಹೇಳಿದರೂ ಅದು ಸಿಂಧುವೇ ಆಗುವುದಿಲ್ಲ. ಶಾಂತ ಮನಸ್ಥಿತಿಯಿಂದ ತಾನು ತಾಳಿರುವ ನಿರ್ಧಾರದ ಆಧಾರದ ಮೇಲೆ ಪತ್ನಿಯ ಎದುರು ತಲಾಕ್ ಹೇಳಬೇಕು. ಬಿಟ್ಟು ಬಿಟ್ಟು ಮೂರು ಬಾರಿ ತಲಾಕ್ ಹೇಳಲೂ ಒಂದು ಕ್ರಮ ಇದೆ.

ಒಂದು ಬಾರಿ ತಲಾಕ್ ಹೇಳಬೇಕು. ಆನಂತರ ಕನಿಷ್ಠ ಒಂದು ತಿಂಗಳ ಕಾಲ ಕಾಯಬೇಕು. ನಂತರ ಎರಡನೇ ಸಲ ತಲಾಕ್ ಹೇಳಬೇಕು, ಮತ್ತೊಂದು ತಿಂಗಳು ಕಾಯಬೇಕು. ಈ ಕಾಯುವ ಅವಧಿ ಬಹಳ ತರ್ಕಬದ್ಧವಾಗಿದೆ. ಒಂದು, ಸ್ತ್ರೀ ಆ ಪುರುಷನಿಂದ ಗರ್ಭಿಣಿಯಾಗಿಲ್ಲ ಎಂಬುದನ್ನು ಖಚಿತಪಡಿಸಿಕೊಳ್ಳುತ್ತದೆ. ಗರ್ಭಿಣಿಯಾಗಿದ್ದರೆ ಕ್ರಮ ಬೇರೆಯಾಗುತ್ತದೆ. ಇನ್ನೊಂದು, ಈ ಕಾಯುವ ಅವಧಿಯಲ್ಲಿ ಪತ್ನಿ ಅದೇ ಮನೆಯಲ್ಲಿ ಇರಬೇಕು; ಪತಿ ಆಕೆಯನ್ನು ಹಿಂಸಿಸಿ ಮನೆ ಬಿಟ್ಟು ತೊಲಗುವಂತೆ ಮಾಡಬಾರದು; ಆಕೆಯೂ ಹೋಗುವಂತಿಲ್ಲ. ಆಕೆ ಮೊದಲು ಹೇಗಿದ್ದಳೋ ಹಾಗೆಯೇ ಎಲ್ಲ ಅನುಕೂಲಗಳ ಸಹಿತ ಇರಬೇಕು. ಆರಂಭದ ಭಾವಾತಿರೇಕ ಶಮನವಾದ ನಂತರ ಪತಿಗೆ ಮತ್ತೆ ತನ್ನ ಪತ್ನಿಯ ಕುರಿತು ಪ್ರೀತಿ ಮೂಡಬಹುದು ಎಂಬ ನಿರೀಕ್ಷೆಯೇ ಇಲ್ಲಿ ಮುಖ್ಯವಾದುದು. ಇಲ್ಲವೇ ಗುರುಹಿರಿಯರ ಮೂಲಕ ಸಂಧಾನ ಏರ್ಪಡಬಹುದು. ಈ ಕಾಯುವ ಅವಧಿಯಲ್ಲಿ ಪತಿಯು ಪತ್ನಿಯೊಂದಿಗೆ ಲೈಂಗಿಕ ಸಂಪರ್ಕವನ್ನು ಮಾಡಿದರೆ ಅಥವಾ ಪ್ರೀತಿ ಮೂಡಿ ಒಟ್ಟಿಗೆ ಬದುಕುವ ನಿರ್ಧಾರ ತಾಳಿದರೆ ಈ ಮುಂಚೆ ಹೇಳಿದ ಒಂದು ಅಥವಾ ಎರಡು ತಲಾಕ್ ಉಚ್ಚಾರಣೆಗಳು ರದ್ದಾಗುತ್ತವೆ. ಇನ್ಯಾವಾಗಲಾದರೂ ಮುಂದೆ ಮತ್ತೆ ಪತಿ–ಪತ್ನಿ ಬೇರೆಯಾಗುವ ನಿರ್ಧಾರ ತಾಳಿದರೆ ಮತ್ತೆ ಈ ಹಿಂದಿನ ಕ್ರಮ ಆರಂಭಿಸಬೇಕಾಗುತ್ತದೆ. ಸೌಹಾರ್ದ ಮೂಡದೇ ಮೂರನೇ ಬಾರಿಯೂ ತಲಾಕ್‌ಅನ್ನು ಉಚ್ಚರಿಸಿದರೆ ಆಗಷ್ಟೆ ವಿವಾಹ ವಿಚ್ಛೇದನ ಊರ್ಜಿತವಾಗುತ್ತದೆ. ಕಾಯುವ ಅವಧಿಯಲ್ಲಿ ಅವರು ತಮ್ಮ ಮನಸ್ಸನ್ನು ಬದಲಾಯಿಸಿದರೆ ಅಲ್ಲಾಹ್‌ನ ಕ್ಷಮೆ, ದಯೆ ಅವರ ಮೇಲಿರುತ್ತದೆ; ಅವರು ವಿಚ್ಛೇದನವನ್ನೇ ಮಾಡಿಕೊಂಡರೆ ಅಲ್ಲಾಹ್ ಅದಕ್ಕೆ ಸಾಕ್ಷಿಯಾಗಿರುತ್ತಾನೆ ಎಂದು ಕುರಾನ್‌ನಲ್ಲಿ ಹೇಳಲಾಗಿದೆ.

ಕಾಯುವ ಅವಧಿಯಲ್ಲಾಗಲೀ, ಕೊನೆಗೂ ತಲಾಕ್ ಕೊಟ್ಟ ಮೇಲಾಗಲೀ ಪತಿ ಪತ್ನಿಗೆ ಈ ಮುಂಚೆ ಕೊಟ್ಟಿರುವ ಏನನ್ನೂ ಹಿಂದಕ್ಕೆ ಪಡೆಯಬಾರದು. ತಲಾಕ್ ನೀಡಿ ಕಳಿಸಿಕೊಡುವಾಗ ಗೌರವಯುತವಾಗಿ ಆಕೆಯನ್ನು ಬೀಳ್ಕೊಡಬೇಕು. ಒಮ್ಮೆ ತಲಾಕ್ ನೀಡಿದ ನಂತರ ಆ ಸ್ತ್ರೀ ತನ್ನ ಇಚ್ಛಾನುಸಾರ ಇನ್ಯಾವುದೇ ಪುರುಷನನ್ನು ಮದುವೆ ಮಾಡಿಕೊಳ್ಳಬಹುದು. ಅದಕ್ಕೆ ಮೊದಲ ಪತಿ ಯಾವುದೇ ರೀತಿಯಲ್ಲಿ ಅಡ್ಡಿಪಡಿಸಬಾರದು.

ಐದು ಅಧ್ಯಾಯಗಳ ಸುಮಾರು ೨೬ ಶ್ಲೋಕಗಳಲ್ಲಿ ಇರುವ ವಿವರಗಳಲ್ಲಿ ಮೂರು ಬಾರಿಯ ತಲಾಕ್ ಉಚ್ಚಾರಣೆಯನ್ನು ಒಂದೇ ಸಲಕ್ಕೆ ಹೇಳಿ ಮುಗಿಸಬಹುದು ಎಂಬುದಕ್ಕೆ ಎಲ್ಲಿಯೂ ಪ್ರತ್ಯಕ್ಷವಾಗಿಯಾಗಲೀ ಪರೋಕ್ಷವಾಗಿಯಾಗಲೀ ಅನುಮತಿಯಿಲ್ಲ. ಇದನ್ನು ಎಲ್ಲ ಪಂಥದ ಧರ್ಮಗುರುಗಳೂ ಒಪ್ಪುತ್ತಾರೆ. ಹಾಗಾದರೆ ಒಂದೇ ಬಾರಿಗೆ ಹೇಳಿದ ತ್ರಿತಲಾಕ್ ಮೂರು ತಲಾಕ್‌ಗೆ ಸಮ ಎಂಬಂತೆ ಒಪ್ಪಿಕೊಳ್ಳಲು ಆರಂಭಿಸಿದ್ದು ಯಾವಾಗ? ಪ್ರವಾದಿ ಮುಹಮ್ಮದರ ನಿಧನ ನಂತರ ಖಲೀಫಾ ಆಗಿದ್ದ ಹಜ್ರತ್ ಉಮರ್ ಯಾವುದೋ ಸಂದರ್ಭದಲ್ಲಿ ತ್ರಿತಲಾಕ್‌ಅನ್ನೇ ಅಂತಿಮ ತಲಾಕ್ ಎಂಬ ಪದ್ಧತಿಯನ್ನು ಸುಗ್ರೀವಾಜ್ಞೆಯ ಮೂಲಕ ಜಾರಿಗೆ ತರುತ್ತಾರೆ. ಆದರೆ, ಇದು ವಿವಾಹ ವಿಚ್ಛೇದನಕ್ಕೆ ಮುಂಚೆ ಸಂಧಾನದ ಎಲ್ಲಾ ಪ್ರಯತ್ನಗಳು ನಡೆಯಬೇಕು ಎಂದು ಕುರಾನ್‌ನ ಬಯಕೆಯನ್ನು ಹುಸಿಗೊಳಿಸುವುದರಿಂದ ಇವತ್ತಿನವರೆಗೂ ಹಜ್ರತ್ ಉಮರ್ ಅವರ ಈ ಪದ್ಧತಿಗೆ ವಿರೋಧವಿದೆ. ಇದಕ್ಕೆ ಪೂರಕವಾದ ಒಂದು ಘಟನೆಯೂ ವರದಿಯಾಗಿದೆ.

ಮೌಲಾನಾ ಉಸ್ಮಾನಿಯವರು, ಮುಸ್ನಾದ್ ಅಹಮದ್ ಇಬ್ನ್ ಹನಬಾಲ್ ಅವರನ್ನು ಉದ್ಧರಿಸುತ್ತಾ ಹೀಗೆ ಹೇಳುತ್ತಾರೆ: ಒಮ್ಮೆ ರುಕಾನಾಹ್ ಎಂಬ ವ್ಯಕ್ತಿ ತನ್ನ ಪತ್ನಿಗೆ ಒಂದೇ ಸಲಕ್ಕೆ ಮೂರು ಬಾರಿ ತಲಾಕ್ ಹೇಳಿದರು; ಆಮೇಲೆ ಅವರಿಗೆ ಪಶ್ಚಾತ್ತಾಪವಾಯಿತು. ಪ್ರವಾದಿ ಮುಹಮ್ಮದರು ಕೇಳಿದರು, "ನೀನು ನಿನ್ನ ಪತ್ನಿಯನ್ನು ಹೇಗೆ ತಲಾಕ್ ಹೇಳಿದೆ?" ರುಕಾನಾಹ್, 'ಮೂರು ಬಾರಿ ತಲಾಕ್ ಹೇಳಿದೆ' ಎಂದರು. ಪ್ರವಾದಿ ಮತ್ತೆ ಕೇಳಿದರು, "ಮೂರನ್ನೂ ಒಂದೇ ಬಾರಿಗೆ ಉಚ್ಚರಿಸಿದೆಯಾ?" ಹೌದು ಎಂದು ಉತ್ತರ ಬಂದಾಗ ಪ್ರವಾದಿ ಹೇಳಿದರು, "ಅದನ್ನು ಒಂದೇ ತಲಾಕ್ ಎಂದು ಪರಿಗಣಿಸು; ಮತ್ತು ನಿನಗೆ ಬೇಕಾದರೆ ನೀನು ನಿನ್ನ ಪತ್ನಿಯನ್ನು ಹಿಂದಕ್ಕೆ ಕರೆದುಕೊಳ್ಳಬಹುದು." ರುಕಾನಾಹ್ ತನ್ನ ಪತ್ನಿಯನ್ನು ಹಿಂದಕ್ಕೆ ಕರೆದುಕೊಂಡರು. ●

ಸರ್ವೋಚ್ಚ ನ್ಯಾಯಾಲಯ ಕೊನೆಗೂ ಬಹುಮತದ ತೀರ್ಪನ್ನು ನೀಡಿದ ಈ ಪ್ರಕರಣ ಯಾವುದು?

ಇಲ್ಲಿ ಪ್ರಸ್ತಾಪವಾಗಿರುವುದು ಭಾರತೀಯ ಮುಸ್ಲಿಮರಲ್ಲಿಯೂ ಕಳೆದ ಶತಶತಮಾನಗಳಿಂದ ಜಾರಿಯಲ್ಲಿರುವ ವಿವಾಹ ವಿಚ್ಛೇದನ ಪದ್ಧತಿ. ಪುರುಷ ಕೋಪದಲ್ಲಿಯೋ, ಕುಡಿದ ಮತ್ತಿನಲ್ಲಿಯೋ, ಹತಾಶೆಯಲ್ಲಿಯೋ ಒಂದೇ ಉಸಿರಿನಲ್ಲಿ 'ತಲಾಕ್ ತಲಾಕ್ ತಲಾಕ್' ಎಂದು ಉಚ್ಚರಿಸುತ್ತಾನೆ, ಅಲ್ಲಿಗೆ ಅವರ ವಿವಾಹವು ವಿಸರ್ಜಿತವಾಗುತ್ತದೆ. ಪತ್ನಿ ಎಲ್ಲ ಹಕ್ಕನ್ನೂ ಕಳೆದುಕೊಂಡು ಮನೆಯಿಂದ ಹೊರಹೋಗ ಬೇಕಾಗುತ್ತದೆ. ಈ ಪದ್ಧತಿಯಲ್ಲಿ ಪುರುಷನಿಗೆ ತನ್ನ ದುಡುಕುತನಕ್ಕಾಗಿ ಪಶ್ಚಾತ್ತಾಪ ಪಡುವುದಕ್ಕೋ, ಪತ್ನಿ ತನ್ನ ಅಭಿಪ್ರಾಯವನ್ನು ಪ್ರತಿಪಾದಿಸಿ ತಪ್ಪಾಗಿದ್ದರೆ ಸುಧಾರಿಸಿಕೊಳ್ಳುತ್ತೇನೆಂದು ಹೇಳಿ ಹೊಂದಾಣಿಕೆ ಮಾಡಿಕೊಳ್ಳುವುದಕ್ಕೋ ಅವಕಾಶವಿಲ್ಲ. ಮೂರು ಸಲ ತಲಾಕ್ ಹೇಳಿಯಾಯಿತು. ಮುಗಿದು ಹೋಯಿತು. ಈ ಅನಿಷ್ಟ ಪದ್ಧತಿಯನ್ನು ಅನೇಕ ಜನ ಪುರುಷರು ಬಳಸಿಕೊಂಡು ಪತ್ನಿಯರನ್ನು ಅನಾಥ ರನ್ನಾಗಿ ಮಾಡುತ್ತಿದ್ದಾರೆ. ಮಕ್ಕಳನ್ನು ಸಾಕುವ ಹಕ್ಕನ್ನೂ ಕಿತ್ತುಕೊಂಡು ಹೊರಗಟ್ಟುತ್ತಿದ್ದಾರೆ. ಕುಟುಂಬಗಳು ಇದನ್ನು ನಂಬುವುದರಿಂದ, ಸಮುದಾಯ, ಧಾರ್ಮಿಕ ಗುರುಗಳೂ ಈ ಪದ್ಧತಿಯ ಪರವಾಗಿಯೇ ಇರುವುದರಿಂದ ಮಹಿಳೆ ಯಾರಲ್ಲಿಯೂ ನೆರವು ಬೇಡದಂಥ ದುಸ್ಥಿತಿ ಬಂದು ಒದಗುತ್ತದೆ. ಇದು ನೂರಾರು ವರ್ಷಗಳಿಂದ ಭಾರತದಲ್ಲಿಯೂ ನಡೆದುಕೊಂಡು ಬಂದಿದೆ. ಹಿತಾಸಕ್ತಿಯುಳ್ಳವರು ಇದಕ್ಕೆ ಧರ್ಮದ ಆಧಾರವಿದೆ ಎಂದು ಹೇಳುತ್ತಲೇ ಬಂದಿದ್ದಾರೆ. ಈ ಕ್ರೂರ ಪದ್ಧತಿಗೆ ಸಾವಿರಾರು ಮಹಿಳೆಯರು ಬಲಿಯಾಗುತ್ತಲೇ ಇದ್ದಾರೆ. ಹಾಗೆ ನೋಡಿದರೆ ಈ ವಿಚಾರ ಸರ್ವೋಚ್ಚ ನ್ಯಾಯಾಲಯದ ಮುಂದೆ ಬಂದಿರುವುದಕ್ಕೆ ಹಲವು ದಶಕಗಳ ಇತಿಹಾಸವಿದೆ. ೧೯೮೫ರಲ್ಲಿ ಶಾಹ್ ಬಾನು ಪ್ರಕರಣ, ೨೦೦೨ರ ಶಮೀಮ್ ಆರಾ ಪ್ರಕರಣ ಕೆಲವು ಮುಖ್ಯ ನಿದರ್ಶನಗಳು. ಆದರೂ, ಆಗಸ್ಟ್ ೨೨ರ ಐತಿಹಾಸಿಕ ತೀರ್ಪಿಗೆ ಪ್ರೇರಣೆಯಾಗಿದ್ದು ಇತ್ತೀಚೆಗೆ ಸಮುದಾಯದ ನಿಂದನೆ, ಮೌಲ್ವಿಗಳ ಭರ್ತ್ಸನೆ, ಗಂಡಂದಿರ ಆಟೋಟಾಪಗಳ ಹೊರತಾಗಿಯೂ ನ್ಯಾಯ ಕೇಳಿ ಸರ್ವೋಚ್ಚ ನ್ಯಾಯಾಲಯದ ಮೆಟ್ಟಿಲನ್ನು ಏರಿದ ಐವರು ಧೀರ ಮಹಿಳೆಯರ ದೃಢ ನಿರ್ಧಾರ.




### ಐವರು ಧೀರ ಮಹಿಳೆಯರ ಬಂಡಾಯ

ಮೂವತ್ತೈದು ವರ್ಷ ವಯಸ್ಸಿನ ಶಾಯಿರಾ ಬಾನು ಉತ್ತರಾಖಂಡ್ ರಾಜ್ಯದ ಒಂದು ಚಿಕ್ಕ ಹಳ್ಳಿಯಲ್ಲಿ ಜನಿಸಿದರು, ಮುಂದೆ ಓದಿ, ಸಮಾಜವಿಜ್ಞಾನದಲ್ಲಿ ಸ್ನಾತಕೋತ್ತರ ಪದವಿಯನ್ನು ಗಳಿಸಿದರು. ಅಹಮದಾಬಾದ್‌ನ ರಿಯಲ್ ಎಸ್ಟೇಟ್ ಏಜೆಂಟ್ ರಿಜ್ವಾನ್ ಅಹ್ಮದ್ ಎಂಬುವವರ ಜೊತೆ ೨೦೦೨ರಲ್ಲಿ ವಿವಾಹವಾಗಿತ್ತು. ಅನೇಕ ಕಾರಣಗಳಿಗಾಗಿ ಆತ ಶಾಯಿರಾ ಬಾನುವಿಗೆ ಹಿಂಸೆಯನ್ನು ನೀಡುತ್ತಿದ್ದರು. ಅಕ್ಟೋಬರ್ ೨೦೧೫ರಲ್ಲಿ ಒಮ್ಮೆ ಶಾಯಿರಾ ಬಾನು ತಮ್ಮ ತವರುಮನೆಯಲ್ಲಿದ್ದಾಗ ಅವರ ಪತಿಯಿಂದ ಒಂದು ಪತ್ರ ಬಂತು. ಅದರಲ್ಲಿ ಮೂರು ಬಾರಿ 'ತಲಾಕ್' ಎಂದು ಬರೆದಿತ್ತು. ಅದರಿಂದಾದ ಆಘಾತದಿಂದ ಚೇತರಿಸಿಕೊಳ್ಳುವ ಮುಂಚೆಯೇ ಆಕೆಯ ವಿವಾಹ ವಿಚ್ಛೇದನ ಆಗಿಹೋಗಿತ್ತು. ಆಕೆ ಮತ್ತು ಆಕೆಯ ತಂದೆ-ತಾಯಿ ಪ್ರಯತ್ನಿಸಿದರೂ ರಿಜ್ವಾನ್ ಸಂಪರ್ಕಕ್ಕೆ ಸಿಗಲಿಲ್ಲ. ಆತನ ಕುಟುಂಬದವರು ಶಾಯಿರಾಗೆ ತನ್ನ ಮಕ್ಕಳೊಂದಿಗೆ ಮಾತಾಡಲೂ ಅವಕಾಶವನ್ನು ನೀಡುವುದಿಲ್ಲ. ಶಾಯಿರಾ ಬಾನುವಿನ ತಂದೆ-ತಾಯಿ ಸ್ಥಳೀಯ ಮೌಲ್ವಿ ಬಳಿ ಹೋಗಿ ದೂರಿದಾಗ ಅವರೂ ತಲಾಕ್ ನೀಡಿದ್ದು ಸಿಂಧುವಾಗಿದೆ ಎಂದುಬಿಡುತ್ತಾರೆ. ಏಕಪಕ್ಷೀಯವಾಗಿ ಒಂದು ಕಾಗದದಲ್ಲಿ ಮೂರು ಬಾರಿ ತಲಾಕ್ ಎಂದು ಬರೆದುಬಿಟ್ಟರೆ ತಲಾಕ್ ಆಗಿಹೋಯಿತೇ ಎಂದು ಪ್ರಶ್ನಿಸಿ ಪ್ರತಿಭಟಿಸಿದ್ದಕ್ಕೆ ಇಡೀ ಕುಟುಂಬ ಮಸೀದಿಯ, ಮೌಲ್ವಿಯ, ಸಮುದಾಯದ ಆಕ್ರೋಶಕ್ಕೆ ಒಳಗಾಗಿ ಊರನ್ನೇ ಬಿಡುವಂಥ ಪರಿಸ್ಥಿತಿ ಉಂಟಾಗುತ್ತದೆ. ಈ ಅನ್ಯಾಯವೇ ಆಕೆಯ ನಿರ್ಧಾರವನ್ನು ಗಟ್ಟಿಗೊಳಿಸುತ್ತದೆ. ಶಾಯಿರಾ ಬಾನು ತನಗಾದ ಅನ್ಯಾಯವನ್ನು ಪ್ರತಿಭಟಿಸಿ ದೇಶದ ಸರ್ವೋಚ್ಚ ನ್ಯಾಯಾಲಯದಲ್ಲಿ ವ್ಯಾಜ್ಯವನ್ನು ಹೂಡುತ್ತಾರೆ.

ಇಪ್ಪತ್ತೆಂಟು ವರ್ಷ ವಯಸ್ಸಿನ ಅಫ್ರೀನ್ ರೆಹಮಾನ್ ಜಯಪುರದ ಎಂಬಿಎ ಪದವೀಧರೆ, ಖಾಸಗಿ ಕಂಪನಿಯೊಂದರಲ್ಲಿ ಉನ್ನತ ದರ್ಜೆಯ ಅಧಿಕಾರಿ. ಎರಡು ವರ್ಷಗಳ ದಾಂಪತ್ಯದ ನಂತರ ಆಕೆಯ ಗಂಡ ಅಷರ್ ವಾರ್ಸಿ, ೨೦೧೬ರಲ್ಲಿ ಆಕೆಯ ನೈತಿಕತೆಯನ್ನು ಪ್ರಶ್ನಿಸಿ ಆಕೆಗೆ ತ್ರಿ ತಲಾಕ್ ಮೂಲಕ ವಿಚ್ಛೇದನವನ್ನು ಘೋಷಿಸುತ್ತಾರೆ. ತನಗಾದ ಅನ್ಯಾಯದ ವಿರುದ್ಧ ಶಾಯಿರಾ ಬಾನುವಿನ ನಂತರ ತಮ್ಮ ಸರ್ವೋಚ್ಚ ನ್ಯಾಯಾಲಯದ ಮೊರೆಹೋದ ಎರಡನೇ ಮಹಿಳೆ ಅಫ್ರೀನ್.

ಸುಮಾರು ಇದೇ ಹೊತ್ತಿಗೆ ಪಶ್ಚಿಮ ಬಂಗಾಳದ ಹೌರಾದ ಇಸ್ರತ್ ಜಹಾನ್, ಉತ್ತರಪ್ರದೇಶದ ರಾಂಪುರದ ಪರ್ವೀನ್, ಉತ್ತರ ಪ್ರದೇಶದ ಸಹರಾನ್‌ಪುರದ ಅತಿಯಾ ಸಬ್ರಿ ಇವರನ್ನೂ ಇವರ ಗಂಡಂದಿರು ಫೋನ್ ಮಾಡಿಯೋ, ಪತ್ರ ಬರೆದೋ ಮೂರು ಬಾರಿ ತಲಾಕ್ ಉಚ್ಚರಿಸಿ ಏಕಪಕ್ಷೀಯವಾಗಿ ವಿಚ್ಛೇದನ ಮಾಡಿದ್ದರು. ಈ ಐವರೂ ತಮಗಾದ ಅನ್ಯಾಯದ ವಿರುದ್ಧ ಸರ್ವೋಚ್ಚ ನ್ಯಾಯಾಲಯದ ಮೆಟ್ಟಿಲನ್ನು ಹತ್ತಿದ್ದರು.

### ಐವರು ನ್ಯಾಯಾಧೀಶರ ತೀರ್ಪು

ಮುಸ್ಲಿಮರಲ್ಲಿ ಪತಿ ಪತ್ನಿ ಪರಸ್ಪರ ತಲಾಕ್/ಖುಲಾ ಕೊಡುವ ಹಕ್ಕು ಇದೆ. ಪತಿ ಪತ್ನಿಗೆ ತಲಾಕ್ ಕೊಡುವುದಾದರೆ ಮೂರು ಸಲ 'ತಲಾಕ್' ಎಂಬ ಪದವನ್ನು ಉಚ್ಚರಿಸಬೇಕು. ಪ್ರತಿ ಉಚ್ಚಾರಣೆಯ ನಡುವೆ ನಿಗದಿತ ಕಾಲಾಂತರ ಇರಬೇಕು ಎಂಬುದೂ ಕುರಾನಿನ ಆದೇಶ (ಈ ಕುರಿತು ಇನ್ನಷ್ಟು ಮಾಹಿತಿ ಮುಂದಿದೆ). ಭಾರತದಲ್ಲಿ ಕೆಲವು ಪಂಗಡದ ಮುಸ್ಲಿಮರು ಅನೇಕ ಸಂದರ್ಭಗಳಲ್ಲಿ ತಲಾಕ್‌ನ ಮೂರೂ ಉಚ್ಚಾರಣೆಗಳನ್ನು ಒಂದೇ ಬಾರಿಗೆ (ಮಧ್ಯಂತರವಿಲ್ಲದೆ) ಹೇಳಿಬಿಡುತ್ತಾರೆ. ಇಂಥ ಪದ್ಧತಿಗೆ 'ತಲಾಕ್ ಎ ಬಿದ್ದಾ' ಎನ್ನುತ್ತಾರೆ, ಇಲ್ಲಿ ಅದನ್ನು 'ತ್ವರಿತ ತ್ರಿವಳಿ ತಲಾಕ್' ಎನ್ನಲಾಗಿದೆ. ಅರ್ಜಿದಾರರ ಮನವಿಗಳಲ್ಲಿ ಹಲವು ವಿಚಾರಗಳಿದ್ದವಾದರೂ ಪ್ರಸ್ತುತ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ತನ್ನ ವಿಚಾರಣೆಯನ್ನು ಕೇವಲ ತ್ವರಿತ ತ್ರಿವಳಿ ತಲಾಕ್‌ಗೆ ಮಾತ್ರ ಸೀಮಿತಗೊಳಿಸಿಕೊಂಡಿದೆ.

ಇಲ್ಲಿ ನ್ಯಾಯಾಲಯವು ಮೂಲಭೂತವಾಗಿ ಎರಡು ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳಬೇಕಾಗಿತ್ತು. ೧. ತ್ವರಿತ ತ್ರಿವಳಿ ತಲಾಕ್ ಪದ್ಧತಿ ಭಾರತೀಯ ಸಂವಿಧಾನಕ್ಕೆ ಸಂಬದ್ಧವಾಗಿದೆಯೇ? ಮತ್ತು ೨. ತ್ವರಿತ ತ್ರಿವಳಿ ತಲಾಕ್ ಪದ್ಧತಿ ಮುಸ್ಲಿಮ್ ವೈಯಕ್ತಿಕ ಕಾನೂನಿಗೆ ಸಂಬದ್ಧವಾಗಿದೆಯೇ? ಈ ಪ್ರಶ್ನೆಗಳನ್ನು ಉತ್ತರಿಸಲು ಇನ್ನೆರಡು ಉಪಪ್ರಶ್ನೆಗಳನ್ನು ಪರಿಗಣಿಸಬೇಕಾಗಿತ್ತು: ೧. ತ್ರಿವಳಿ ತಲಾಕ್‌ಗೆ ಶಾಸನಬದ್ಧ ಕಾನೂನಿನ ಸ್ಥಾನಮಾನ ಇದೆಯೇ? ಅಥವಾ ಅದು ಕೇವಲ ಕ್ರೋಡೀಕೃತವಲ್ಲದ ವೈಯಕ್ತಿಕ ಕಾನೂನೇ? ಏಕೆಂದರೆ, ಶಾಸಕಾಂಗವು ಸಿದ್ಧಪಡಿಸಿದ ಕಾನೂನುಗಳು ಸಂವಿಧಾನ ನೀಡಿರುವ ಮೂಲಭೂತ ಹಕ್ಕು ಗಳೊಂದಿಗೆ ಸಂಬಂಧವಾಗಿರಬೇಕಾಗುತ್ತದೆ. ಆದರೆ ಕ್ರೋಡೀಕೃತವಲ್ಲದ ವೈಯಕ್ತಿಕ ಕಾನೂನುಗಳು ಮೂಲಭೂತ ಹಕ್ಕುಗಳೊಂದಿಗೆ ಸಂಗತವಾಗಿರಬೇಕಾಗಿಲ್ಲ. ಆದ್ದರಿಂದ, ತ್ರಿವಳಿ ತಲಾಕ್ ಕೇವಲ ಕ್ರೋಡೀಕೃತವಲ್ಲದ ವೈಯಕ್ತಿಕ ಕಾನೂನೂ ಆಗಿರದೆ ಇದ್ದಲ್ಲಿ ಅದನ್ನು ಅಸಾಂವಿಧಾನಿಕ ಎಂದು ಹೇಳಿ ರದ್ದುಪಡಿಸಲು ಸಾಧ್ಯವಿಲ್ಲ. ೨. ಎರಡನೇ ಉಪಪ್ರಶ್ನೆ, ತ್ರಿವಳಿ ತಲಾಕ್ ಮುಸ್ಲಿಮರ ಧಾರ್ಮಿಕ ಆಚರಣೆಯ ಮೂಲಭೂತ ಅಂಶವಾಗಿದೆಯೇ ಎಂಬುದಾಗಿದೆ. ಏಕೆಂದರೆ, ಅನುಚ್ಛೇದ ೨೫ರ ಅಡಿಯಲ್ಲಿ ತಮ್ಮ ಧರ್ಮವನ್ನು ಅನುಸರಣೆ ಮಾಡುವ ಹಕ್ಕು ಎಲ್ಲ ನಾಗರಿಕರಿಗೂ ಇದೆ. ನ್ಯಾಯಾಲಯವು ಅವರ ಧಾರ್ಮಿಕ ಪದ್ಧತಿಗಳ ಕುರಿತು

ತೀರ್ಪನ್ನು ನೀಡುವಂತಿಲ್ಲ. ತ್ರಿವಳಿ ತಲಾಕ್ ಎನ್ನುವುದು ಮುಸ್ಲಿಮರ ಧಾರ್ಮಿಕ ಪದ್ಧತಿಯ ಅವಿಭಾಜ್ಯ ಅಂಗವಾಗಿದ್ದರೆ ನ್ಯಾಯಾಲಯವು ಅದನ್ನು ರದ್ದುಪಡಿಸುವಂತಿಲ್ಲ.

ಈ ಪ್ರಶ್ನೆಗಳಲ್ಲಿ ಸಂವಿಧಾನದ ಆ ವ್ಯಾಖ್ಯಾನ ಒಳಗೊಂಡಿದ್ದರಿಂದ ಕನಿಷ್ಠ ಐವರು ನ್ಯಾಯಾಧೀಶರ 'ಸಂವಿಧಾನ ಪೀಠ'ವು ಇದನ್ನು ವಿಚಾರಣೆ ಮಾಡುವ ಅಗತ್ಯವಿತ್ತು. ಆ ಪ್ರಕಾರ ಸರ್ವೋಚ್ಚ ನ್ಯಾಯಾಲಯದ ಮುಖ್ಯನ್ಯಾಯಾಧೀಶರಾದ ಜೆ. ಎಸ್. ಖೇಹರ್ ಅವರ ಅಧ್ಯಕ್ಷತೆಯಲ್ಲಿ ಐದು ಜನರ ನ್ಯಾಯಪೀಠವನ್ನು ರಚನೆ ಮಾಡಲಾಯಿತು. ಇತರ ನಾಲ್ಕು ನ್ಯಾಯಾಧೀಶರು: ನ್ಯಾ. ಕುರಿಯನ್ ಜೋಸೆಫ್, ನ್ಯಾ. ರೋಹಿನ್ಟನ್ ಫಾಲಿ ನಾರಿಮನ್, ನ್ಯಾ. ಯು. ಯು. ಲಲಿತ್ ಮತ್ತು ನ್ಯಾ. ಅಬ್ದುಲ್ ನಜೀರ್. ನ್ಯಾಯಾಧೀಶರು ವಿವಿಧ ಧರ್ಮಗಳಿಗೆ ಸೇರಿದವರು ಎನ್ನುವುದನ್ನೂ ಇಲ್ಲಿ ಗಮನಿಸಬಹುದು. ಪ್ರಕರಣದ ಅರ್ಜಿದಾರರು: ಶಾಯರಾ ಬಾನು, ಅಫ್ರೀನ್ ರಹಮಾನ್, ಗುಲ್ಷನ್ ಪರ್ವೀನ್, ಇಷ್ರತ್ ಜಹಾನ್ ಮತ್ತು ಅತಿಯಾ ಸಾಬ್ರಿ, ಇವರ ಜೊತೆಯಲ್ಲಿ ಮುಸ್ಲಿಮ್ ವಿಮೆನ್ಸ್ ಕ್ವೆಸ್ಟ್ ಫಾರ್ ಇಕ್ವಾಲಿಟಿ, ಕುರಾನ್ ಸುನ್ನತ್ ಸೊಸೈಟಿ ಸಂಸ್ಥೆಗಳು ಅರ್ಜಿದಾರರಾಗಿದ್ದರು. ಪ್ರತಿವಾದಿಗಳು: ಆಲ್ ಇಂಡಿಯಾ ಮುಸ್ಲಿಮ್ ಪರ್ಸನಲ್ ಲಾ ಬೋರ್ಡ್, ಜಮಾತೆ ಉಲ್ಮಾ ಹಿಂದ್ ಮತ್ತು ಭಾರತ ಸರಕಾರ. ನ್ಯಾಯಾಲಯವು ನಿಷ್ಪಕ್ಷಪಾತಿ ಸಲಹೆಗಾರರಾಗಿ ಸಲ್ಮಾನ್ ಖುರ್ಷೀದ್ ಅವರನ್ನು ನೇಮಿಸಿತ್ತು.

ವಾದಿ ಪ್ರತಿವಾದಿಗಳ ಸುದೀರ್ಘ ಸುನಾವಣೆಯ ನಂತರ ಸರ್ವೋಚ್ಚ ನ್ಯಾಯಾಲಯವು ೨೦೧೭ರ ಆಗಸ್ಟ್ ೨೨ರಂದು ಮಹತ್ವದ ತೀರ್ಪನ್ನು ನೀಡಿ ೧೪೦೦ ವರ್ಷಗಳಿಂದ ಜಾರಿಯಲ್ಲಿದ್ದ ತ್ವರಿತ ತ್ರಿವಳಿ ತಲಾಕ್ ಪದ್ಧತಿಯನ್ನು ರದ್ದುಪಡಿಸುವ ಚಾರಿತ್ರಿಕ ತೀರ್ಪನ್ನು ನೀಡಿತು. ಇದು ಸರ್ವಾನುಮತದ ತೀರ್ಪಲ್ಲ. ಆದರೂ ೩:೨ ಅನುಪಾತದ ಬಹುಮತ ತೀರ್ಪು ಎನ್ನುವುದು ಕಾನೂನಿನ ದೃಷ್ಟಿಯಿಂದ ನಿರ್ಣಾಯಕ ಮಹತ್ವವನ್ನು ಹೊಂದಿರುವ ತೀರ್ಪಾಗಿದೆ. ಮುಖ್ಯ ನ್ಯಾಯಮೂರ್ತಿ ಜೆ. ಎಸ್. ಖೇಹರ್ ಮತ್ತು ನ್ಯಾ. ಎಸ್. ಅಬ್ದುಲ್ ನಜೀರ್ ಅವರು ತ್ರಿವಳಿ ತಲಾಕ್ ಪದ್ಧತಿಯನ್ನು ಅಸಾಂವಿಧಾನಿಕ ಎಂದು ಘೋಷಿಸುವುದರ ವಿರುದ್ಧ ಇದ್ದರು. ಬಹುಮತದ ತೀರ್ಪನ್ನು ನ್ಯಾ. ಕುರಿಯನ್ ಜೋಸೆಫ್, ನ್ಯಾ. ಯು. ಯು. ಲಲಿತ್ ಮತ್ತು ನ್ಯಾ. ರೋಹಿಂಗ್ಟನ್ ಎಫ್ ನಾರಿಮನ್ ಅವರು ಬರೆದಿದ್ದಾರೆ.

## ಐತಿಹಾಸಿಕ ತೀರ್ಪು, ಯಾರಿಗೆ ಲಾಭ

ನ್ಯಾ. ಕುರಿಯನ್ ಜೋಸೆಫ್ ಅವರು, ೨೦೦೨ರ ಶಮೀಮ್ ಆರಾ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ತಾಳಿದ್ದ ನಿಲುವನ್ನು ಪುನರುಚ್ಚರಿಸುತ್ತಾ, "ತ್ರಿವಳಿ ತಲಾಕ್ ಕುರಾನಿನ ಬೋಧನೆಗೆ ವಿರುದ್ಧವಾಗಿದೆ. ಆದ್ದರಿಂದ ಅದು ಮುಸ್ಲಿಮ್ ವೈಯಕ್ತಿಕ ಕಾನೂನಿನ ಭಾಗವಾಗಿರಲು ಸಾಧ್ಯವಿಲ್ಲ. ಹೀಗಾಗಿ ಇದು ಅನುಚ್ಛೇದ ೨೫ರ ಅಡಿಯಲ್ಲಿ ರಕ್ಷಣೆಯನ್ನು ಪಡೆಯುವುದಿಲ್ಲ. ಆದ್ದರಿಂದ ಇದನ್ನು ರದ್ದುಪಡಿಸಬಹುದು" ಎಂಬ ಅಭಿಪ್ರಾಯವನ್ನು ತಾಳಿದರು.

ನ್ಯಾ. ಆರ್. ಎಫ್. ನಾರಿಮನ್ (ನ್ಯಾ. ಯು. ಯು. ಲಲಿತ್ ಅವರ ಸಹಮತಿಯೊಂದಿಗೆ) ಇನ್ನೊಂದು ಕಡೆ, ತ್ರಿವಳಿ ತಲಾಕ್ (ಕಾನೂನಿನ ಮುಂದೆ ಸಮಾನತೆ ಎಂಬ) ೧೪ನೇ ಅನುಚ್ಛೇದದ ಉಲ್ಲಂಘನೆಯಾಗಿದೆ. ಇವರೂ (೨೦೦೨ರ ಶಮೀಮ್ ಆರಾ ಪ್ರಕರಣವನ್ನಾಧರಿಸಿ) ಇದು ಪುರುಷರು ತೆಗೆದುಕೊಳ್ಳುವ ಸ್ವೇಚ್ಛಾನುಸಾರವಾದ, ಏಕಪಕ್ಷೀಯ ಕ್ರಮವಾಗಿದೆ ಎಂದರು. ಪರಿಣಾಮವಾಗಿ, ತಕ್ಷಣ ಜಾರಿಗೆ ಬರುವಂತೆ ಸರ್ವೋಚ್ಚ ನ್ಯಾಯಾಲಯ ನೀಡಿದ ತೀರ್ಪಿನಿಂದಾಗಿ ಒಂದೇ ಉಸಿರಿನಲ್ಲಿ ಮೂರು ಬಾರಿ ತಲಾಕ್ ಎಂದು ಹೇಳಿ ವಿಚ್ಛೇದನ ನೀಡುವ ಪದ್ಧತಿ ರದ್ದಾಗಿದೆ. ಹೀಗಾಗಿ ಇ-ಮೇಲ್, ವಾಟ್ಸಾಪ್ ಸಂದೇಶ, ಪತ್ರಗಳ ಮೂಲಕವೂ ವಿಚ್ಛೇದನ ನೀಡುವುದು ನಿಷಿದ್ಧ.

ಶಾಯಿರಾ ಬಾನು ಮತ್ತು ಇತರರು ತಮ್ಮ ಅರ್ಜಿಯಲ್ಲಿ ತಮ್ಮ ಪತಿ ನೀಡಿದ ತಲಾಕನ್ನು ಅಸಿಂಧುಗೊಳಿಸಿ ತಮ್ಮ ವಿವಾಹವನ್ನು ಮರುಸ್ಥಾಪಿಸುವಂತೆ ಸರ್ವೋಚ್ಚ ನ್ಯಾಯಾಲಯವನ್ನು ಕೇಳಿದ್ದರು. ಹೀಗಾಗಿ ಅವರಿಗೆಲ್ಲಾ ಈ ತೀರ್ಪಿನಿಂದ ನೇರವಾದ ಲಾಭವಾಗಿದೆ. ಆದರೆ, ತೀರ್ಪು ನೀಡಿದ ಆಗಸ್ಟ್ ೨೨ಕ್ಕಿಂತ ಮುಂಚೆ ನಡೆದ ತ್ರಿವಳಿ ತಲಾಕ್ ಪ್ರಕರಣಗಳಿಗೂ ಇದು ಪೂರ್ವಾನ್ವಯವಾಗುತ್ತದೆಯೇ? ಹೀಗೆ ಆಗಬೇಕು ಎಂದರೆ ತೀರ್ಪಿನಲ್ಲಿ ಅದು ಪೂರ್ವಾನ್ವಯ ಪರಿಣಾಮವನ್ನು ಹೊಂದಿದೆ ಎಂದು ಸ್ಪಷ್ಟವಾಗಿ ಬರೆಯಬೇಕಾಗುತ್ತದೆ. ಆದರೆ ನ್ಯಾ. ಕುರಿಯನ್ ಮತ್ತು ನ್ಯಾ. ನಾರಿಮನ್ ತಮ್ಮ ತೀರ್ಪಿನಲ್ಲಿ ಈ ರೀತಿಯಲ್ಲಿ ಹೇಳಿಲ್ಲ. ಸಾಧಾರಣ ವಾಡಿಕೆಯಂತೆ ತ್ರಿವಳಿ ತಲಾಕ್ ತೀರ್ಪಿತ್ತ ದಿನದಿಂದ ಅಸಿಂಧು ಎಂದು ಭಾವಿಸಲಾಗುತ್ತದೆ. ಆದರೆ ಎರಡೂ ನಿರ್ಧಾರಗಳನ್ನು ಐತಿಹಾಸಿಕ ದೃಷ್ಟಿಕೋನದಿಂದ ತೆಗೆದುಕೊಂಡಿರುವುದರಿಂದ ತ್ರಿವಳಿ ತಲಾಕ್ ಇತಿಹಾಸದ ಒಂದು ಘಟ್ಟದಿಂದ ಅಮಾನ್ಯ ಎಂದು ಪರಿಗಣಿಸಬಹುದಾಗಿದೆ ಎಂಬುದು ಕಾನೂನು ತಜ್ಞರ ಅಭಿಪ್ರಾಯವಾಗಿದೆ. ಆ ಪ್ರಕಾರ ೨೦೦೨ರಿಂದೀಚೆ ಆದ ತ್ರಿವಳಿ ತಲಾಕ್ ವಿಚ್ಛೇದಿತ ಮಹಿಳೆಯರಿಗೂ ಈ ತೀರ್ಪಿನ ಲಾಭ ಲಭಿಸಬೇಕು ಎಂದು ವಾದಿಸಬಹುದಾಗಿದೆ.

### ಮುಂಜಾಗ್ರತೆ

ಬೆಳಕು<br>
ಹೆಚ್ಚಿದ್ದಾಗ<br>
ದೀಪ ಉರಿಸಬಾರದು<br>
ಕತ್ತಲು<br>
ಹೆಚ್ಚಿದ್ದಾಗ<br>
ದೀಪ ಆರಿಸಬಾರದು

**ಗೀತಾ ಶಾಸ್ತ್ರಿ**<br>
ಬೆಂಗಳೂರು – ೫೬೦೦೨೮

ತ್ರಿವಳಿ ತಲಾಕ್ ಮುಸ್ಲಿಮ್ ವೈಯಕ್ತಿಕ ಕಾನೂನಿನ ಅವಿಭಾಜ್ಯ ಅಂಗವಾಗಿದೆ ಎಂಬ ಅಭಿಪ್ರಾಯವನ್ನು ತಾಳಿದ ಮುಖ್ಯ ನ್ಯಾಯಮೂರ್ತಿ ಖೇಹರ್ ಅವರು, ಅದು ಮೂಲಭೂತ ಹಕ್ಕುಗಳ ಹಾಗೆಯೇ ಅನುಚ್ಛೇದ ೨೫ರ ಅಡಿಯಲ್ಲಿ ರಕ್ಷಣೆ ಪಡೆದಿದೆ. ಅದು ಅನಿಷ್ಟ ಪದ್ಧತಿ ಎಂಬುದು ಸರಿಯೇ. ಆದರೆ ಅದನ್ನು ತೊಡೆದು ಹಾಕಲು ಸಂಸತ್ತು ಸೂಕ್ತ ಕಾನೂನನ್ನು ಜಾರಿಗೆ ತರಬೇಕಾಗುತ್ತದೆ. ಈ ಪ್ರಕ್ರಿಯೆಯನ್ನು ಸುಗಮಗೊಳಿಸಲು ಅವರ ತೀರ್ಪು ತ್ರಿವಳಿ ತಲಾಕ್‌ಗೆ ೬ ತಿಂಗಳ ತಡೆಯಾಜ್ಞೆಯನ್ನು ನೀಡಿದೆ. ಆದರೂ ಇದು ಅಲ್ಪಸಂಖ್ಯಾತ ತೀರ್ಪಾಗಿರುವುದರಿಂದ ಇದರಿಂದ ಪರಿಸ್ಥಿತಿಯಲ್ಲಿ ಯಾವುದೇ ವ್ಯತ್ಯಾಸವಾಗುವುದಿಲ್ಲ. ತಲಾಕ್ ಎ ಬಿದಾ ಅಥವಾ ತ್ವರಿತ ತ್ರಿವಳಿ ತಲಾಕ್ ತಕ್ಷಣ ಅನುಷ್ಠಾನಕ್ಕೆ ಬರುವಂತೆ ರದ್ದಾಗಿರುವುದರಿಂದ ಸರಕಾರವು ಈ ಕುರಿತು ಯಾವುದೇ ಕಾನೂನನ್ನು ಜಾರಿಗೆ ತರುವ ಅಗತ್ಯವಿಲ್ಲ ಎನ್ನುತ್ತಾರೆ ಕಾನೂನು ತಜ್ಞರು.

## ಸ್ವಪ್ರತಿಷ್ಠೆಯ ಪ್ರತಿಕ್ರಿಯೆ

ತೀರ್ಪು ಪ್ರಕಟವಾದ ಕೂಡಲೇ ದೇಶಾದ್ಯಂತ ಮುಸ್ಲಿಮ್ ಮಹಿಳೆಯರು ತಮ್ಮ ಗೆಲುವಿಗಾಗಿ ಸಂಭ್ರಮಪಡುತ್ತಿದ್ದ ಹೊತ್ತಿನಲ್ಲಿಯೇ ಪ್ರಕರಣದಲ್ಲಿ ಒಬ್ಬ ಬಲವಾದ ಪ್ರತಿವಾದಿಯಾಗಿದ್ದ ಆಲ್ ಇಂಡಿಯಾ ಮುಸ್ಲಿಮ್ ಪರ್ಸನಲ್ ಲಾ ಬೋರ್ಡ್ ತೀವ್ರ ಮುಖಭಂಗವನ್ನು ಅನುಭವಿಸಿತು. ಏಪ್ರಿಲ್ ೧೬ರಂದು ಸರ್ವೋಚ್ಚ ನ್ಯಾಯಾಲಯಕ್ಕೆ ನೀಡಿದ್ದ ಅಫಿಡವಿಟ್‌ನಲ್ಲಿ ತಲಾಕ್ ಎ ಬಿದಾ ಅನುಸರಿಸುವವರನ್ನು ಸಾಮಾಜಿಕವಾಗಿ ಬಹಿಷ್ಕರಿಸಬೇಕು; ಮತ್ತು ನಿಕಾಹ್ ಮಾಡುವಾಗ ಮದುಮಗನಿಗೆ ಒಂದೇ ಉಸಿರಿನಲ್ಲಿ ಮೂರು ತಲಾಕ್‌ಗಳನ್ನು ಹೇಳದಂತೆ ಸಲಹೆ ನೀಡಬೇಕು ಎಂದು ಎಲ್ಲಾ ಕಾಜಿಗಳು, ಇಮಾಮರು, ಮೌಲ್ವಿಗಳಿಗೆ ಸಲಹೆ ನೀಡಲಾಗುವುದು, ಈ ಒಂದು ಷರಾವನ್ನು ನಿಕಾಹ್ ನಾಮಾ (ಮದುವೆ ಒಪ್ಪಂದ)ದಲ್ಲಿ ಸೇರಿಸಲಾಗುವುದು ಎಂಬುದಾಗಿ ಒಪ್ಪಿಕೊಂಡಿತ್ತು.

'ತ್ರಿವಳಿ ತಲಾಕ್ ಒಂದು ಕೆಟ್ಟ ಪದ್ಧತಿ, ನಾವು ಅದನ್ನು ವಿರೋಧಿಸುತ್ತಲೇ ಬಂದಿದ್ದೇವೆ, ಅದರ ವಿರುದ್ಧ ಜಾಗೃತಿಯನ್ನು ಮೂಡಿಸುವ, ಅದನ್ನು ನಿರುತ್ತೇಜಿಸುವ ಕಾರ್ಯ ಮುಂದುವರಿದಿದೆ, ಮುಂದುವರಿಯುತ್ತದೆ' ಎಂದು ಹೇಳಿಕೊಳ್ಳುವ ಮಂಡಳಿಯು ಸರ್ವೋಚ್ಚ ನ್ಯಾಯಾಲಯದ ತೀರ್ಪು ತಮ್ಮ ಈ ಕಾರ್ಯಕ್ಕೆ ಬಲವನ್ನು ನೀಡುತ್ತದೆ ಎಂದು ಭಾವಿಸುವುದಿಲ್ಲ. ಬದಲಿಗೆ, ಇದು ತಮ್ಮ ವೈಯಕ್ತಿಕ ಕಾನೂನಿನ ಮೇಲೆ ನಡೆದ ದಾಳಿಯೆಂದೇ ಭಾವಿಸುತ್ತದೆ. 'ನಾವು ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ವಿರೋಧಿಸಲು ಬರುವುದಿಲ್ಲ; ಆದರೂ ನಾವು ಅದನ್ನು ಸ್ವಾಗತಿಸುವುದಿಲ್ಲ' ಎಂಬ ಅಭಿಪ್ರಾಯವನ್ನು ತಾಳುತ್ತದೆ ಮಂಡಳಿ.

ಸೆಪ್ಟೆಂಬರ್ ೧೦ರಂದು ಭೂಪಾಲ್‌ನಲ್ಲಿ ನಡೆದ ಮಂಡಳಿಯ ಕಾರ್ಯಕಾರಿ ಸಮಿತಿ ಸಭೆಗೆ ಮುನ್ನ ಸಾರ್ವಜನಿಕ ಸಭೆಯನ್ನು ಉದ್ದೇಶಿಸಿ ಮಾತಾಡಿದ ಮಂಡಳಿಯ ಸದಸ್ಯರು ಮತ್ತು ಪದಾಧಿಕಾರಿಗಳು ನೀಡಿದ ಹೇಳಿಕೆ ಅವರ ಮನೋಭಾವಕ್ಕೆ ಹಿಡಿದ ಕನ್ನಡಿಯಾಗಿದೆ. ನ್ಯೂಸ್ ೧೮ ಎಂಬ ಸುದ್ದಿವಾಹಿನಿ ಅವರ ಸಂದರ್ಶನಗಳನ್ನು ಆಧರಿಸಿ ಮಾಡಿದ ವರದಿಗಳನ್ನು ಅನುಸರಿಸುವುದಾದರೆ: ಮಂಡಳಿಯ ಸದಸ್ಯರ

ಸಾಮಾನ್ಯ ಅಭಿಪ್ರಾಯ, ಸ್ತ್ರೀಯರು 'ನಿಷ್ಪ್ರಯೋಜಕ ಮನೋಭಾವದವರು', 'ಅವಿವೇಕದ ತೀರ್ಮಾನ ತೆಗೆದುಕೊಳ್ಳುವವರು' ಆಗಿರುತ್ತಾರೆ. ಈ ಧೋರಣೆಯನ್ನೇ ಅನುಸರಿಸಿ ಮಂಡಳಿಯ ಕಾರ್ಯದರ್ಶಿ: ಮೌಲಾನ ಮುಹಮ್ಮದ್ ಉಮರೇನ್ ಮಹ್‌ಫೂಜ್ ರಹಮಾನಿ "ಇಸ್ಲಾಮಿನಲ್ಲಿ ಸ್ತ್ರೀಯರಿಗೆ ಸಮಾನ ಅಧಿಕಾರ ಏಕೆ ಕೊಟ್ಟಿಲ್ಲ? ಏಕೆಂದರೆ, ಅವರು ಶೀಘ್ರ ಕೋಪಿಗಳು, ತಮ್ಮ ಭಾವನೆ, ಮನೋವೃತ್ತಿಯ ಮೇಲೆ ಅವರಿಗೆ ನಿಯಂತ್ರಣ ಇಲ್ಲ. ಆದ್ದರಿಂದ ಇಸ್ಲಾಮಿನಲ್ಲಿರುವ ತಲಾಕ್ ಕುರಿತಾದ ಕಾನೂನು ಪುರುಷರಿಗಷ್ಟೇ ಅಲ್ಲ, ಸ್ತ್ರೀಯರಿಗೂ ನ್ಯಾಯೋಚಿತವಾಗಿದೆ. ಸ್ತ್ರೀಯರಿಗೆ ವಿಚ್ಛೇದನದ ಸಮಾನ ಅಧಿಕಾರವನ್ನು ನೀಡಿದ್ದಿದ್ದರೆ ಈ ಹೊತ್ತಿಗೆ ಅತೃಪ್ತ ವಿವಾಹಗಳಿಂದ ಹೆಚ್ಚಿನ ಕುಟುಂಬಗಳು ಮುರಿದುಹೋಗಿರುತ್ತಿದ್ದವು. ಆದ್ದರಿಂದ ಸ್ತ್ರೀಯರಿಗೆ ಹಕ್ಕುಗಳನ್ನು ಕೊಟ್ಟಿದ್ದರೂ ಅವುಗಳನ್ನು ಸೀಮಿತ ಎಲ್ಲೆಗಳಲ್ಲಿ ಕೊಡಲಾಗಿದೆ, ಇದೇ ಇಸ್ಲಾಮ್ ಧರ್ಮದ ಸೌಂದರ್ಯ."

ಸ್ತ್ರೀಯರ ಅಸ್ಮಿತೆ, ಮನೋವೃತ್ತಿ, ನಿರ್ಧಾರ ತೆಗೆದುಕೊಳ್ಳುವ ಸಾಮರ್ಥ್ಯದ ಕುರಿತು ಇವತ್ತಿಗೂ ಇಂಥ ಧೋರಣೆಯುಳ್ಳ ಮಂಡಲಿಯು 'ನಮ್ಮ ವೈಯಕ್ತಿಕ ಕಾನೂನಿನಲ್ಲಿ ಯಾವುದೇ ಹಸ್ತಕ್ಷೇಪ ಬೇಡ ಎಂದು ಮೂರು ಕೋಟಿ ಮುಸ್ಲಿಮ್ ಮಹಿಳೆಯರು ನಮಗೆ ಹೇಳಿದ್ದಾರೆ' ಎನ್ನುತ್ತದೆ. ಇದನ್ನೇ ಮುಂದುವರಿಸಿ ಮಂಡಳಿಯ ಕಾರ್ಯದರ್ಶಿ ರಹಮಾನಿಯವರು, "ನಾವು ಷರಿಯತ್‌ಅನ್ನು ಅನುಸರಿಸುತ್ತೇವೆ, ಷರಿಯತ್‌ನಲ್ಲಿ ತ್ವರಿತ ತ್ರಿವಳಿ ತಲಾಕ್‌ಗೆ ಅವಕಾಶವಿದೆ. ನಮಗೆ ತ್ರಿವಳಿ ತಲಾಕ್‌ನಲ್ಲಿ ನಂಬಿಕೆ ಇದೆ, ಅದು ಮುಂದುವರಿಯುತ್ತದೆ. ಯಾರು ತ್ರಿವಳಿ ತಲಾಕ್‌ಅನ್ನು ಅನುಸರಿಸುತ್ತಿದ್ದರೋ ಅದರಿಂದ ಅವರು ತಮ್ಮ ಪತ್ನಿಯಿಂದ ಸಂಬಂಧವನ್ನು ಕಡಿದುಕೊಳ್ಳುತ್ತಾರೆ. ಇದು ಬದಲಾಗುವುದಿಲ್ಲ. ಇದನ್ನು ಜಾರಿಗೆ ತರುವುದು ಹೇಗೆ ಎನ್ನುವುದು ನ್ಯಾಯಾಲಯ ಮತ್ತು ಸರಕಾರದ ತಲೆನೋವು" ಎಂದಿದ್ದಾರೆ. ದೇಶದ ಅತ್ಯಂತ ಹಳೆಯ ಜಮಾತ್ ಉಲ್ಮಾ ಇ ಹಿಂದ್ ಸೇರಿದಂತೆ ಹಲವು ಮುಸ್ಲಿಮ್ ಸಂಸ್ಥೆಗಳು ಇದೇ ಹಾದಿಯನ್ನು ತುಳಿದಿವೆ. 'ತ್ವರಿತ ತ್ರಿವಳಿ ತಲಾಕ್ ಮುಸ್ಲಿಮರಲ್ಲಿ ಮುಂದುವರಿಯಬೇಕು ಮತ್ತು ಅದು ಕಾನೂನುಬದ್ಧ ವಿಚ್ಛೇದನ ಎಂದು ಪರಿಗಣಿಸಲ್ಪಡಬೇಕು, ಬೇಕಾದರೆ ನೆಲದ ಕಾನೂನಿನ ಅಡಿಯಲ್ಲಿ ಶಿಕ್ಷೆಯನ್ನು ಅನುಭವಿಸಿದರೂ ಅಡ್ಡಿಯಿಲ್ಲ' ಎಂಬ ಅಭಿಪ್ರಾಯವನ್ನು ಮಂಡಿಸಿದ್ದಾರೆ.

ಇವರೆಲ್ಲರ ಆಲೋಚನೆ ಸ್ತ್ರೀಯರ ಪರವಾಗಿ ಮಾನವೀಯ ದೃಷ್ಟಿಕೋನದಿಂದ ಕೂಡಿಲ್ಲ ಎನ್ನುವುದು ಸ್ಪಷ್ಟವಾಗಿದೆ. ತ್ರಿವಳಿ ತಲಾಕ್ ಒಂದು ಅನಿಷ್ಟ ಪದ್ಧತಿಯೆಂದೆ ತಾನೇ ಭಾವಿಸುವ ಮಂಡಳಿಯು ಅದನ್ನೇ ಸರ್ವೋಚ್ಚ ನ್ಯಾಯಾಲಯ ಹೇಳಿರುವುದು ವೈಯಕ್ತಿಕ ಕಾನೂನು, ಧಾರ್ಮಿಕ ಹಕ್ಕಿಗೆ ಅಡ್ಡಿಪಡಿಸಿದಂತೆ ವಾದಿಸುತ್ತಿದೆ. ಇದು ಕೇವಲ ಪುರುಷ ಪ್ರಾಧಾನ್ಯ, ಸ್ವಪ್ರತಿಷ್ಠೆಯಿಂದ ಪೀಡಿತವಾದ ಆಲೋಚನೆ ಮತ್ತು ವರ್ತನೆಯಾಗಿದೆ.

## ಉಪ್ಪು ನೇರಳೆ

ನೋಡಿರುವೆಯಾ
ಉಪ್ಪು ನೇರಳೆಗಳನ್ನು ?
ಬಿದ್ದಲ್ಲಿ ಅವು ನೆಲವನ್ನೇ
ಕೆಂಪಾಗಿಸುವುದನ್ನು ?
ನೆಲಕ್ಕುರುಳುವುದಕ್ಕಿಂತ
ದೊಡ್ಡ ಸಂಕಟ ಇನ್ನೇನಾದರು ಇದೆಯೇ ?
ನೋಡಿರುವೆ ನಾನು
ಅದೆಷ್ಟೋ ಕಾರ್ಮಿಕರನ್ನು
ಉದ್ದುದ್ದದ ಎತ್ತರೆತ್ತರ
ಕಟ್ಟಡಗಳಿಂದ
ಕೆಳಗುರುಳಿ
ಉಪ್ಪು ನೇರಳೆ ಆಗುವುದನ್ನು.

**ಬಿ. ಎ. ಸಂವರ್ತ (ಸಾಹಿಲ್)**
'ಸತ್ಯಶ್ರೀ' ಎಂಐಜಿ, ೪ನೇ ಅಡ್ಡರಸ್ತೆ, ೬ನೇ ಮುಖ್ಯರಸ್ತೆ
ಕೆ.ಹೆಚ್.ಬಿ. ಕಾಲೋನಿ, ಹುಡ್ಕೋ, ಮಣಿಪಾಲ್ – ೫೭೬ ೧೦೪

ಇಷ್ಟಕ್ಕೂ ಆಲ್ ಇಂಡಿಯಾ ಮುಸ್ಲಿಮ್ ಪರ್ಸನಲ್ ಲಾ ಬೋರ್ಡ್ ಒಂದು ಸ್ವಯಂಪ್ರೇರಿತ ಸಂಸ್ಥೆಯಾಗಿದೆ. ಇದು ಒಂದು ಧೋರಣೆಯನ್ನು ಅನುಸರಿಸುವ ಮುಸಲ್ಮಾನರು ಒಂದಾಗಿ ಕಟ್ಟಿಕೊಂಡಿರುವ ಸರಕಾರೇತರ ಸಂಸ್ಥೆ. ಮುಂದೆ, ಅಭಿಪ್ರಾಯ ಭೇದದಿಂದಾಗಿ ಷಿಯಾ ಪಂಗಡದವರು ಇದರಿಂದ ಪ್ರತ್ಯೇಕಿತರಾಗಿ ತಮ್ಮದೇ ಆದ ಅಖಿಲ ಭಾರತ ಷಿಯಾ ವೈಯಕ್ತಿಕ ಕಾನೂನು ಮಂಡಳಿ ಸ್ಥಾಪಿಸಿಕೊಂಡರು. ಜನವರಿ ೨೦೦೭ರಲ್ಲಿ ಮುಂಬಯಿಯಲ್ಲಿ ಸ್ಥಾಪಿತವಾದ ಸ್ವಾಯತ್ತ, ಜಾತ್ಯತೀತ, ಹಕ್ಕುಗಳನ್ನಾಧರಿಸಿದ ಸಮೂಹ ಸಂಸ್ಥೆಯಾದ ಭಾರತೀಯ ಮುಸ್ಲಿಮ್ ಮಹಿಳಾ ಆಂದೋಲನದ ನಾಯಕತ್ವ ಮಹಿಳೆಯರದೇ ಆಗಿದೆ. ಭಾರತೀಯ ಸಮಾಜದಲ್ಲಿ ಮುಸ್ಲಿಮ್ ಸಮುದಾಯ, ಮುಖ್ಯವಾಗಿ ಮುಸ್ಲಿಮ್ ಮಹಿಳೆಯರು ತಮ್ಮ ಬಡತನವನ್ನು ಮತ್ತು ಉಪೇಕ್ಷಿತತೆಯನ್ನು ತಾವೇ ನಿವಾರಿಸಿಕೊಂಡು ಸಮಾನತೆ, ನ್ಯಾಯ ಮತ್ತು ಮಾನವ ಹಕ್ಕುಗಳ ಅನ್ವಯ ಘನತೆ, ಗೌರವದಿಂದ ಬದುಕುವಂತೆ ಮಾಡುವುದು ಇದರ ಧ್ಯೇಯ. ಭಾರತದ ಹದಿನೈದು ರಾಜ್ಯಗಳಲ್ಲಿ ವ್ಯಾಪಿಸಿರುವ ಈ ಆಂದೋಲನದಲ್ಲಿ ೩೦,೦೦೦ಕ್ಕೂ ಹೆಚ್ಚು ಜನ ಸದಸ್ಯರಿದ್ದಾರೆ; ಸಂಘದ ಧ್ಯೇಯವನ್ನು ಒಪ್ಪಿಕೊಳ್ಳುವ ಪುರುಷರಿಗೂ ಸದಸ್ಯತ್ವದ ಅವಕಾಶವಿದೆ. ಇದಲ್ಲದೆ, ಹನಫಿ ಇಸ್ಲಾಮಿನ ಒಂದು ಪುನರುಜ್ಜೀವಕ ಆಂದೋಲನವಾದ ದೇವಬಂದ್ ಮತ್ತು ಬರೇಲ್ವಿ ಎಂಬ ಸಂಸ್ಥೆಗಳಿವೆ. ಪ್ರತಿಯೊಬ್ಬರೂ ತಮ್ಮ ಧ್ಯೇಯೋದ್ದೇಶಗಳನ್ನು ಇಟ್ಟುಕೊಂಡು ಕೆಲಸ ಮಾಡುತ್ತಾರೆ. ಎಲ್ಲವೂ ಮುಸ್ಲಿಮ್ ಸಂಘಟನೆಗಳೇ ಆದರೂ ಇವು ಯಾವುವೂ ಇಡೀ ಭಾರತದ ಮುಸ್ಲಿಮರನ್ನು ಅಧಿಕೃತವಾಗಿ ಪ್ರತಿನಿಧಿಸುವುದಿಲ್ಲ. ಸಾಮಾನ್ಯವಾಗಿ ಆಲ್ ಇಂಡಿಯಾ ಮುಸ್ಲಿಮ್ ಪರ್ಸನಲ್ ಲಾ ಬೋರ್ಡ್ ತಾನು ಇಡೀ ಭಾರತೀಯ ಮುಸ್ಲಿಮರ ಪ್ರತಿನಿಧಿ, ತಾನು ಹೇಳಿದ್ದು ಎಲ್ಲರಿಗೂ ಅನ್ವಯ ಎನ್ನುವ ಒಂದು ಚಿತ್ರಣವನ್ನು ನೀಡುತ್ತದೆ, ಅವರನ್ನು ಉದ್ಧರಿಸುವಾಗ ಅಥವಾ ವಿರೋಧಿಸುವಾಗ ಹೆಚ್ಚಿನ ಮಾಧ್ಯಮಗಳೂ ಇದೇ ಭಾವನೆಯನ್ನು ಜನರಲ್ಲಿ ಬಿತ್ತುತ್ತವೆ. ಭಾರತೀಯ ಮುಸ್ಲಿಮರು ಪ್ರತಿಯೊಬ್ಬರೂ ಇಸ್ಲಾಮಿನ ಕಾನೂನು ಮತ್ತು ಭಾರತದ ನೆಲದ ಕಾನೂನು ಇವುಗಳಲ್ಲಿ ಸಮನ್ವಯವನ್ನು ತಂದುಕೊಂಡು ತಮ್ಮ ಜೀವನ ಕ್ರಮವನ್ನು ಅನುಸರಿಸಬಹುದು. ಧಾರ್ಮಿಕ ವೈಯಕ್ತಿಕ ಕಾನೂನುಗಳಿಂದ ಭಾರತೀಯ ನಾಗರಿಕರಾಗಿ ತಮ್ಮ ವೈಯಕ್ತಿಕ ಹಕ್ಕುಗಳಿಗೆ ಚ್ಯುತಿ ಬಂದರೆ ನಾಗರಿಕ ನ್ಯಾಯಾಲಯಗಳ ಮೊರೆ ಹೋಗಬಹುದು ಎಂಬುದನ್ನು ಮರೆಯಬಾರದು.

### ಭಿನ್ನಾಭಿಪ್ರಾಯ ಏಕೆ ?

ಇಸ್ಲಾಮ್ ವಿಧಿವಿಧಾನಗಳ ಬಗ್ಗೆ ಮಾತಾಡುವಾಗ ತಮ್ಮ ವಾದವೇ ಸರಿ ಎಂದು ಹೇಳುವಾಗ ವ್ಯಕ್ತಿಗಳು ಮತ್ತು ಸಂಸ್ಥೆಗಳು ಆಧಾರವಾಗಿ ನೀಡುವುದು ಷರಿಯತ್ ಅಥವಾ ಷರಿಯಾವನ್ನು. ಷರಿಯಾ ಎಂದರೆ, ಮುಖ್ಯವಾಗಿ ಕುರಾನ್, ಹದೀಸ್ ಮತ್ತು ಸುನ್ನತ್ ಇವುಗಳ ಬೋಧನೆ, ಉಪದೇಶ, ದೈವಾಜ್ಞೆಗಳನ್ನು ಆಧರಿಸಿ ರೂಪುಗೊಂಡ ಇಸ್ಲಾಮಿ ಕಾನೂನು ವ್ಯವಸ್ಥೆ. ಅಪರಾಧ, ರಾಜಕೀಯ ಮತ್ತು ಆರ್ಥಿಕ ವಿಚಾರಗಳಲ್ಲದೆ ಲೈಂಗಿಕ ಸಂಭೋಗ, ನೈರ್ಮಲ್ಯ, ಆಹಾರ, ಆರಾಧನೆ, ಉಪವಾಸದಂಥ ವೈಯಕ್ತಿಕ ವಿಚಾರಗಳು; ದೈನಂದಿನ ಶಿಷ್ಟಾಚಾರ ಇವುಗಳನ್ನೂ ಷರಿಯಾ ಒಳಗೊಳ್ಳುತ್ತದೆ. ಇದರ ಅನ್ವಯದಲ್ಲಿಯೂ ಸುನ್ನಿ ಮತ್ತು ಷಿಯಾ; ಮತ್ತು ಹನಫಿ, ಮಾಲಿಕಿ, ಷಾಫೀ, ಹನಬಾಲಿ ಮತ್ತು ಜಫರಿ ಎಂಬ ನ್ಯಾಯಶಾಸ್ತ್ರ ಪಂಥಗಳ ಭೇದವಿದೆ.

ಸೌದಿ ಅರೇಬಿಯಾ, ಸುಡಾನ್, ಇರಾನ್, ಅಫ್ಘಾನಿಸ್ತಾನ್, ಪಾಕಿಸ್ತಾನ್, ಯೆಮೆನ್ ಮುಂತಾದ ಮುಸ್ಲಿಮ್ ರಾಷ್ಟ್ರಗಳಲ್ಲಿ ಷರಿಯತ್, ಶಾಸನದ ಪ್ರಮುಖ ಅಂಗವಾಗಿದೆ. ಮುಸ್ಲಿಮ್ ಜನಸಂಖ್ಯೆ ಇದ್ದರೂ ಮುಸ್ಲಿಂ ಆಡಳಿತವಿಲ್ಲದ ಹೆಚ್ಚಿನ ರಾಷ್ಟ್ರಗಳಲ್ಲಿ ಷರಿಯಾವನ್ನು ಅನುಸರಿಸುವುದಿಲ್ಲ; ಅಥವಾ ಭಾಗಶಃ ಅನುಸರಿಸುತ್ತಾರೆ. ಷರಿಯಾದಲ್ಲಿ ಸಾಕಾರಗೊಂಡ ಅಪರಾಧ, ನ್ಯಾಯಾಂಗ ಪ್ರಕ್ರಿಯೆ ಮತ್ತು ನ್ಯಾಯಗಳು ಜಾತ್ಯತೀತ ಕಾನೂನಿಗಿಂತ ಭಿನ್ನವಾಗಿವೆ. ಆದ್ದರಿಂದ ಷರಿಯಾ, ಜಾತ್ಯತೀತ ಸರಕಾರಗಳು, ಮಾನವಹಕ್ಕುಗಳು, ವ್ಯಕ್ತಿಯ ಆಲೋಚನಾ ಸ್ವಾತಂತ್ರ್ಯ ಮತ್ತು ಮಹಿಳೆಯರ ಹಕ್ಕುಗಳ ವಿಚಾರದಲ್ಲಿ ಸಂಗತವಾಗದೇ ಇರುವ ಕುರಿತು ನಿರಂತರ ವಿವಾದ ಇದ್ದೇ ಇದೆ.

ಷರಿಯಾ ಕಾನೂನಿಗೆ ಪವಿತ್ರವಾದ ಮತ್ತು ಮುಖ್ಯವಾದ ಆಧಾರ ಕುರಾನ್. ಕುರಾನ್ ಎಂಬುದು ಸ್ವತಃ ಅಲ್ಲಾಹ್‌ನೇ ಪ್ರವಾದಿ ಮುಹಮ್ಮದರ ಮೂಲಕ ಜಗತ್ತಿಗೆ ನೀಡಿದನೆಂದು ನಂಬಲಾಗುವ ಸಂದೇಶಗಳ ಸಂಕಲನ. ಪ್ರವಾದಿಯವರಿಗೆ ಇಂಥ ಸಂದೇಶಗಳು ಒಂದೇ ಸಲಕ್ಕೆ, ಅಥವಾ ನಿರಂತರವಾಗಿ ಪ್ರಕಟಗೊಂಡಿಲ್ಲ. ಬದಲಿಗೆ ಕ್ರಿ. ಶ. ೬೧೦ರಿಂದ ೬೩೨ರವರೆಗೆ, ಎಂದರೆ ಸುಮಾರು ೨೨ ವರ್ಷಗಳ ಕಾಲ ಸನ್ನಿವೇಶದ ಅಗತ್ಯಕ್ಕೆ ತಕ್ಕಂತೆ ಆಗಾಗ ಅವತೀರ್ಣಗೊಂಡವು. ಪ್ರವಾದಿಯವರ ನಿಧನಾನಂತರ ಮೊದಲನೆಯ ಖಲೀಫಾ ಅಬೂಬಕರ್ ಅವರ ಯೋಜನೆಯ ಪ್ರಕಾರ, ಜೈದ್ ಎಂಬುವರ ನೇತೃತ್ವದಲ್ಲಿ ರಚಿಸಲಾದ ಸಮಿತಿಯು ಇವುಗಳನ್ನು ಸಂಕಲಿಸಿ ಒಂದು ಹಸ್ತಪ್ರತಿಯನ್ನು ತಯಾರಿಸಿತು. ಮುಂದೆ, ಮೂರನೇ ಖಲೀಫಾ ಉಸ್ಮಾನ್‌ರ ಕಾಲದಲ್ಲಿ, ಕ್ರಿ. ಶ. ೬೫೦ರಲ್ಲಿ, ಎಂದರೆ ಪ್ರವಾದಿಯವರ ನಿಧನದ ೧೮ ವರ್ಷಗಳ ನಂತರ, ಕುರಾನ್‌ನ ಅಧಿಕೃತ ಪ್ರತಿಯನ್ನು ತಯಾರಿಸಲಾಯಿತು.

ಕುರಾನಿನಲ್ಲಿ ಹೇಳಿರುವ ಹಾಗೆಯೇ ಅದರಲ್ಲಿ ಎರಡು ಬಗೆಯ ಆಯತ್‌ಗಳಿವೆ: ಮೊಹಕಮಾತ್ (ಸಂಪೂರ್ಣ ಸ್ಪಷ್ಟ ಮತ್ತು ಸರಳ) ಮತ್ತು ಮುತಶಬಿಹತ್ (ಸಾಂಕೇತಿಕ ಅಥವಾ ವ್ಯಾಖ್ಯಾನವನ್ನು ಬಯಸುವವು). ಇವುಗಳಿಗೆ ಅನೇಕ ಅರ್ಥಗಳಿರಲು ಸಾಧ್ಯ. ಕುರಾನ್ ಎನ್ನುವುದು ವ್ಯವಸ್ಥಿತವಾಗಿ ರಚಿತವಾದ ಕಾನೂನು ಗ್ರಂಥವಲ್ಲ. ತಲಾಕ್ ಬಗ್ಗೆ ಇರುವ ಆಯತ್‌ಗಳು ಸುಲಭವಾಗಿ ಅರ್ಥವಾಗುವಂತಿವೆ, ಆದರೂ ಇವುಗಳ ಕುರಿತು ಮುಸ್ಲಿಮರಲ್ಲಿ ಭಿನ್ನಾಭಿಪ್ರಾಯವಿದೆ. ಜನಸಾಮಾನ್ಯರಲ್ಲಷ್ಟೇ ಅಲ್ಲ, ವಿದ್ವಾಂಸರಲ್ಲಿಯೂ ಕೂಡ. ಏಕೆ? ವಿವರವಾಗಿ ಇದೆ. ತಮ್ಮ ಪಂಥದ ಹಿನ್ನೆಲೆಯಲ್ಲಿ ನೋಡದೆ ನೇರವಾಗಿ ನೋಡಿದರೆ ಅರ್ಥ ಸ್ಪಷ್ಟವಾಗಿದೆ. ವಿವಿಧ ಪಂಗಡಗಳ ವಿದ್ವಾಂಸರು ತಮ್ಮ ಮೂಗಿನ ನೇರಕ್ಕೆ ಮಾಡುವ ವ್ಯಾಖ್ಯಾನಗಳು ಜನರನ್ನು ಗೊಂದಲದಲ್ಲಿ ಕೆಡವುತ್ತದೆ.

ಇಸ್ಲಾಮಿ ಕಾನೂನು (ಷರಿಯತ್)ನ ರಚನೆಯಲ್ಲಿ ಕುರಾನ್, ಹದೀಸ್‌ಗಳ ಹಾಗೆಯೇ ಸುನ್ನತ್ ಕೂಡ ಪ್ರಭಾವವನ್ನು ಬೀರುತ್ತವೆ. ಮುಸಲ್ಮಾನರ ಪ್ರಕಾರ ಪ್ರವಾದಿ ಮುಹಮ್ಮದ್ ಅತ್ಯುತ್ತಮ ಮಾದರಿಯಾಗಿದ್ದರು; ಹಾಗಾಗಿ ಅನುಕರಣಾರ್ಹರಾಗಿದ್ದಾರೆ. ಅವರ ಬೋಧನೆಗಳು, ಮಾತುಗಳು, ಕಾರ್ಯಗಳು, ವರ್ತನೆಗಳು, ಅಭ್ಯಾಸಗಳು, ಪ್ರಕರಣಗಳಲ್ಲಿ ತೋರಿದ ಮೌನಸಮ್ಮತಿಗಳು ಇವೆಲ್ಲವುಗಳ ಮೌಖಿಕವಾಗಿ ಸಾಗಿಬಂದ ದಾಖಲೆಗಳನ್ನು ಸುನ್ನತ್ ಎನ್ನಲಾಗುತ್ತದೆ. ಸುನ್ನತ್, ಇಸ್ಲಾಮ್ ತಾತ್ವಿಕಸಿದ್ಧಾಂತ ಮತ್ತು ಕಾನೂನುಗಳಿಗೆ, ಕುರಾನ್‌ನೊಂದಿಗೆ ಆಧಾರವಾದ ಎರಡನೆಯ ಮೂಲ.

ಷರಿಯಾಗೆ ಮೂರನೇ ಆಧಾರ ಹದೀಸ್. ಯಾವುದೇ ವಿಚಾರದ ಕುರಿತು ಪ್ರವಾದಿ ಮುಹಮ್ಮದರು ಏನನ್ನು ಹೇಳಿದರು ಎಂಬುದನ್ನು ಉದ್ಧರಿಸುವ ಉದ್ದೇಶದ ಪದಶಃ ವರದಿಗಳ ಸಂಗ್ರಹ. ಹದೀಸ್ ಎಂಬುದರ ಶಬ್ದಾರ್ಥವೇ 'ವರದಿ', 'ನಿರೂಪಣೆ' ಎಂದು. ಹದೀಸ್ ಸಾಹಿತ್ಯಕ್ಕೆ ಆಧಾರ, ಪ್ರವಾದಿ ಮುಹಮ್ಮದರು ನಿಧನರಾದ ನಂತರ ಸಮಾಜದಲ್ಲಿ ಪ್ರಚಲಿತವಿದ್ದ ಮೌಖಿಕ ವರದಿಗಳು. ಕುರಾನ್‌ಅನ್ನು ಇಸ್ಲಾಮಿ ರಾಷ್ಟ್ರವಾದ ಮದೀನಾದಲ್ಲಿ ಅಧಿಕೃತವಾಗಿ ಸಂಕಲಿಸಲಾಗಿತ್ತು; ಆದರೆ ಹದೀಸ್ ಹೀಗೆ ಕೇಂದ್ರೀಯ ಪ್ರಾಧಿಕಾರದಿಂದ ಸಂಕಲನಗೊಂಡಿಲ್ಲ; ಬದಲಿಗೆ ಪ್ರವಾದಿಯವರ ನಿಧನದ ಹಲವು ತಲೆಮಾರುಗಳ ನಂತರ, ಎಂದರೆ ಎಂಟು ಮತ್ತು ಒಂಭತ್ತನೆಯ ಶತಮಾನದಲ್ಲಿ ಹದೀಸ್‌ಗಳ ಮೌಲ್ಯಮಾಪನ ಮತ್ತು ಸಂಗ್ರಹಕಾರ್ಯ ನಡೆಯಿತು. ಇದರಲ್ಲಿಯೂ ಹಲವು ಸಂಗ್ರಹಗಳು ಪ್ರಚಲಿತ ಇವೆ. ಕೆಲವೊಮ್ಮೆ ಒಂದೇ ಘಟನೆ ವಿವಿಧ ಸಂಗ್ರಹಗಳಲ್ಲಿದ್ದರೂ, ಇಸ್ಲಾಮಿನ ವಿವಿಧ ಪಂಗಡಗಳು ತಮ್ಮದೇ ಆಯ್ಕೆಯ ಹದೀಸ್‌ಅನ್ನು ಅಧಿಕೃತವೆಂದು ಭಾವಿಸುತ್ತಾರೆ.

ಹೀಗಾಗಿ ಕುರಾನ್ ಸಂಕಲನಗೊಂಡ ನಂತರ ಅದರ ಪಠ್ಯದಲ್ಲಿ ಯಾವುದೇ ಬದಲಾವಣೆ, ತಿದ್ದುಪಡಿ ಆಗಿಲ್ಲ ಎನ್ನುವುದು ಸತ್ಯ. ಆದರೆ ಕಾಲಾಂತರದಲ್ಲಿ ವಿವಿಧ ದೇಶಗಳ ಮೂಲ ಸಾಂಸ್ಕೃತಿಕ, ರಾಜಕೀಯ, ಆರ್ಥಿಕ ಹಿನ್ನೆಲೆಗೆ ತಕ್ಕಂತೆ ಕುರಾನಿನ ಆಯಾಗಳನ್ನು ಅರ್ಥೈಸಿಕೊಳ್ಳುವುದರಲ್ಲಿ ಹಲವು ವಿದ್ವಾಂಸರ ನಡುವೆ ಭಿನ್ನಾಭಿಪ್ರಾಯವಿರುವುದೂ ಸತ್ಯವೆ. ಮಾತು ಮಾತಿಗೆ ಇನ್ಷ್‌ಅಲ್ಲಾಹ್ (ದೇವರ ಇಚ್ಛೆಯಿದ್ದರೆ ಹಾಗೇ ಆಗಲಿ), ಮಾಶಅಲ್ಲಾಹ್ (ದೇವರ ಕೃಪೆ), ಸುಭಾನ್‌ಅಲ್ಲಾಹ್ (ದೇವರಿಗೆ ಮಹಿಮೆ) ಮುಂತಾಗಿ ಸ್ತುತಿಸುವ ಮುಸಲ್ಮಾನರು ದೇವರ ಆದೇಶವಾದ ಕುರಾನನ್ನು ಸ್ವತಃ ಅಧ್ಯಯನ ಮಾಡಬೇಕು. ಅದರ ಬೋಧನೆಗಳಲ್ಲಿ ಮಾನವೀಯವಾದ, ಸ್ತ್ರೀಪುರುಷರನ್ನು, ಬಡಬಗ್ಗರನ್ನು ಸಮಾನವಾಗಿ ಗುರುತಿಸುವ ಆದೇಶಗಳನ್ನು ಅರ್ಥ ಮಾಡಿಕೊಂಡು ಅನುಸರಿಸಬೇಕು. ಆಗ ತಮಗೆ ಮಾತ್ರ ತಿಳಿದಿದೆ ಎಂದು ನಮ್ಮ ಅಜ್ಞಾನವನ್ನು ಶೋಷಿಸುವ ಮಧ್ಯವರ್ತಿಗಳ ಹಾವಳಿ ಕಡಿಮೆಯಾಗಿ ಇಸ್ಲಾಮ್ ಅನುಸರಣೆ ಹೆಚ್ಚು ಶುದ್ಧವಾಗುತ್ತದೆ. ಪ್ರವಾದಿ ಮುಹಮ್ಮದ್ ಹೇಳುತ್ತಾರೆ: "ಯಾರು ತಮ್ಮ ಪತ್ನಿಗೆ ಅತ್ಯುತ್ತಮರಾಗಿರುತ್ತಾರೋ ಅವರು ದೇವರ ದೃಷ್ಟಿಯಲ್ಲಿ ಅತ್ಯುತ್ತಮ ವ್ಯಕ್ತಿಗಳಾಗಿರುತ್ತಾರೆ."

**ಎಂ. ಅಬ್ದುಲ್ ರೆಹಮಾನ್ ಪಾಷ**
'ನಮ್ಮನೆ', ನಂ. ೮೧/೩೭-೩, ೪ನೇ ಅಡ್ಡರಸ್ತೆ, ೧೨ನೇ 'ಡಿ' ಮುಖ್ಯರಸ್ತೆ, ಶಿವನಗರ, ಬೆಂಗಳೂರು – ೧೦

# ಬಾ ನೀನೂ ನನ್ನೊಂದಿಗಿರು



ಅಂದು
ನಾನು ಭಗತ್, ರಾಜಗುರು, ಸುಖದೇವ.
ನಿನ್ನೆ ಮೊನ್ನೆ
ನಾನು ದಾಭೋಲ್ಕರ್, ಪನ್ಸಾರೆ, ಕಲಬುರ್ಗಿ.
ಇಂದು
ನಾನು ಗೌರಿ.
ನಾಳೆ
ನಾನು
ನಾನಾಗಿಯೇ ಇರಬಯಸುತ್ತೇನೆ.
ಕಾರಣ
ಎಲ್ಲರಿಗೂ ಅವರವರ
ಗಂಡ ಹೆಂಡತಿ, ಅಪ್ಪ ಅವ್ವ,
ಮಗ ಮಗಳು, ಅಣ್ಣ ತಮ್ಮ
ಅಕ್ಕ ತಂಗಿ ಎಲ್ಲರೂ ಬೇಕು,
ಯಾಕೆಂದರೆ ಅವರೆಲ್ಲ
ಎಷ್ಟು ಒಳ್ಳೆಯವರು, ಎಷ್ಟು ಸುಂದರರು
ಎಂಬುದನ್ನು ಮೊಮ್ಮಕ್ಕಳಿಗೆ ತೋರಿಸಬೇಕು.
ಅದಕ್ಕಾಗಿ
ಕರುಳಬಳ್ಳಿಯನ್ನು
ಕತ್ತರಿಸುವ ಕಟುಕರು
ಇಲ್ಲವಾಗುವವರೆಗೂ
ನಾನು
ನನ್ನ ಹೆಸರಿನೊಂದಿಗೇ
ಹೋರಾಡುತ್ತೇನೆ.
ಬಾ
ನೀನೂ ನಿನ್ನ ಹೆಸರಿನೊಂದಿಗೆ
ನನ್ನೊಂದಿಗಿರು.

**ಡಾ॥ ಸಿದ್ದನಗೌಡ ಪಾಟೀಲ**
'ಹೊಸತು', ಬೆಂಗಳೂರು – ೫೬೦ ೦೦೧



# ಧರ್ಮಗಳ ಧರ್ಮವಾದ 'ಮಾನವ ಧರ್ಮ' ಮನುಕುಲದ ಸಂಜೀವಿನಿ

**ಜ. ಹೊ. ನಾರಾಯಣಸ್ವಾಮಿ**

**ಮ**ನುಷ್ಯನನ್ನು ಹೊರತುಪಡಿಸಿದರೆ ಮತ್ತಾವ ಜೀವಿಗಳೂ 'ದೇವರು–ಧರ್ಮ'ಗಳನ್ನು ಹುಟ್ಟುಹಾಕಿಕೊಂಡಿಲ್ಲ. ಮನುಷ್ಯ ಮಾತ್ರ ಹುಟ್ಟುಹಾಕಿಕೊಂಡಿದ್ದಾನೆ. ಇತರ ಜೀವಿಗಳು ನಿಸರ್ಗ ನಿಯಮದಂತೆ ಬದುಕಿ ಜೀವನದ ಸಾರ್ಥಕತೆಯನ್ನು ಕಂಡುಕೊಂಡು ಪುನೀತವಾಗುತ್ತವೆ. ಆದರೆ ದೇವರು – ಧರ್ಮವನ್ನು ಹುಟ್ಟುಹಾಕಿಕೊಂಡಿರುವ ಮನುಷ್ಯ ಅವುಗಳಿಂದ ಬೆಳಕನ್ನು ಕಂಡುಕೊಂಡು ಪರಿಶುದ್ಧನಾಗಬೇಕಾದವನು ಅವುಗಳ ಬಂಧನಕ್ಕೆ ಒಳಗಾಗಿ ಒಣಸಿದ್ಧಾಂತಗಳ ಬೇಗೆಯಲ್ಲಿ ಬೇಯುತ್ತಿರುವುದು ಮನುಕುಲದ ದೊಡ್ಡ ದುರಂತವೇ ಸರಿ.

ಎಲ್ಲ ಧರ್ಮಗಳೂ 'ವಿಶ್ವಶಕ್ತಿ'ಯನ್ನು 'ದೇವರು' ಎಂದು ಕರೆದು ಅವನು ಒಬ್ಬನೇ ಎಂದು ಸಾರುತ್ತವೆ. ಎಲ್ಲ ಧರ್ಮದವರೂ 'ದೇವರು' ಎಂದಷ್ಟೆ ಕರೆದರೆ ಸಮಸ್ಯೆಯೇ ಇರುವುದಿಲ್ಲ. ಆದರೆ ವಿವಿಧ ಧರ್ಮದವರು ವಿವಿಧ ಹೆಸರುಗಳನ್ನು ಇಟ್ಟು ಕರೆಯುತ್ತಾರೆ. ಹಾಗೆ ಕರೆಯುವ ಕಾರಣ ಅದು ಪ್ರತ್ಯೇಕತೆಗೆ ಕಾರಣವಾಗಿ ವಿಶ್ವ ವೈಶಾಲ್ಯತೆಗೆ ತಡೆಯೊಡ್ಡಿದಂತಾಗಿದೆ.

ಯಾವ ಹೆಸರಿನಿಂದಲೂ ಕರೆಯದೆ ದೇವರನ್ನು 'ದೇವರು' ಎಂದೇ ಕರೆಯುತ್ತಿದ್ದ ವಿವೇಕಾನಂದರನ್ನು 'ದೇವರು' ಎಂಬ ಹಳೆಯ ಪದವನ್ನೇಕೆ ಉಪಯೋಗಿಸುತ್ತೀರಿ ಎಂದು ಕೇಳಿದಾಗ ವಿವೇಕಾನಂದರು, 'ಏಕೆಂದರೆ ಇದು ನಮ್ಮ ಕೆಲಸಕ್ಕೆ ಶ್ರೇಷ್ಠ ಪದ. ಅದಕ್ಕಿಂತ ಉತ್ತಮಪದ ನಿಮಗೆ ದೊರಕಲಾರದು. ಮಾನವ ಕೋಟಿಯ ಆಕಾಂಕ್ಷೆ, ಭರವಸೆ, ಸಂತೋಷ – ಇವುಗಳೆಲ್ಲಾ ಆ ಒಂದು ಪದದಲ್ಲಿ ನೆಲೆಸಿವೆ... ಅತಿ ಶ್ರೇಷ್ಠವಾದುದೆಲ್ಲ, ಭವ್ಯವಾದುದೆಲ್ಲ, ನ್ಯಾಯಸಮ್ಮತವಾದುದೆಲ್ಲ ಮಾನವರಲ್ಲಿ ಪ್ರೀತಿಗೆ ಯೋಗ್ಯವಾದುದೆಲ್ಲ, ಮಹತ್ವಪೂರ್ಣವಾದುದೆಲ್ಲ, ವೈಭವಯುಕ್ತವಾದುದೆಲ್ಲ 'ದೇವರು' ಎಂಬ ಪದದೊಂದಿಗೆ ಮಾನಸಿಕ ಸಂಬಂಧವನ್ನು ಪಡೆದಿರುವುದು' ಎಂದಿದ್ದಾರೆ. ವಿವೇಕಾನಂದರ ಈ ವೈಜ್ಞಾನಿಕ ದೃಷ್ಟಿಕೋನ ನಮ್ಮದಾಗಬೇಕು. ಆಗ ಸಂಘರ್ಷಕ್ಕೆ ಬದಲು ಸಾಮರಸ್ಯ ಒಡಮೂಡಲು ಪ್ರೇರಣೆಯಾಗುತ್ತದೆ.

ಜಗತ್ತಿಗೆ ಬಂದ ದಾರ್ಶನಿಕರೆಲ್ಲ ತಮ್ಮ ಅಂತರಂಗದ ಅರಿವಿನಿಂದ ಸಾರ್ಥಕ ಬದುಕಿನ ದರ್ಶನ ದೀಪ್ತಿಯನ್ನು ಕರುಣಿಸಿದ್ದರೂ ಮನುಕುಲ ಅವುಗಳಿಂದ ಎಚ್ಚೆತ್ತುಕೊಳ್ಳುವುದಕ್ಕೆ ಬದಲಾಗಿ ಹುಚ್ಚೆದ್ದು ಕುಣಿಯುತ್ತಿದೆ. ಒಬ್ಬೊಬ್ಬ ದಾರ್ಶನಿಕನನ್ನೂ ಒಂದೊಂದು ಪಂಗಡಕ್ಕೆ ಸೀಮಿತಗೊಳಿಸಿಕೊಂಡು ಪ್ರತ್ಯೇಕ ಗುಂಪುಗಳಾಗಿ ಒಡೆದುಹೋಗಿವೆ. ಈ ಗುಂಪುಗುಂಪುಗಳ ನಡುವೆ ಸಂಘರ್ಷವೇರ್ಪಟ್ಟು ದೇವರು – ಧರ್ಮದ ಹೆಸರಿನಲ್ಲಿ ರಕ್ತದ ಕೋಡಿಯೇ ಹರಿದಿದೆ. ಮುಗ್ಧ ಜೀವಿಗಳ ಮಾರಣ ಹೋಮವೇ ನಡೆದಿದೆ, ನಿಲ್ಲದೆ ಇಂದೂ ನಡೆಯುತ್ತಲೇ ಇದೆ.

ಭಾರತದ ತತ್ತ್ವಜ್ಞಾನಿ ಡಾ॥ ಸರ್ವಪಲ್ಲಿ ರಾಧಾಕೃಷ್ಣನ್ ಅವರು 'ಧರ್ಮ'ವನ್ನು ಕುರಿತು 'ಪರೋಪಕಾರ ಧರ್ಮ, ಪರಪೀಡನೆ ಅಧರ್ಮ' ಎಂದು ಧರ್ಮದ ಸಾರರೂಪದ ಮಾತನ್ನು ಹೇಳಿದ್ದಾರೆ. ಹನ್ನೆರಡನೇ ಶತಮಾನದ ಬಸವಣ್ಣನವರು 'ದಯೆಯೇ ಧರ್ಮದ ಮೂಲ' ಎಂದು ಸಾರಿದ್ದಾರೆ. ಧರ್ಮದ ಈ ಸರಳ ಸೂತ್ರಗಳನ್ನು ಅರಿತುಕೊಳ್ಳದೆ ಸಿದ್ಧಾಂತಗಳ ಸುಳಿಯಲ್ಲಿ ಸಿಲುಕಿಕೊಂಡರೆ ಅನೇಕ ಒಡಕುಗಳಿಗೆ ಆಸ್ಪದವಾಗಿ ಸಂತೋಷಕ್ಕೆ ಬದಲು ಸಂಕಷ್ಟಗಳು ಸುತ್ತಿಕೊಳ್ಳುತ್ತವೆ. ಇದು ಪ್ರಾಚೀನ ಧರ್ಮ ಎಂಬ ಒಂದೇ ಕಾರಣಕ್ಕೆ ವಿಕಾಸಶೀಲ ಜೀವನ ಯಾತ್ರೆಯಲ್ಲಿ ಬದಲಾವಣೆಗೆ ಹೃನ್ಮನಗಳನ್ನು ತೆರೆಯದಿದ್ದರೆ ನಿಂತ ನೀರಿನಂತೆ ಅನೇಕ ರೋಗರುಜಿನಗಳಿಗೆ ಕಾರಣವಾಗಿಬಿಡುತ್ತದೆ. ವಿಕಾಸವೆ ಪ್ರಕೃತಿಯ ನಿಯತಿ ಎಂಬ ಸತ್ಯವನ್ನು ಮಾನ್ಯಮಾಡುವುದು ಆರೋಗ್ಯಪೂರ್ಣವಾದುದು. ನಾನೊಮ್ಮೆ ಕುವೆಂಪು ಅವರೊಡನೆ ಮಾತನಾಡುತ್ತಿರುವಾಗ 'ಸರ್, ನಿಮ್ಮ ಜೀವಿತದ ಸಿದ್ಧಿ ಆಯಿತೆ ?' ಎಂದು ಕೇಳಿದೆ. ಅದಕ್ಕೆ ಕುವೆಂಪು ಅವರು, 'ನಿಮಗೆ ನನ್ನ ಅನಿಕೇತನ ಪದ್ಯದ ಕಡೆಯ ಸಾಲು ಜ್ಞಾಪಕವಿದೆಯೆ ?' ಎಂದರು. 'ಹೌದು, ಆಗು ಆಗು ಆಗು ಆಗು' ಎಂದೆ. 'ನಿರಂತರ ಆಗುವಿಕೆಯೇ ಸೃಷ್ಟಿಯ ನಿಯತಿ. ಉಸಿರಿನ ಕಡೆಯವರೆಗೂ ಆ ವಿಕಾಸ ಯಾತ್ರೆ ನಿಲ್ಲದೆ ನಡೆಯುತ್ತಲೇ ಇರುತ್ತದೆ' ಎಂದರು. ವಿಕಾಸವೆ ಸೃಷ್ಟಿಯ ಉಸಿರು.

'ಧರ್ಮ'ವನ್ನು ಕುರಿತು ವಿವೇಕಾನಂದರು ವೈಜ್ಞಾನಿಕ ನೆಲೆಯಲ್ಲಿ ಸಾರ್ವಕಾಲಿಕವಾದ ಹಾಗೂ ಸರ್ವಸಮ್ಮತವಾದ ವ್ಯಾಖ್ಯೆಯನ್ನು ನೀಡಿದ್ದಾರೆ. ಅದೆಂದರೆ 'ಯಾರೂ ಯಾವ ಧರ್ಮಕ್ಕೂ ಜನಿಸಿದವರಲ್ಲ. ಎಲ್ಲರ ಹೃದಯ ಮೂಲದಲ್ಲೂ ಧರ್ಮವಿದೆ. ಹಾಗಾಗಿ ಜಗತ್ತಿನಲ್ಲಿ ಎಷ್ಟು ಜೀವಿಗಳಿದ್ದಾರೋ ಅಷ್ಟು ಧರ್ಮಗಳಿರಲಿ' ಎನ್ನುವುದಾಗಿದೆ. ಇದು ಧಾರ್ಮಿಕ ಬಂಧನಗಳಿಂದ ಬಂಧಿಸಿಕೊಂಡಿರುವವರ ಬಿಡುಗಡೆಯ ಬೆಳಕಾಗಿದೆ.

ಜೀವಿಗಳನ್ನು ಒಲಿದು ಒಂದಾಗಿಸುವುದು 'ಧರ್ಮ'ವೇ ಹೊರತು ಒಡೆದು ಹೋಳಾಗಿಸುವುದಲ್ಲ. 'ಧರ್ಮ'ದ ನೆಲೆ ಹೃದಯಮೂಲದ್ದು. 'ಮತ'ದ ನೆಲೆ ಮನಸ್ಸಿನ ಮೂಲದ್ದು. ನಿತ್ಯಸತ್ಯದ ನೆಲೆಯಾಗಿರುವ ಹೃದಯದ ಧರ್ಮ ಇಂದು ದೂರವಾಗಿ 'ಮತ' ಮನುಷ್ಯನ ಮನಸ್ಸನ್ನು ಮಂಗ ಮುಷ್ಟಿಯಿಂದ ಬಿಗಿದಪ್ಪಿದೆ. ಧರ್ಮದ ನೆಲೆಯಲ್ಲಿ ಅಲೌಕಿಕ ಚಿಂತನೆಗಳಿಂದ ಅರಳಬೇಕಾದ ಮನುಷ್ಯನ ಹೃದಯ ಮನಸ್ಸಿನ ಮಟ್ಟದಲ್ಲೇ ಉಳಿದು, ಮತದ ಮೋಡಿಗೆ

'ಧರ್ಮ ಬಾಯಿ ಮಾತಲ್ಲ; ನಂಬಿಕೆಯಲ್ಲ, ಸಿದ್ಧಾಂತವಲ್ಲ ಅಥವಾ ಅದೊಂದು ಕೋಮುವಾರು ಭಾವನೆಯೂ ಅಲ್ಲ. ಧರ್ಮ ಕೋಮುಗಳಲ್ಲೂ, ಸಂಘಗಳಲ್ಲೂ ಜೀವಿಸಲಾರದು. ಆತ್ಮನಿಗೂ ದೇವರಿಗೂ ಇರುವ ಸಂಬಂಧ ಇದು. ಧರ್ಮ ದೇವಸ್ಥಾನ ಕಟ್ಟುವುದರಲ್ಲಿಲ್ಲ ಅಥವಾ ಸಾಮಾಜಿಕ ಪೂಜೆಗೆ ಹೋಗುವುದರಲ್ಲಿಯೂ ಇಲ್ಲ; ಅದು ಗ್ರಂಥದಲ್ಲಿಲ್ಲ, ಮಾತಿನಲ್ಲಿಯೂ ಇಲ್ಲ, ಉಪವಾಸದಲ್ಲಿಯೂ ಇಲ್ಲ ಅಥವಾ ಸಂಸ್ಥೆಯಲ್ಲಿಯೂ ಇಲ್ಲ. ಧರ್ಮವೆಂದರೆ ಸಾಕ್ಷಾತ್ಕಾರ' ಎನ್ನುವ ವಿವೇಕಾನಂದರು, 'ಪ್ರತಿಯೊಬ್ಬರೂ ಮತ್ತೊಬ್ಬರ ಭಾವವನ್ನು ಹೀರಿಕೊಂಡು ವ್ಯಕ್ತಿತ್ವವನ್ನು ನಾಶ ಮಾಡಿಕೊಳ್ಳದೆ ತಮ್ಮ ಬೆಳವಣಿಗೆಯ ನಿಯಮದಂತೆ ಬೆಳೆಯಬೇಕು' ಎಂದಿದ್ದಾರೆ.

ಒಳಗಾಗಿ ಲೌಕಿಕ ಆಸೆ ಆಮಿಷಗಳಿಂದ ಕೆರಳುತ್ತಿದೆ, ಹೃದಯದ ಕರೆಗೆ ಜಾಣ ಕಿವುಡಾಗಿದೆ. ಇಂದಿನ ನಮ್ಮ ಶಿಕ್ಷಣವಂತೂ ಮಿಥ್ಯೆಯ ನೆಲೆಯಾದ ಮನಸ್ಸಿಗೆ ಮೊಗ ಮಾಡಿ ಸತ್ಯದ ನೆಲೆಯಾದ ಹೃದಯಕ್ಕೆ ಬೆನ್ನು ಮಾಡಿದೆ. ಇದರಿಂದಾಗಿ ಬೆಳಕಿನ ದಾರಿ ಕಾಣದಾಗಿದೆ.

'ಯಾರಿಗೆ ಧರ್ಮವೆಂದರೆ ತಮ್ಮ ಜನಾಂಗವೇ ನಂಬಿಕೊಂಡಿರುವ ಕೆಲವು ಭಾವನೆ ಮತ್ತು ಮೂಢನಂಬಿಕೆಗೆ ಸಂಪೂರ್ಣ ಒಪ್ಪಿಗೆಯನ್ನು ಕೊಡುವುದಾಗಿದೆಯೋ ಅವರು ಅಂತಹ ಭಾವನೆಗಳಿಂದ ಪಾರಾಗಬೇಕು. ಧರ್ಮ ಬಾಯಿ ಮಾತಲ್ಲ; ನಂಬಿಕೆಯಲ್ಲ, ಸಿದ್ಧಾಂತವಲ್ಲ ಅಥವಾ ಅದೊಂದು ಕೋಮುವಾರು ಭಾವನೆಯೂ ಅಲ್ಲ. ಧರ್ಮ ಕೋಮುಗಳಲ್ಲೂ, ಸಂಘಗಳಲ್ಲೂ ಜೀವಿಸಲಾರದು. ಆತ್ಮನಿಗೂ ದೇವರಿಗೂ ಇರುವ ಸಂಬಂಧ ಇದು. ಧರ್ಮ ದೇವಸ್ಥಾನ ಕಟ್ಟುವುದರಲ್ಲಿಲ್ಲ ಅಥವಾ ಸಾಮಾಜಿಕ ಪೂಜೆಗೆ ಹೋಗುವುದರಲ್ಲಿಯೂ ಇಲ್ಲ; ಅದು ಗ್ರಂಥದಲ್ಲಿಲ್ಲ, ಮಾತಿನಲ್ಲಿಯೂ ಇಲ್ಲ, ಉಪವಾಸದಲ್ಲಿಯೂ ಇಲ್ಲ ಅಥವಾ ಸಂಸ್ಥೆಯಲ್ಲಿಯೂ ಇಲ್ಲ. ಧರ್ಮವೆಂದರೆ ಸಾಕ್ಷಾತ್ಕಾರ' ಎನ್ನುವ ವಿವೇಕಾನಂದರು, 'ಪ್ರತಿಯೊಬ್ಬರೂ ಕೂಡ ಮತ್ತೊಬ್ಬರ ಭಾವವನ್ನು ಹೀರಿಕೊಂಡು ವ್ಯಕ್ತಿತ್ವವನ್ನು ನಾಶ ಮಾಡಿಕೊಳ್ಳದೆ ತಮ್ಮ ಬೆಳವಣಿಗೆಯ ನಿಯಮದಂತೆ ಬೆಳೆಯಬೇಕು' ಎಂದಿದ್ದಾರೆ. ಅವರು ಹೇಳುವ 'ಆತ್ಮನಿಗೂ ದೇವರಿಗೂ ಇರುವ ಸಂಬಂಧ' ಎನ್ನುವ ಮಾತು ನಿಜವಾದ ಧರ್ಮದ ನೆಲೆಗಟ್ಟನ್ನು ಅರಿವಿಗೆ ತಂದು ಅಂತರಂಗಕ್ಕೆ ಬೋಧಿಸುತ್ತದೆ. ಆದರೆ ಇಂದು ಏನಾಗಿದೆ ಎಂಬುದನ್ನು ಕುವೆಂಪು, 'ದೇವರ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ, ಭಕ್ತಿಯ ಪೂಜೆಯ ಹೆಸರಿನಲ್ಲಿ, ತಿರುಪತಿಯ, ಉಡುಪಿಯ, ಧರ್ಮಸ್ಥಳದ ಹೆಸರಿನಲ್ಲಿ ಜನರನ್ನು ಹೆದರಿಸಿ ಯಾವ ರೀತಿ ಸುಲಿಗೆ ಮಾಡುತ್ತಿದ್ದಾರೆ, ಮೋಸ ಮಾಡುತ್ತಿದ್ದಾರೆ ನೋಡಿ! ಹಳೆ ದೇವಸ್ಥಾನಗಳು, ಹಳೆ ದೇವರುಗಳು ಸಾಲದು ಅಂತ ಅವಿವೇಕಿಗಳು ಆ ಸಂಘ ಈ ಪರಿಷತ್ತಿನವರು ಪ್ರತಿವರ್ಷ ನೂರಾರು ದೇವಸ್ಥಾನಗಳನ್ನು ಕಟ್ಟಿಸಿ ಪ್ರತಿಗಾಮಿ ಕುತ್ಸಿತ ಸಂಸ್ಕೃತಿಯನ್ನು ಬೆಳೆಸುತ್ತಿದ್ದಾರೆ. ಜೊತೆಗೆ ಹೊಸ ಹೊಸ ದೇವರುಗಳು! ಹೊಸ ದೇವರುಗಳು ಹೆಚ್ಚಿದಷ್ಟೂ ಅನೈಕ್ಯಕ್ಕೆ ದಾರಿ ಸವೆಸಿದಂತಾಗುತ್ತದೆ, ಪ್ರತ್ಯೇಕತಾ ಮನೋಭಾವನೆಯ ಕಂದಕವನ್ನು ಅಗಲವಾಗಿ ತೋಡಿದಂತಾಗುತ್ತದೆ' ಎಂದಿದ್ದಾರೆ. ಸದ್ಯದ ಸಾಮಾಜಿಕ ನಡೆಯ ಒಳಿತು ಕೆಡುಕುಗಳನ್ನು ಸ್ಪಷ್ಟವಾಗಿ ಮನವರಿಕೆ ಮಾಡಿದ್ದಾರೆ.

ಜಂಗಮವಾಗಿರುವ 'ದೇವರು – ಧರ್ಮ' ಸ್ಥಾವರಗೊಂಡಾಗ ಅದು ಸಂಘರ್ಷಕ್ಕೆ ಕಾರಣವಾಗುತ್ತದೆ ಎಂಬುದಕ್ಕೆ ಇತಿಹಾಸವೇ ಸಾಕ್ಷಿಯಾಗಿದೆ. ಗೌತಮ ಬುದ್ಧನ ನಂತರ ಬೌದ್ಧ ಧರ್ಮ ಹೀನಯಾನ – ಮಹಾಯಾನವಾಗಿ ಹೋಳಾಗಿರುವುದು; ಮಹಾವೀರನ ನಂತರ ಜೈನಧರ್ಮ



ಶ್ವೇತಾಂಬರ – ದಿಗಂಬರವಾಗಿ ಹೋಳಾಗಿರುವುದು; ಏಸುವಿನ ನಂತರ ಕ್ರೈಸ್ತ ಧರ್ಮ ಕ್ಯಾಥೋಲಿಕ್ – ಪ್ರೊಟೆಸ್ಟೆಂಟ್ ಆಗಿ ಹೋಳಾಗಿರುವುದು; ಮೊಹಮದ್ ಪೈಗಂಬರರ ನಂತರ ಇಸ್ಲಾಂ ಧರ್ಮವು ಶಿಯಾ ಹಾಗೂ ಸುನ್ನಿ ಪಂಗಡಗಳಾಗಿ ಹೋಳಾಗಿರುವುದು ಇದಕ್ಕೆ ಸಾಕ್ಷಿಯಾಗಿದೆ. ಈ ಕಾರಣಕ್ಕಾಗಿಯೆ ಕುವೆಂಪು 'ರೂಪ ರೂಪಗಳನ್ನು ದಾಟಿ, ನಾಮಕೋಟಿಗಳನ್ನು ಮೀಟಿ, ಎದೆಯ ಬಿರಿಯೆ ಭಾವದೀಟಿ ಓ ನನ್ನ ಚೇತನ ಆಗು ನೀ ಅನಿಕೇತನ' ಎಂದಿರುವುದು. ನಿಕೇತನ ಎಂದರೆ ಮನೆ. ಅನಿಕೇತನ ಎಂದರೆ ಮನೆ ಇಲ್ಲದಿರುವುದು ಎನ್ನುವುದು ವಾಚ್ಯಾರ್ಥ. ಅದರ ಸೂಚ್ಯಾರ್ಥ ಯಾವುದೇ ಜಾತಿ, ಮತ, ಕುಲ, ಗೋತ್ರ, ಭಾಷೆ, ದೇಶಗಳಿಗೆ ಅಂಟಿಕೊಳ್ಳದೆ ಹಾಗೂ ಅವುಗಳಿಗೆ ಸೇರಿರುವ ಭ್ರಮೆಗಳನ್ನು ಹೊಂದದೆ, ಮಾನಸಿಕ ಗೋಡೆಗಳನ್ನು ಕಟ್ಟಿಕೊಂಡು ಅದರಲ್ಲಿ ಉಳಿಯದೆ, ವಿಶ್ವ ಮನಸ್ಸನ್ನು ಒಳಗೊಂಡು ಚೈತನ್ಯ ವಿಶ್ವವ್ಯಾಪಕವಾಗಬೇಕು ಎಂಬ ಮಹತ್ವದ ಅಂಶಗಳು ಅದರಲ್ಲಿ ಅಡಗಿವೆ.




"ಈ ದಿನ ಗಾಂಧಿ ಜಯಂತಿ ಕಣ್ರೀ, ಬಾಯಿತಪ್ಪಿ 'ಸ್ವಚ್ಛ ಭಾರತ' ಪದ ಬಳಸಿದರೆ ಐ ಟಿ ಅಧಿಕಾರಿಗಳು ಗುಡಿಸಲು ನಿಮ್ಮ ಮನೆಗೂ ಬರಬಹುದು ಎಚ್ಚರ."

ದೇವರು – ಧರ್ಮಗಳು ಅಂತರಂಗದ ಆವಿರ್ಭಾವಕ್ಕೆ ಕಾರಣವಾದರೆ ಮತಗಳು ಮನುಷ್ಯನ ಮನಸ್ಸನ್ನು ರಾಡಿ ಎಬ್ಬಿಸುತ್ತಿವೆ. ಪ್ರಪಂಚದಲ್ಲಿ ಈಗ ಮತಗಳು ಮೇಲ್ಗೈಯಾಗಿ ಮನುಕುಲದ ಶಾಂತಿಯನ್ನೆ ಕದಡಿಬಿಡುತ್ತಿವೆ. ಧರ್ಮ ದೂರವಾಗಿ ಧರ್ಮದ ಅಣಕಯಾತ್ರೆ ವಿಜೃಂಭಿಸುತ್ತಿದೆ. ಈ ದುರಂತವನ್ನು ಕಂಡ ಕುವೆಂಪು ಬಿಡುಗಡೆಯ ಬೆಳಕಾಗಿ

*ಸಿಲುಕದಿರಿ ಮತವೆಂಬ ಮೋಹದಜ್ಞಾನಕ್ಕೆ*
*ಮತಿಯಿಂದ ದುಡಿಯಿರೈ ಲೋಕ ಹಿತಕೆ*
*ಆ ಮತದ ಈ ಮತದ ಹಳೆಮತದ ಸಹವಾಸ*
*ಸಾಕಿನ್ನು ಸೇರಿರೈ ಮನುಜ ಮತಕೆ*
*ಓ ಬನ್ನಿ ಸೋದರರೆ ವಿಶ್ವ ಪಥಕೆ*

– ಎಂದು ಕರೆ ಕೊಡುತ್ತಾರೆ. ಪ್ರಪಂಚದಲ್ಲಿರುವ ಎಲ್ಲ ಧರ್ಮಗಳ ಕೇಂದ್ರ ಬಿಂದು 'ಮಾನವ'ನೆ ಆಗಿದ್ದಾನೆ. 'ಧರ್ಮವಿರುವುದು ಮನುಷ್ಯನಿಗಾಗಿಯೆ ಹೊರತು ಮನುಷ್ಯ ಧರ್ಮಕ್ಕಾಗಿ ಅಲ್ಲ' ಎನ್ನುವ ಡಾ॥ ಅಂಬೇಡ್ಕರ್ ಅವರ ಮಾತನ್ನು ಮಾನ್ಯ ಮಾಡಬೇಕು. ಎಲ್ಲ ಧರ್ಮಗಳಿಗಿಂತ 'ಮಾನವ' ಧರ್ಮವೇ ಸರ್ವೋತ್ಕೃಷ್ಟವಾದುದು ಎಂಬ ಸಾರ್ವಕಾಲಿಕ ಸತ್ಯವನ್ನು ಮರೆಮಾಚಬಾರದು. ಅದು ಸಾಕಾರಗೊಳ್ಳಬೇಕೆಂಬುದು ಎಲ್ಲ ಹೃದಯವಂತರ ಅಭೀಪ್ಸೆಯಾಗಿದೆ. ಈ ಹಿನ್ನೆಲೆಯಲ್ಲಿ ಭಾರತದ ಒಂಭತ್ತು ಭಾಷೆಗಳಿಗೆ ಅನುವಾದಗೊಂಡಿರುವ ನನ್ನ 'ಮಾನವರಾಗೋಣ' ಕವನದ ಎರಡು ಪಂಕ್ತಿಗಳನ್ನು ಮಾತ್ರ ಇಲ್ಲಿ ಕೊಡುತ್ತಿದ್ದೇನೆ:

**ಮಾನವರಾಗೋಣ**

*ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ*
*ಹಿಂದು ಮುಸಲ್ಮಾನ್ ಪಾರಸಿ ಕ್ರೈಸ್ತ*
*ಎಲ್ಲವೂ ಆಗಿ ಒಡಕಿಗೆ ಸಾಗಿ*
*ಬದುಕಿಯು ಸತ್ತು ಇರುವುದು ಸಾಕು ॥೧॥*

*ಭೇದವನರಿಯದ ನೀಲಿಯ ಗಗನ*
*ಒಂದೆ ಮಣ್ಣಿಂದೆಲ್ಲರ ಜನನ*
*ಒಂದೆ ದಿಕ್ಕಿನೆಲ್ಲರ ಪಯಣ*
*ನುಡಿಯಲಿ ಮಿಡಿಯಲಿ ಅಂತಃಕರಣ ॥೨॥*

ಮನುಷ್ಯನ ಘನತೆಯ ಔನ್ನತ್ಯವನ್ನು ಅಂತರಂಗದಲ್ಲಿ ದರ್ಶಿಸಿದ ಮಾನವತಾವಾದಿ ವಿವೇಕಾನಂದರು 'ಎಲ್ಲ ಜೀವರುಗಳಲ್ಲಿ ದೇವರಿದ್ದಾನೆ. ಅವನ ಹೊರತಾಗಿ ಬೇರೆ ದೇವರುಗಳು ಇಲ್ಲ. ಯಾರು ಜೀವಿಗಳಿಗೆ ಸೇವೆ ಮಾಡುತ್ತಾನೋ ಅವನು ದೇವರಿಗೆ ಮಾಡಿದಂತೆ' ಎನ್ನುವ ಮೂಲಕ ಜೀವಿಗಳ ಸೇವೆಯೆ ದೇವರ ಸೇವೆ ಎಂದಿದ್ದಾರೆ. ನಿಜವಾದ 'ಧರ್ಮ' ಎಂದರೆ ಇದೇ ಅಲ್ಲವೆ?

**ಜ. ಹೊ. ನಾರಾಯಣಸ್ವಾಮಿ**
ವಕೀಲ, ಸಾಹಿತಿ, # ೨೦೬೪/ಅ, 'ಮಾನವ' ಉತ್ತರ ಬಡಾವಣೆ
ಹಾಸನ – ೫೭೩ ೨೦೧

# ತೂಲಹಳ್ಳಿ ಅವರ ಸಂಶೋಧನೆ

ನಾನು ಓದಿದ ಪುಸ್ತಕ

ಕೃತಿ : **ಲೋಕಾಯತ ಶಾಕ್ತ–ಶೈವ ಸಂಶೋಧನಾ ಸಮೀಕ್ಷೆ**

ಮೊದಲ ಸಂಪುಟ ಪುಟ : ೭೧೨ ಬೆಲೆ : ₹ ೫೦೦
ಎರಡನೇ ಸಂಪುಟ ಪುಟ : ೪೩೬ ಬೆಲೆ : ₹ ೪೫೦
ಮೂರನೇ ಸಂಪುಟ ಪುಟ : ೫೭೨ ಬೆಲೆ : ₹ ೩೫೦

ಪ್ರಕಾಶಕರು : **ನಿವೇದಿತ ಪ್ರಕಾಶನ**
೩೪೩೭, ೪ನೇ ಮುಖ್ಯರಸ್ತೆ, ೯ನೇ ಅಡ್ಡರಸ್ತೆ
ಶಾಸ್ತ್ರೀನಗರ ಬನಶಂಕರಿ ೨ನೇ ಹಂತ, ಬೆಂಗಳೂರು–೫೬೦ ೦೨೮










ಹರಿಹರದಲ್ಲಿ ಆಂಗ್ಲಭಾಷೆಯ ಪ್ರಾಧ್ಯಾಪಕರಾಗಿರುವ ಬಸವರಾಜ್ ತೂಲಹಳ್ಳಿಯವರು ಕೆಲವು ವರುಷಗಳ ಹಿಂದೆ 'ಆಲದಮರ' ಎಂಬ ಸಂಶೋಧನ ಗ್ರಂಥವನ್ನು ಪ್ರಕಟಿಸಿದ್ದರು. ಈಗ ಅದರ ಮುಂದುವರಿಕೆಯಾಗಿ 'ಲೋಕಾಯತ ಶಾಕ್ತ ಶೈವ ಸಂಶೋಧನ ಸಮೀಕ್ಷೆ' ಎಂಬ ಹೆಸರಿನಲ್ಲಿ ಮೂರು ಸಂಶೋಧನ ಸಂಪುಟಗಳನ್ನು ಪ್ರಕಟಿಸಿದ್ದಾರೆ. ಈ ಸಂಪುಟಗಳ ಉದ್ದೇಶ ಭಾರತದಲ್ಲಿರುವ ದ್ರಾವಿಡ ಸಂಸ್ಕೃತಿಯನ್ನು ಶೋಧಿಸುವುದು; ಆರ್ಯರಿಗೂ ದ್ರಾವಿಡರಿಗೂ ನಡೆದ ಸಂಘರ್ಷ ಮತ್ತು ಕೊಡುಕೊಳೆಗಳನ್ನು ವಿಶ್ಲೇಷಿಸುವುದು; ಈ ಮೂಲಕ ಭಾರತದ ಸಾಂಸ್ಕೃತಿಕ ಇತಿಹಾಸವನ್ನು ದುಡಿಯುವ ವರ್ಗಗಳ ಹಿನ್ನೆಲೆಯಲ್ಲಿ ಕಟ್ಟಿಕೊಡುವುದು.

ಈ ಸಂಪುಟಗಳಲ್ಲಿ ಎದ್ದು ಕಾಣುವುದು ಲೇಖಕರ ಅಧ್ಯಯನದ ಹರಹು. ಅಪಾರವಾದ ಶಾಸನಗಳನ್ನು ಆಂಗ್ಲ ಮತ್ತು ಕನ್ನಡ ಭಾಷೆಗಳಲ್ಲಿರುವ ವಿವಿಧ ಸಂಶೋಧನ ಕೃತಿಗಳನ್ನು ಲೇಖಕರು ಓದಿರುವರು. ಅವರು ಅಧ್ಯಯನಿಸಿರುವ ಬಹುತೇಕ ಗ್ರಂಥಗಳು ತತ್ವಶಾಸ್ತ್ರ ಹಾಗೂ ಮತಪಂಥಗಳಿಗೆ ಸಂಬಂಧಪಟ್ಟವು. ಈಗ ಭಾರತವು ಮತಧರ್ಮಗಳು ಬಲಪಂಥೀಯ ರಾಜಕಾರಣದ ಸುಲಭ ಅಸ್ತ್ರವಾಗಿವೆ; ಧರ್ಮಗಳ ಬಗೆಗಿನ ತಮ್ಮ ಸಾಂಪ್ರದಾಯಿಕ ಗ್ರಹಿಕೆ ಹಾಗೂ ವೈಚಾರಿಕ ಸೆಡವಿನಿಂದ ಜನಪರ ಚಳುವಳಿಗಳು ಸಮುದಾಯಗಳ ಜತೆ ಸಾವಯವ ಸಂಬಂಧವನ್ನು ಕಡಿದುಕೊಂಡು ನಷ್ಟ ಅನುಭವಿಸುತ್ತಿವೆ. ಈ ಹಿನ್ನೆಲೆಯಲ್ಲಿ ಧರ್ಮ, ಮತಪಂಥ ಮತ್ತು ತತ್ವಶಾಸ್ತ್ರಗಳ ಅಧ್ಯಯನವನ್ನು ಹೊಸ ದೃಷ್ಟಿಕೋನ ಮತ್ತು ಆಶಯದಿಂದ ಅಧ್ಯಯನ ಮಾಡುವುದು ಅಗತ್ಯವಾಗಿದೆ. ಈ ಕಾರ್ಯವನ್ನು ವಿಭಿನ್ನ ದೃಷ್ಟಿಕೋನಗಳಲ್ಲಿ ಬಹಳ ಹಿಂದಿನಿಂದಲೂ ಶಂಬಾ ಜೋಶಿ, ಎಂ.ಎಂ. ಕಲಬುರ್ಗಿ, ಕೆ. ಜಿ. ನಾಗರಾಜಪ್ಪ, ಡಿ. ಆರ್. ನಾಗರಾಜ, ಎಸ್. ಎಸ್. ಹಿರೇಮಠ ಮಾಡಿರುವರು. ನಟರಾಜ ಬೂದಾಳು, ಲಕ್ಷ್ಮೀಪತಿ ಕೋಲಾರ, ಪುರುಷೋತ್ತಮ ಬಿಳಿಮಲೆ ಮುಂತಾದವರು ಮಾಡುತ್ತಿರುವರು. ತೂಲಹಳ್ಳಿಯವರು ಈ ಹಾದಿಯಲ್ಲಿ ತಮ್ಮದೇ ಆದ ನಡೆಯನ್ನು ಮಾಡಿದಂತೆ ಈ ಸಂಪುಟಗಳಿವೆ.

ಸಮಕಾಲೀನ ರಾಜಕೀಯ ಸಾಮಾಜಿಕ ಸಾಂಸ್ಕೃತಿಕ ಹೋರಾಟಗಳಿಗೆ ರಾಜಕೀಯ ಪ್ರಜ್ಞೆಯಷ್ಟೇ ಮುಖ್ಯವಾದುದು ಪರಂಪರೆಯ ಪ್ರಜ್ಞೆ. ಚಳುವಳಿಯ ಹಿನ್ನೆಲೆಯಿಂದ ಬಂದಿರುವ ಪೂರ್ವಸೂರಿಗಳು ತಮ್ಮತಮ್ಮ ಚಾರಿತ್ರಿಕ ಸಂದರ್ಭಗಳಲ್ಲಿ ಅಧಿಕಾರಸ್ಥರ ವಿರುದ್ಧ ಮತ್ತು ಜನಸಮುದಾಯಗಳ ಪರವಾಗಿ ಮಾಡಿದ ಚಿಂತನೆ ಮತ್ತು ಹೋರಾಟಗಳ ಚರಿತ್ರೆಯನ್ನು ಸಹ ತೂಲಹಳ್ಳಿಯವರು ಈ ಸಂಪುಟಗಳ ಮುಖೇನ ಕಟ್ಟಿಕೊಡಲು ಯತ್ನಿಸುತ್ತಿರುವರು. ಈ ಹಿನ್ನೆಲೆಯಲ್ಲಿಯೇ ಅವರು ಮೊದಲೆರಡು ಸಂಪುಟಗಳನ್ನು

ಅಪಾರವಾದ ಶಾಸನಗಳನ್ನು ಆಂಗ್ಲ ಮತ್ತು ಕನ್ನಡ ಭಾಷೆಗಳಲ್ಲಿರುವ ವಿವಿಧ ಸಂಶೋಧನ ಕೃತಿಗಳನ್ನು ಲೇಖಕರು ಓದಿರುವರು. ಅವರು ಅಧ್ಯಯನಿಸಿರುವ ಬಹುತೇಕ ಗ್ರಂಥಗಳು ತತ್ವಶಾಸ್ತ್ರ ಹಾಗೂ ಮತಪಂಥಗಳಿಗೆ ಸಂಬಂಧಪಟ್ಟವು. ಈಗ ಭಾರತವು ಮತಧರ್ಮಗಳು ಬಲಪಂಥೀಯ ರಾಜಕಾರಣದ ಸುಲಭ ಅಸ್ತ್ರವಾಗಿವೆ; ಧರ್ಮಗಳ ಬಗೆಗಿನ ತಮ್ಮ ಸಾಂಪ್ರದಾಯಿಕ ಗ್ರಹಿಕೆ ಹಾಗೂ ವೈಚಾರಿಕ ಸೆಡವಿನಿಂದ ಜನಪರ ಚಳುವಳಗಳು ಸಮುದಾಯಗಳ ಜತೆ ಸಾವಯವ ಸಂಬಂಧವನ್ನು ಕಡಿದುಕೊಂಡು ನಷ್ಟ ಅನುಭವಿ ಸುತ್ತಿವೆ. ಈ ಹಿನ್ನೆಲೆಯಲ್ಲಿ ಧರ್ಮ, ಮತಪಂಥ ಮತ್ತು ತತ್ವಶಾಸ್ತ್ರಗಳ ಅಧ್ಯಯನವನ್ನು ಹೊಸ ದೃಷ್ಟಿಕೋನ ಮತ್ತು ಆಶಯದಿಂದ ಅಧ್ಯಯನ ಮಾಡುವುದು ಅಗತ್ಯವಾಗಿದೆ.

ಡಾ॥ ರಹಮತ್ ತರೀಕೆರೆ

“ಕನ್ನಡ ನಾಡಿನ ಎಲ್ಲಾ ಪ್ರಗತಿಪರ ಚಿಂತಕರೂ ಹಾಗೂ ಸಾಹಿತಿಗಳಿಗೆ, ಹೋರಾಟಗಾರರಿಗೆ” ಅರ್ಪಿಸಿದ್ದಾರೆ. ಮೂರನೆಯ ಸಂಪುಟವನ್ನು ಚಳುವಳಿಗಾರ ವಿದ್ವಾಂಸರಾಗಿದ್ದು ದಿ| ಎಸ್. ಎಸ್. ಹಿರೇಮಠ ಅವರಿಗೆ ಅರ್ಪಿಸಿದ್ದಾರೆ. ಇದು ಅವರ ಸಂಶೋಧನೆಯ ಆಶಯವನ್ನು ಸೂಚಿಸುತ್ತದೆ.

ಅವರ ಈ ಸಾಧನೆಗೆ ಅಭಿನಂದಿಸುತ್ತಲೇ ಅವರ ಸಂಶೋಧನೆಯ ವಿಧಾನದಲ್ಲಿರುವ ಕೆಲವು ತಾತ್ವಿಕ ಮಿತಿಗಳನ್ನು ಇಲ್ಲಿ ಸೂಚಿಸಬೇಕಿದೆ.

ಅ. ಲೇಖಕರು ಅಪಾರವಾಗಿ ಮಾಹಿತಿಯನ್ನು ಸಂಗ್ರಹ ಮಾಡಿದ್ದಾರೆ. ಆದರೆ ಮಾಹಿತಿಯ ಕಾಡಿನಲ್ಲಿ ಓದುಗರು ದಿಕ್ಕುತಪ್ಪುವಂತಾಗುತ್ತದೆ. ಮಾಹಿತಿಯ ಸಂಗ್ರಹಕ್ಕಿಂತ ಅದನ್ನು ವಿಶ್ಲೇಷಿಸುವುದು, ವ್ಯಾಖ್ಯಾನಿಸುವುದು ಸಾಂಸ್ಕೃತಿಕ ಸಂಶೋಧನೆಯಲ್ಲಿ ಮುಖ್ಯವಾದ ಕೆಲಸ. ತಮ್ಮದೇ ಮಾಹಿತಿಯ ಉಗ್ರಾಣದಲ್ಲಿರುವ ಚಿನ್ನವನ್ನು ಆಭರಣ ಮಾಡುವ ಕುಶಲತೆಯನ್ನು ಜರೂರಾಗಿ ಪಡೆದುಕೊಳ್ಳಬೇಕಿದೆ. ಆಗ ಹಳೆಯ ಪ್ರಮೇಯಗಳನ್ನು ಪ್ರಶ್ನಿಸುವುದು ಮತ್ತು ಹೊಸ ಪ್ರಮೇಯಗಳನ್ನು ಕಟ್ಟುವುದು ಸಾಧ್ಯವಾಗುತ್ತದೆ. ಈ ಬಗೆಯ ತಾತ್ವೀಕರಣದ ಕೆಲಸವು ಇಲ್ಲಿ ಕ್ಷೀಣವಾಗಿದೆ.

ಆ. ಇಲ್ಲಿ ಬೇಕಾದಷ್ಟು ಒಳನೋಟಗಳು ಚೆಲ್ಲಾಡಿವೆ. ಆದರವು ಮಾಹಿತಿಗಳ ಗೊಂಡಾರಣ್ಯದಲ್ಲಿ ಅಡಗಿಹೋಗುತ್ತವೆ. ಇರುವ ನೋಟಗಳೆಲ್ಲ ನುಲಿದು ಕೊಂಡು ಸ್ಪಷ್ಟವಾದ ಮೂರ್ತವಾದ ಪ್ರಮೇಯವಾಗಿ ರೂಪಾಂತರ ವಾಗುವುದಿಲ್ಲ. ಎಸ್. ಎಸ್. ಹಿರೇಮಠ ಮುಂತಾದವರು ಮಂಡಿಸಿರುವ ಚೌಕಟ್ಟಿಗೆ ವಿವರಗಳನ್ನು ಹೊಂದಿಸುವ ಯತ್ನ ಕೂಡ ಅವರನ್ನು, ಹಿರೀಕರ ಪ್ರಮೇಯಗಳ ವಿಸ್ತರಣಕಾರನನ್ನಾಗಿ ಉಳಿಸುತ್ತವೆ.

ಇ. ಚರಿತ್ರೆಯನ್ನು ಪುನಾರಚಿಸಲು ತನ್ನನ್ನು ಸಂಪೂರ್ಣವಾಗಿ ತೊಡಗಿಸಿ ಕೊಂಡಿರುವ ಹಾಗೂ ಆ ಕಾಯಕದಲ್ಲಿ ಮುಳುಗಿ ಹೋಗುವ ಇಲ್ಲಿನ ಸಂಶೋಧನೆಯು, ಅದರ ಎಳೆಗಳನ್ನು ಹಿಡಿದು ಸಮಕಾಲೀನ ವಿದ್ಯಮಾನಗಳಿಗೆ ಜೋಡಿಸುವ ಕೆಲಸದಲ್ಲಿ ಅಷ್ಟು ಲಕ್ಷ್ಯವಹಿಸುವುದಿಲ್ಲ. ಸಂಶೋಧನೆಯಲ್ಲಿರುವ ಮಾಹಿತಿ ಸಂಗ್ರಹ, ವಿಶ್ಲೇಷಣೆ, ವ್ಯಾಖ್ಯಾನ ಮತ್ತು ತಾತ್ವಿಕ ಪ್ರಮೇಯ ನಿರ್ಮಾಣದ ನಾಲ್ಕೂ ಹಂತಗಳು ವರ್ತಮಾನದ ಸಾಮಾಜಿಕ ಬದಲಾವಣೆಯಲ್ಲಿ ಜನರ ಆಲೋಚನಕ್ರಮವಾಗಿ ಚಳುವಳಿಗೆ ವಿವೇಕವಾಗಿ ಜೋಡಿಸುವುದು ಬಹಳ ಜರೂರಿಯಾಗಿದೆ. ಇದೇ ಉದ್ದೇಶವು ಸದರಿ ಸಂಪುಟಗಳಲ್ಲಿದೆ. ಆದರೆ ಅದು ತೀಕ್ಷ್ಣವಾಗಿಲ್ಲ.

ಈ. ಸಾಂಸ್ಕೃತಿಕ ಸಂಶೋಧನೆಯ ಫಲಿತಗಳನ್ನು ಜನಪರ ಚಳುವಳಿಗಳು ಬಳಸಿಕೊಂಡು ತಮ್ಮನ್ನು ಪುನರ್ ಸಂಘಟಿಸಿಕೊಳ್ಳುವುದು; ಸಂಶೋಧಕ ರಾದವರು ಚಳುವಳಿಗಳ ಜತೆ ವಿಮರ್ಶಾತ್ಮಕ ಅನುಸಂಧಾನ ಮಾಡುತ್ತ ಅವುಗಳಿಂದ ಅನುಭವ ಮತ್ತು ಕ್ರಿಯಾಶೀಲತೆಯನ್ನು ಪಡೆಯುವುದು, ಈಗ ಆಗಬೇಕಾದ ಕೆಲಸ. ಈ ದಿಸೆಯಲ್ಲಿ ಸಂಶೋಧನೆಯು ಹೊಸ ನುಡಿಗಟ್ಟನ್ನು ಕಂಡುಕೊಳ್ಳಬೇಕಾದ ಅಗತ್ಯವಿದೆ. ಇಲ್ಲಿರುವ ಸಂಶೋಧನೆಯು ಅಂಥ ಹೊಸ ನುಡಿಗಟ್ಟನ್ನು ಪಡೆದುಕೊಳ್ಳುವಲ್ಲಿ ಆಸಕ್ತವಾಗಿಲ್ಲ ಅನಿಸುತ್ತದೆ.

ಉ. ಸಾಂಸ್ಕೃತಿಕ ಸಂಶೋಧನೆಯು ಹೊಸತಲೆಮಾರಿನ ಓದುಗರನ್ನು ಹಾಗೂ ಬೇರೆಬೇರೆ ಕ್ಷೇತ್ರಗಳಲ್ಲಿರುವ ಆಸಕ್ತರನ್ನು ಮುಟ್ಟುವಂತೆ ತನ್ನನ್ನು ವಿಸ್ತರಿಸಿಕೊಳ್ಳಬೇಕಿದೆ. ಆಗ ಇಂತಹ ಸಂಪುಟಗಳ ಬೃಹತ್ ಗಾತ್ರವೇ ಒಂದು ತೊಡಕಾಗುವುದು. ದೊಡ್ಡ ಗ್ರಂಥಗಳಿಗಿಂತ ಚಿಕ್ಕ ಲೇಖನಗಳು ಹೆಚ್ಚು ಪ್ರಯೋಜಕ. ಈ ದೃಷ್ಟಿಯಿಂದ ಬಸವರಾಜ್ ಅವರು ತಮ್ಮ ಸಂಶೋಧನೆಯ ಸಾರವನ್ನು ಪುಟ್ಟಪುಟ್ಟ ಲೇಖನಗಳಲ್ಲಿ ಮರು ಮಂಡನೆ ಮಾಡಲು ಸಾಧ್ಯವಾದರೆ ಒಳಿತೆಂದು ಅನಿಸುತ್ತದೆ.

ಮೇಲ್ಕಾಣಿಸಿದ ಸಮಸ್ಯೆಗಳು ತೂಲಹಳ್ಳಿಯವರವು ಮಾತ್ರವಲ್ಲ, ಸಾಂಸ್ಕೃತಿಕ ಸಂಶೋಧನೆಯಲ್ಲಿ ಕೆಲಸ ಮಾಡುತ್ತಿರುವ ನನ್ನಂತಹ ಬಹುತೇಕರು ಎದುರಿಸುತ್ತಿರುವಂತಹವು. ಕನ್ನಡದಲ್ಲಿ ಧರ್ಮ ಪಂಥ ದರ್ಶನಗಳಲ್ಲಿ ಕೆಲಸ ಮಾಡುವವರೇ ಕಡಿಮೆ. ಈ ಕ್ಷೇತ್ರದಲ್ಲಿ ಕೆಲಸ ಮಾಡುವ ಉಪಕರಣ ಹಾಗೂ ವಿಧಾನ ಕೈವಶವಾಗಿರುವವರಿಗೆ ಸಂಶೋಧನೆಯ ಸಾರವನ್ನು ಸಮಕಾಲೀನ ಗೊಳಿಸುವ ರಾಜಕೀಯ ಪ್ರಜ್ಞೆಯಿರುವುದಿಲ್ಲ. ಪ್ರಖರ ವರ್ತಮಾನ ಪ್ರಜ್ಞೆ ಇರುವವರಿಗೆ ಪಾಂಡಿತ್ಯದ ಜತೆ ಆಳವಾದ ಸಂಬಂಧ ಇರುವುದಿಲ್ಲ. ಇಂತಹ ಸನ್ನಿವೇಶದಲ್ಲಿ ತೂಲಹಳ್ಳಿಯವರು ಮಾಡುತ್ತಿರುವ ಈ ಸಂಶೋಧನೆಯನ್ನು ಗಮನಿಸಬೇಕಾಗಿದೆ. ಇಲ್ಲಿನ ಬರೆಹಗಳ ಮೇಲೆ ಸಂಶೋಧನೆಯಂತಹ ಬೌದ್ಧಿಕ ಜಗತ್ತಿಗೂ ಜನಪರ ಚಳುವಳಿಗೂ ಸೇತುಬಂಧದ ಕಾರ್ಯವನ್ನು ಮಾಡಲು ಯತ್ನಿಸಿದ ದಿ| ಎಸ್. ಎಸ್. ಹಿರೇಮಠ ಅವರ ಗಾಢಪ್ರಭಾವವಿದೆ. ಅದನ್ನು ದಾಟಿಕೊಂಡು ಸಹ ಮುಂದಿನ ದಿನಗಳಲ್ಲಿ ಅವರು ಕೆಲಸ ಮಾಡಬೇಕಿದೆ.

ಈ ಮೂರೂ ಸಂಪುಟಗಳನ್ನು ನೋಡುವಾಗ ಸೋಜಿಗ ಹುಟ್ಟಿಸುವುದು ತೂಲಹಳ್ಳಿಯವರ ಬೌದ್ಧಿಕ ಸಾಹಸ. ಇದನ್ನವರು ‘ಅಪರಿಪೂರ್ಣ ದುಸ್ಸಾಹಸ’ ಎಂದು ಕರೆದುಕೊಂಡಿದ್ದಾರೆ. ವಿಶ್ವವಿದ್ಯಾಲಯಗಳಲ್ಲಿ ವಿರಾಜಮಾನರಾಗಿದ್ದು ಲಕ್ಷಾಂತರ ಸಂಬಳವನ್ನು ಪಡೆಯುವ ಕೆಲವು ಪ್ರಾಧ್ಯಾಪಕರು, ತಮ್ಮ ವೃತ್ತಿಯ ಬುನಾದಿ ಕೆಲಸವಾದ ಓದು ಬರೆಹಗಳಿಗೆ ಎಳ್ಳುನೀರು ಬಿಟ್ಟಿರುವವರು. ಕೆಲವರು ಮತ್ತಷ್ಟು ಮುನ್ನಡೆದು ತಮ್ಮ ವಿದ್ಯಾರ್ಥಿಗಳು ಬರೆದ ಬರೆಹಗಳನ್ನು ತಮ್ಮವನ್ನಾಗಿ ಪ್ರಕಟಿಸುತ್ತ, ಆಕಸ್ಮಿಕವಾಗಿ ಆಗಾಗ್ಗೆ ಸಿಕ್ಕಿಹಾಕಿಕೊಳ್ಳುತ್ತಲೂ ಇರುವರು. ವಿಶ್ವವಿದ್ಯಾಲಯಗಳು ಇಂತಹವರಿಂದಲೇ ತುಂಬಿ ಹೋಗಿವೆ ಎಂತಲ್ಲ. ಸಾಂಸ್ಕೃತಿಕ ಕಾಳಜಿಯುಳ್ಳ ವಿದ್ಯಾರ್ಥಿಸ್ನೇಹಿಯಾಗಿರುವ ವೃತ್ತಿಪರ ಘನತೆಯುಳ್ಳವರೂ ಇದ್ದಾರೆ. ಅವರ ಸಂಖ್ಯೆ ಕಡಿಮೆಯಾಗುತ್ತಿದೆ. ಕನ್ನಡವು ಶಾಸ್ತ್ರೀಯ ಭಾಷೆಯ ಸ್ಥಾನಮಾನ ಪಡೆದುಕೊಂಡಿರುವ ಹೊತ್ತಲ್ಲಿ ಇಂತಹದೊಂದು ಬೌದ್ಧಿಕ ದುಃಸ್ಥಿತಿಯಿದೆ. ಈ ಸನ್ನಿವೇಶದಲ್ಲಿ ಪದವಿ–ಪದೋನ್ನತಿಗಳ ಯಾವ ಆಕಾಂಕ್ಷೆಯೂ ಇಲ್ಲದೆ, ಯಾವ ಸಾಂಸ್ಥಿಕ ಧನಸಹಾಯವೂ ಇಲ್ಲದೆ, ಸ್ವಂತ ಖರ್ಚಿನಲ್ಲಿ ತೂಲಹಳ್ಳಿಯವರು ಇಂತಹದೊಂದು ಶ್ರಮಸಾಧ್ಯವಾದ ಕೆಲಸವನ್ನು ತಪಸ್ಸಿನಂತೆ ಮಾಡಿ ಮುಗಿಸಿದ್ದಾರೆ. ಅವರ ಛಲ ಶ್ರದ್ಧೆ ಶ್ರಮಗಳು ಆದರ ಹುಟ್ಟಿಸುತ್ತಿವೆ.

**ರಹಮತ್ ತರೀಕೆರೆ**
‘ಸೂಫಿ’, ಎಂಪಿ ಪ್ರಕಾಶನಗರ, ಹೊಸಪೇಟೆ – ೫೮೩ ೨೦೧

## ನಾನೊಂದು ಹುಚ್ಚರ ಆಶಾವಾದ

ನನ್ನನ್ನು ಸುಡಲಾರರು, ಏಕೆಂದರೆ
ನಾನು ಯಾವುದೇ ಊರಲ್ಲ.
ಯಾವುದೇ ಗೋಡೆಯೂ ಅಲ್ಲ
ನನ್ನನ್ನು ಉರುಳಿಸಲು.
ಮತ್ತೆ, ನನ್ನನ್ನು ಯಾರೂ ಅಳಿಸಲಾರರು
ಏಕೆಂದರೆ, ನಾನು ಯಾವ ಸೀಮೆಯೂ ಅಲ್ಲ.
ನೀನು ಮೇಜಿನ ಮೇಲೆ ಹಾಸಿರುವ
ಈ ಭೂಮಿಯ ಹಳೇ ನಕಾಶೆಯಲ್ಲಿ
ನಿರರ್ಥಕ ಗೆರೆಗಳನ್ನುಳಿದು ಇನ್ನೇನು ಇಲ್ಲ.
ನೀನು ನನ್ನನ್ನು ಇದರೊಳಗೆ ಎಲ್ಲಿ ಹುಡುಕುತ್ತೀಯಾ.
ನಾನೊಂದು ಹುಚ್ಚರ ಆಶಾವಾದ,
ನಾನು ಸಾಯುವುದಿಲ್ಲ,
ನಾನು ಸಾಯುವವನೂ ಅಲ್ಲ.
ಎಷ್ಟೊಂದು ಮುಗ್ಧ ನೀನು.

ಹಿಂದಿ ಮೂಲ : **ಕೈಫಿ ಆಜ್ಮಿ**
ಕನ್ನಡಕ್ಕೆ : **ನೂರುಲ್ಲಾ ತ್ಯಾಮಗೊಂಡ್ಲು**



## ಡೋಕ್ಲಾಮದಿಂದ ಕ್ಸಿಯಾಮೆನ್‌ವರೆಗೆ

ಕಳೆದ ಕೆಲ ತಿಂಗಳಿಂದ ಉಲ್ಬಣಿಸಿದ್ದ ಭಾರತ–ಚೀಣಾ–ಭೂತಾನ ಗಡಿವಿವಾದ, ಸೇನೆಗಳ ಮುಖಾಮುಖಿ ಪರಸ್ಪರ ಮಾತುಕತೆಗಳ ಮೂಲಕ ಸದ್ಯಕ್ಕೆ ಶಮನಗೊಂಡಿರುವುದು ಸ್ವಾಗತಾರ್ಹ. ಚೀಣಾದ ಕ್ಸಿಯಾಮೆನ್‌ನಲ್ಲಿ ಜರುಗಿದ 'ಬ್ರಿಕ್ಸ್' (ಬ್ರೆಜಿಲ್, ರಷ್ಯ, ಇಂಡಿಯ, ಚೀಣಾ, ದಕ್ಷಿಣ ಆಫ್ರಿಕ) ಶೃಂಗ ಸಭೆಗೆ ಮುನ್ನ ನಡೆದ ಮಾತುಕತೆ ಸಫಲಗೊಂಡಿತು. ಇದರಿಂದ ಭಾರತದ ಪ್ರಧಾನಿ 'ಬ್ರಿಕ್ಸ್' ಸಮಾವೇಶದಲ್ಲಿ ಪಾಲ್ಗೊಳ್ಳಲು, ಚೀಣೀ ಅಧ್ಯಕ್ಷ ಕ್ಸಿ ಜಿನ್‌ಪಿಂಗ್ ಜೊತೆ ಕೈ ಜೋಡಿಸಲು ಅವಕಾಶ ವಾಯಿತು. ಹಾಗೆಂದ ಮಾತ್ರಕ್ಕೆ ಚೀಣಾದೊಂದಿಗೆ ಈ ಭೂಭಾಗದಲ್ಲಿ ಉದ್ಭವಿಸಿದ್ದ ವಿವಾದ ಇತ್ಯರ್ಥಗೊಂಡಿದೆ ಅಥವಾ ಇತ್ಯರ್ಥದ ಹಾದಿಯಲ್ಲಿ ನಿರತವಾಗಿದೆ ಎಂದರ್ಥವಲ್ಲ. ತತ್‌ಕಾಲಕ್ಕೆ ಎರಡೂ ದೇಶಗಳ ಮಧ್ಯೆ ನಡೆಯುತ್ತಿದ್ದ ವಾಕ್ಸಮರಕ್ಕೆ ವಿರಾಮ ದೊರೆತಿದೆ. ಇದರಲ್ಲಿ ಯಾರೂ ಲಾಭ – ನಷ್ಟಗಳ ಲೆಕ್ಕಾಚಾರದಲ್ಲಿ ಮುಳುಗಲು ಅವಕಾಶವಿಲ್ಲ. ವಿವಾದವನ್ನು ಇತ್ಯರ್ಥಗೊಳಿಸಲು ಎರಡೂ ದೇಶಗಳು ವ್ಯವಸ್ಥೆಯೊಂದನ್ನು ರೂಪಿಸಬೇಕಾಗಿದೆ. ಪರಸ್ಪರ ವಿಶ್ವಾಸವೊಂದೇ ಈ ವಿವಾದದ ಅಂತ್ಯಕ್ಕೆ ಇರುವ ಮಾರ್ಗ. ಹಲವು ದಶಕಗಳಿಂದ ಇರುವ ಭಾರತ – ಚೀಣಾ ಗಡಿವಿವಾದ ಒಂದೆರಡು ದಿನಗಳಲ್ಲೋ, ವರ್ಷಗಳಲ್ಲೋ ಇತ್ಯರ್ಥವಾಗುವುದಲ್ಲ, ಪರಸ್ಪರ ಸಶಸ್ತ್ರ ಸಮರದಿಂದಲೂ ಇತ್ಯರ್ಥವಾಗುವುದಲ್ಲ. ಎರಡೂ ದೇಶಗಳು ಶಾಂತಿಯುತವಾಗಿ ವಿವಾದಕ್ಕೆ ತೆರೆ ಎಳೆಯುವುದು ಅಗತ್ಯ.

ಪ್ರಾದೇಶಿಕವಾಗಿ ರೂಪುಗೊಂಡ ಸ್ಥಾಪನೆಗಳ ಪೈಕಿ 'ಬ್ರಿಕ್ಸ್' ಹೆಚ್ಚು ಸಕ್ರಿಯವಾಗಿದೆ ಎನ್ನಬೇಕು. ಸ್ಥಾಪನೆಗೊಂಡ ನಂತರದಲ್ಲಿ ಈ ಸಂಘಟನೆ ಅಭಿವೃದ್ಧಿ ಕಾರ್ಯಗಳಿಗಾಗಿ ಬ್ಯಾಂಕ್ ಒಂದನ್ನು ಸ್ಥಾಪಿಸಿಕೊಂಡಿದೆ. ಕಾರ್ಯನಿರತವಾಗಿರುವ ಬ್ರಿಕ್ಸ್ ಬ್ಯಾಂಕ್ ಹಲವು ಅಭಿವೃದ್ಧಿ ಕಾರ್ಯಗಳಿಗೆ ಅಗತ್ಯವಾದ ಸಾಲ ನೀಡಿದೆ. ಪರಸ್ಪರ ಸಹಕಾರವನ್ನು ಎಲ್ಲ ರೀತಿಯಲ್ಲೂ ವರ್ಧಿಸಲು, ವಿಶ್ವಾಸ ಮೂಡಿಸಲು ಈ ಸಂಘಟನೆ ಸಹಾಯಕವಾಗಿದೆ. ಕಳೆದ ಬ್ರಿಕ್ಸ್ ಸಮಾವೇಶ ಗೋವಾದಲ್ಲಿ ನಡೆದಿತ್ತು. ಒಂಬತ್ತನೇ 'ಬ್ರಿಕ್ಸ್' ಶೃಂಗ ಸಮಾವೇಶ ಚೀಣಾದ ಕ್ಸಿಯಾಮೆನ್ ಎಂಬಲ್ಲಿ ನಡೆಯಿತು.

ಚೀಣಾದಲ್ಲಿ ನಡೆದ ಈ ಸಭೆಯಲ್ಲಿ ಭಾರತದ ಪ್ರಧಾನಿ ನರೇಂದ್ರ ಮೋದಿಯವರ ಭಾಗವಹಿಸುವಿಕೆ ಗಡಿವಿವಾದದ ಹಿನ್ನೆಲೆಯಲ್ಲಿ ಡೋಲಾಯಮಾನದಲ್ಲಿತ್ತು. ಎರಡೂ ಕಡೆ ತೋರಿದ ಸಮಚಿತ್ತತೆಯಿಂದಾಗಿ ಎಲ್ಲವೂ ಸುಗಮವಾಗಿ ನಡೆದದ್ದು ಸಮಾಧಾನಕರ ಸಂಗತಿ. ಸರ್ವ ಸಮ್ಮತಿಯಿಂದ ಅನುಮೋದನೆಯಾಗಿರುವ 'ಬ್ರಿಕ್ಸ್' ಪ್ರಕಟಣೆ ಸ್ವಾಗತಾರ್ಹ. ಅಂತರರಾಷ್ಟ್ರೀಯ ವಿದ್ಯಮಾನಗಳ ಕುರಿತು 'ಬ್ರಿಕ್ಸ್' ನಾಯಕರ ಅಭಿಪ್ರಾಯಗಳ ಸಾರ ಸಂಗ್ರಹ ಈ ದಸ್ತೈವೇಜು. ಭಾರತದ ಮಟ್ಟಿಗೆ ಭಯೋತ್ಪಾದನೆ ಕುರಿತ ಸ್ಪಷ್ಟ ನಿಲುವು ಸಮಾಧಾನಕರ ಸಂಗತಿ. ಪ್ರಮುಖವಾಗಿ ಪಾಕಿಸ್ತಾನದ ಭಯೋತ್ಪಾದನಾ ಸಂಘಟನೆಗಳಾದ ಜೈಷೇಮೊಹಮ್ಮದ್ ಮತ್ತು ಲಷ್ಕರ್ ಎ ತಾಯಿಬಾಗಳನ್ನು ಹೆಸರಿಸಿದ್ದು ವಿಶೇಷ. ಈ ವಿಷಯದಲ್ಲಿ ಚೀಣಾದ ನಿಲುವಿನಲ್ಲಿ ಯಾವುದೇ ಬದಲಾವಣೆ ಇಲ್ಲ ಎನ್ನುವುದು ಪರಿಣತರ ಅಭಿಮತ. ಏನೇ ಇದ್ದರೂ ಭಾರತದಲ್ಲಿ ಸಾಕಷ್ಟು ಹಾವಳಿ, ಹಾನಿ ಉಂಟುಮಾಡಿರುವ ಎರಡೂ ಸಂಸ್ಥೆಗಳನ್ನು ಭಯೋತ್ಪಾದಕ ಎಂದು 'ಬ್ರಿಕ್ಸ್' ಸಮಾವೇಶ ಘೋಷಿಸಿರುವುದು ಮೆಚ್ಚಬೇಕಾದ ಸಂಗತಿ. ಭಯೋತ್ಪಾದನೆಯ ವಿರುದ್ಧ ಸಮರವನ್ನು ತೀವ್ರಗೊಳಿಸಲು ಇಂಥ ಪ್ರಕಟಣೆಗಳು ಸಹಾಯಕ. ಇಂದು ಭಯೋತ್ಪಾದನೆ ಎನ್ನುವುದು ಭಾರತಕ್ಕೆ ಮಾತ್ರ ಸೀಮಿತವಾಗಿಲ್ಲ. ಅದು ಜಗತ್‌ವ್ಯಾಪಿಯಾಗಿದೆ. ಅಮೆರಿಕ ಭಯೋತ್ಪಾದನೆ ವಿರುದ್ಧ ಸಮರ ಸಾರಿ ದಶಕಕ್ಕೂ ಮೇಲಾಗಿದೆ. ಭಾರತದ ಮಟ್ಟಿಗೆ ಇದು ಸ್ವಾತಂತ್ರ್ಯ ಪ್ರಾಪ್ತವಾದಾಗಿನಿಂದಲೂ ಅಂಟಿಕೊಂಡು ಬಂದಿದೆ.

'ಬ್ರಿಕ್ಸ್' ಸಮಾವೇಶದ ನೆರಳಿನಲ್ಲೇ ಭಾರತದ ಪ್ರಧಾನಿ ರಷ್ಯಾದ ಅಧ್ಯಕ್ಷ ವ್ಲಾದಿಮಿರ್ ಪುಟಿನ್ ಹಾಗೂ ಚೀಣಾದ ಅಧ್ಯಕ್ಷ ಕ್ಸಿ ಜಿನ್‌ಪಿಂಗ್ ಇವರನ್ನು ಭೇಟಿಯಾಗಿ ಮಾತುಕತೆ ನಡೆಸಿದ್ದಾರೆ. ಈ ಭೇಟಿಯ ಸಂದರ್ಭದಲ್ಲಿ ದ್ವಿಪಕ್ಷೀಯ ಸಂಬಂಧಗಳನ್ನು ಕುರಿತು ಪ್ರಸ್ತಾಪಿಸಲಾಗಿದೆ. ಹೆಚ್ಚಿನ ನಿರೀಕ್ಷೆಗಳು ಏನೇ ಇಲ್ಲದಿದ್ದರೂ ಇಂಥ ಭೇಟಿಗಳು ಪರಸ್ಪರ ವಿಶ್ವಾಸ ಹೆಚ್ಚಿಸಲು ಅವಕಾಶ ಕಲ್ಪಿಸುತ್ತವೆ. ಚೀಣಾದ ಅಧ್ಯಕ್ಷರೊಂದಿಗೆ ಮಾತುಕತೆಗಳಲ್ಲಿ ಡೋಕ್ಲಾಮನಂಥ ಪ್ರಸಂಗಗಳು ಉದ್ಭವಿಸದಂತೆ ನೋಡಿಕೊಳ್ಳಲು ಎರಡೂ ದೇಶಗಳು ಒಪ್ಪಿಗೆ ಸೂಚಿಸಿರುವುದು ಶುಭಾರಂಭ ಎನ್ನಬೇಕು. ಮುಂದಿನ ವರ್ಷ ಚೀಣೀ ಕಮ್ಯುನಿಸ್ಟ್ ಪಾರ್ಟಿ ಮಹಾಸಭೆ ನಡೆಯಲಿರುವುದನ್ನು ಭಾರತ ಗಮನದಲ್ಲಿರಿಸಿಕೊಳ್ಳಬೇಕು. ಒಟ್ಟಿನಲ್ಲಿ ಬ್ರಿಕ್ಸ್ ಸಮಾವೇಶದ ಯಶಸ್ಸು ಹಾಗೂ ಪ್ರಕಟಣೆ ಸ್ವಾಗತಾರ್ಹ.

## ಉತ್ತರ ಕೊರಿಯದಿಂದ ಜಲಜನಕ ಬಾಂಬು ಪ್ರಯೋಗ

ಉತ್ತರ ಕೊರಿಯ ಇತ್ತೀಚೆಗೆ ಜಲಜನಕ ಬಾಂಬು ಸ್ಫೋಟಿಸಿ ಜಗತ್ತಿನಲ್ಲಿ ಆತಂಕ ಸೃಷ್ಟಿಸಿದೆ. ಪುಟ್ಟ ದೇಶ ಉತ್ತರ ಕೊರಿಯ ನ್ಯೂಕ್ಲಿಯರ್ ಶಕ್ತರಾಷ್ಟ್ರವಾಗಿ ಹೊಮ್ಮಿ ವರ್ಷಗಳೇ ಕಳೆದಿವೆ. ಪ್ರಪಂಚದಲ್ಲಿ ಮೊದಲ ಬಾರಿಗೆ ಜಪಾನಿನ ಹಿರೋಷಿಮಾ ಮತ್ತು ನಾಗಸಾಕಿ ನಗರಗಳ ಮೇಲೆ ಸುರಿದ ಪರಮಾಣು ಬಾಂಬಿಗಿಂತ ಉತ್ತರ ಕೊರಿಯ ಪ್ರಯೋಗ ನಡೆಸಿದ ಜಲಜನಕ ಬಾಂಬು ನೂರಾರು ಪಟ್ಟು ಪ್ರಬಲ ಎಂದು ಹೇಳಲಾಗಿದೆ. ಏಳು ದಶಕಗಳ ಹಿಂದೆ ಅಮೆರಿಕ ನಡೆಸಿದ ದಾಳಿಯ ಪರಿಣಾಮವನ್ನು ಜಪಾನಿನ ನಗರಗಳ ಜನ ಇಂದೂ ಕೂಡ ಅನುಭವಿಸಿದ್ದಾರೆ. ನ್ಯೂಕ್ಲಿಯರ್ ಅಸ್ತ್ರ ತರಬಲ್ಲ ದೀರ್ಘಕಾಲೀನ ಪರಿಣಾಮಗಳನ್ನು ಅಮೆರಿಕದ ಈ ದಾಳಿ ದೃಢಪಡಿಸಿದೆ. ಇಂದು ಅಮೆರಿಕ ಮತ್ತು ರಷ್ಯಗಳಲ್ಲಿ ದಾಸ್ತಾನಿರುವ ನ್ಯೂಕ್ಲಿಯರ್ ಬಾಂಬುಗಳು ಈ ಭೂಮಂಡಲದ ಎಲ್ಲ ಜೀವರಾಶಿಗಳನ್ನು ಶಾಶ್ವತವಾಗಿ ನಿರ್ನಾಮ ಮಾಡಲು ಸಾಕು. ಹಾಗಿರುವಾಗ ಇನ್ನೊಂದು ಪುಟ್ಟ ದೇಶ ಈ ಆತಂಕಕಾರಿ ಅಸ್ತ್ರವನ್ನು ಬತ್ತಳಿಕೆಯಲ್ಲಿರಿಸಿಕೊಂಡಿರುವುದು ವಿಷಾದಕರ ಬೆಳವಣಿಗೆ. ಜಗತ್ತಿನಾದ್ಯಂತ ವಿಜ್ಞಾನಿಗಳು ನ್ಯೂಕ್ಲಿಯರ್ ಅಸ್ತ್ರದ ವಿನಾಶಕಾರಿ ಪರಿಣಾಮಗಳ ಕುರಿತು ಸಾಕಷ್ಟು ವಿವರಗಳನ್ನು ನೀಡಿದ್ದಾರೆ, ಎಚ್ಚರಿಸಿದ್ದಾರೆ.

ಇಪ್ಪತ್ತೊಂದನೆ ಶತಮಾನದ ಈ ದಿನಗಳಲ್ಲಿ ನ್ಯೂಕ್ಲಿಯರ್ ವಿಜ್ಞಾನ ರಹಸ್ಯವಾಗೇನಿಲ್ಲ. ಹಣ ವಿನಿಯೋಗಿಸಲು ಸಮರ್ಥವಾಗಿರುವ ಯಾವುದೇ ರಾಷ್ಟ್ರ ನ್ಯೂಕ್ಲಿಯರ್ ಶಕ್ತ ರಾಷ್ಟ್ರವಾಗಬಲ್ಲದ್ದಾಗಿದೆ. ಹಾಗಾಗಿ, ಉತ್ತರ ಕೊರಿಯದಂಥ ಮಿಲಿಟರೀಕರಣಗೊಂಡಿರುವ ರಾಷ್ಟ್ರ ಜಗತ್ತನ್ನೇ ಸರ್ವನಾಶ ಮಾಡಬಲ್ಲ ಅಸ್ತ್ರವನ್ನು ಪಡೆದುಕೊಂಡಿರುವದು ಆಶ್ಚರ್ಯವೇನಲ್ಲ. ಏನಾದರೂ ಹುಚ್ಚುತನ ನಡೆದರೆ ಕೊರಿಯ ಭೂಪಟದಿಂದಲೇ ನಿರ್ನಾಮಗೊಳ್ಳುವ ಸಂಭವವೇ ಹೆಚ್ಚು. ಇಂಥ ಸರ್ವನಾಶಕ ಅಸ್ತ್ರ ಬೇಜವಾಬ್ದಾರಿಯಿಂದ ಅಮಾಯಕ ಜನರನ್ನು ಕೊಲ್ಲುವ ಭಯೋತ್ಪಾದಕರ ಮಡಿಲಿಗೆ ಬಿದ್ದಲ್ಲಿ ವಿಪತ್ತು ಕಟ್ಟಿಟ್ಟ ಬುತ್ತಿ.

ಉತ್ತರ ಕೊರಿಯ – ಅಮೆರಿಕಗಳ ಮಧ್ಯೆ ವಿರಸ ಆರು ದಶಕಗಳಿಗೂ ಹಿಂದಿನದು. ಹಾಗಾಗಿ ಪರಸ್ಪರರ ಬೆದರಿಕೆ ನುಡಿಗಳು ಹೊಸದೇನಲ್ಲ. ಹೊಸ ಬೆಳವಣಿಗೆಯನ್ನು ಕುರಿತು ಅಮೆರಿಕದ ಅಧ್ಯಕ್ಷರು ಏನೇ ಎಗರಾಡಿದರೂ ವಿವೇಕಶೂನ್ಯರಾಗರು ಎಂದು ಆಶಿಸೋಣ. ಹಾಗೆಯೇ ಉತ್ತರ ಕೊರಿಯದ ಅಧ್ಯಕ್ಷರು ಅಮೆರಿಕವನ್ನು ಧೂಳೀಪಟ ಮಾಡಲು ಎಚ್ಚರಿಸಿರುವುದೂ ಕೂಡ ಒಣ ಪ್ರತಿಷ್ಠೆ. ಉತ್ತರ ಕೊರಿಯದ ಅರ್ಥ ವ್ಯವಸ್ಥೆ ಅಸ್ಥಿರವಾಗಿದ್ದು, ಜನಜೀವನ ದುಸ್ತರವಾಗಿದೆ ಹಲವು ದಶಕಗಳ ದಿಗ್ಬಂಧನದಿಂದ. ಈಗ ಅಮೆರಿಕ ಇನ್ನಷ್ಟು ಪ್ರತಿಬಂಧಕಗಳನ್ನು ಹೇರಲು ನೋಡುತ್ತಿದೆ. ಪ್ರಪಂಚದ ಜನರ ಹಿತದೃಷ್ಟಿಯಿಂದ ಎರಡೂ ದೇಶಗಳು ಜವಾಬ್ದಾರಿತನದಿಂದ ಉದ್ಭವಿಸಿರುವ ಬಿಕ್ಕಟ್ಟನ್ನು ನಿವಾರಿಸುವುದು ಒಳ್ಳೆಯದು.

ಸೀಯಾರ್ಕೆ

# ಹೊಸ ಭಾಷ್ಯ ಬರೆದಿರುವ ಸಿನಿಮಾ



ಒಂದು ಮೊಟ್ಟೆಯ ಕಥೆ

ಸಿನಿಮಾ ಎನ್ನುವ ಮನರಂಜನಾ ಕ್ಷೇತ್ರ ಒಂದು ರೀತಿಯಲ್ಲಿ ಜಡ್ಡುಗಟ್ಟಿತ್ತು. ನಾಯಕ ನಟನ ವೈಭವ, ಹದಿಹರೆಯದ ತರುಣಿಯರ ಅಂಗಪ್ರದರ್ಶನ, ಸವಕಲಾದ ಮತ್ತು ಅರ್ಥವಿಲ್ಲದ ಕಥೆಗಳು, ದೇಶ ವಿದೇಶಗಳ ದೃಶ್ಯ ವೈಭವ, ಸಹಜತೆಗೆ ಅತಿದೂರವಾದ ಫೈಟಿಂಗ್ ರೂಕ್ಷತನ, ಎಲ್ಲದಕ್ಕಿಂತ ಹೆಚ್ಚಾಗಿ ದಿನದಿನಕ್ಕೆ ಕುಸಿಯುತ್ತಿರುವ ಕನ್ನಡ ಭಾಷೆಯ ಮಟ್ಟ ಮತ್ತು ಕೀಳು ಅಭಿರುಚಿಯ ಹಾಸ್ಯ. ಹೊಸತೇನನ್ನಾದರೂ ಕೊಡಲೇ ಬೇಕು ಎನ್ನುವ ಹಂಬಲದೊಂದಿಗೆ ಸ್ಪರ್ಧೆಗಿಳಿದಂತೆ ಪ್ರದರ್ಶಿಸುವ ಪರಭಾಷೆಯ ಎರವಲುಗಳು ಮತ್ತು ಡಿಜಿಟಲ್ ತಂತ್ರದ ಕಣ್ಕಟ್ಟಿನ ನೋಟಗಳು. ಇವೆಲ್ಲದರಿಂದ 'ಸರಳವಾದ ಮನರಂಜನೆ ಮತ್ತು ವಾಸ್ತವ ಬದುಕಿಗೆ ಹತ್ತಿರವಾದ ಕಥೆಗಳು' ಗಾವುದ ದೂರ ಹಾರಿಯೇ ಹೋಗಿತ್ತು. ಇಂತಹ ಎಲ್ಲ ಸಿದ್ಧ ಮಾದರಿಗಳನ್ನು ನಿರಾಕರಿಸುತ್ತಾ ಇಂದಿನ ಅನೇಕ ನವ ನಿರ್ದೇಶಕರು ಸರಳ ಮನರಂಜನೆಯತ್ತ ಮುಖ ಮಾಡಿರುವುದು ಕನ್ನಡದ ಮಟ್ಟಿಗಂತೂ ಸಂತೋಷದ ಸಂಗತಿಯೇ.

ಮರೆವಿನ ಕಾರಣಕ್ಕೆ ವೃದ್ಧಾಶ್ರಮದಿಂದ ಕಳೆದೇ ಹೋಗುವ ಅಪ್ಪ, ಅಪ್ಪನ ಬಗ್ಗೆ ತಿರಸ್ಕಾರವನ್ನೇ ಬೆಳೆಸಿಕೊಂಡಿದ್ದರೂ ಅವರನ್ನು ಹುಡುಕುವಾಗ ತಂದೆಯ ಬಗ್ಗೆ ಹಳಹಳಿಸುವ ಮಗ. ಈ ಅಪ್ಪ ಮಗನ ಸಂಬಂಧವನ್ನು ನಾಜೂಕಾಗಿ ತಿಳಿಸುವ 'ಗೋಧಿ ಬಣ್ಣ ಸಾಧಾರಣ ಮೈಕಟ್ಟು', ಹಳ್ಳಿಯ ಹೆಂಗಸರ ಅಂತಃಶಕ್ತಿಯನ್ನು ನಿರೂಪಿಸುವ 'ಕಿರಗೂರಿನ ಗಯ್ಯಾಳಿಗಳು', ಕ್ರಿಕೆಟ್ ಆಟವನ್ನು ಬದುಕಿನ ಆಟದೊಂದಿಗೆ ಮೇಳೈಸಿ ಸೋಲು ಗೆಲುವಿನ ಸಂಭ್ರಮ ವಿಭ್ರಮಗಳನ್ನು ಸೂಕ್ಷ್ಮವಾಗಿ ಹೇಳುವ 'ಪುಟ ತೆರೆದಾಗ' ಮುಂತಾದ ಹಲವು ಇತ್ತೀಚಿನ ಸಿನಿಮಾಗಳು ನಿಜಕ್ಕೂ ಈ ಮನರಂಜನಾ ಕ್ಷೇತ್ರದ ಬಗ್ಗೆ ಪ್ರಜ್ಞಾವಂತರಿಗೆ ಭರವಸೆಯನ್ನು ಹುಟ್ಟಿಸುತ್ತವೆ. ಶುದ್ಧ ಮನರಂಜನೆಯನ್ನು ಬಯಸುವ ಎಲ್ಲ ವರ್ಗದ ಜನರಿಗೆ ಸಂತೋಷವನ್ನು ಕೊಡುತ್ತವೆ. ಇದೇ ಸಾಲಿಗೆ ಇತ್ತೀಚೆಗೆ ಸೇರ್ಪಡೆಗೊಂಡ ಸಿನಿಮಾ 'ಒಂದು ಮೊಟ್ಟೆಯ ಕಥೆ.'

ಈ ಮೇಲಿನ ಹಲವು ಸಿನಿಮಾಗಳಂತೆ 'ಒಂದು ಮೊಟ್ಟೆಯ ಕಥೆ' ಕೂಡ ಸ್ಥಾಪಿತವಾದ ಹಲವು ಮಾದರಿಗಳನ್ನು ಅಲ್ಲಗಳೆದಿದೆ. ಇದರಲ್ಲಿ ಹೆಸರಾಂತ ನಾಯಕ ನಾಯಕಿಯರೆನ್ನುವ ಪ್ರಭಾವಳಿ (ಹ್ಯಾಟ್ರಿಕ್ ಹೀರೋ, ಚಾಕಲೇಟ್ ಹೀರೋ, ರೆಬಲ್ ಹೀರೋ, ಇತ್ಯಾದಿ) ದಾರರಿಲ್ಲ. ಒಂದು ಪ್ರೇಮ ನಿವೇದನೆಯ ಹಾಡಿಗೆ ನೂರಾರು ಜನ ಡ್ರಿಲ್ ಮಾದರಿಯಲ್ಲಿ ನರ್ತಿಸುವುದಿಲ್ಲ. ದೇಶವಿದೇಶಗಳ ದೃಶ್ಯ ವೈಭವವಂತೂ ಇಲ್ಲವೇ ಇಲ್ಲ. ಆದರೂ ಇದು ಮಂಗಳೂರಿನ ಒಂದು ಕಾಲೇಜನ್ನೇ ಖುಷಿಕೊಡುವ ದೃಶ್ಯವನ್ನಾಗಿಸಿಕೊಂಡು ಕಣ್ಣಿಗೆ ತಂಪನ್ನೀಯುತ್ತದೆ. 'ಒಂದು ಮೊಟ್ಟೆಯ ಕಥೆ' ನಿಜಜೀವನಕ್ಕೆ ಬಹಳ ಹತ್ತಿರವಾಗಿದೆ. ಇಂದಿನ ದಿನಗಳು 'ಮದುವೆ' ಎನ್ನುವ ವ್ಯವಸ್ಥೆಯೇ ಬಹಳ ಸ್ಥಿತ್ಯಂತರಗೊಳ್ಳುತ್ತಿರುವ ಕಾಲ.

**ಶಾಂತಾ ನಾಗರಾಜ್**

ನಮ್ಮ ಹಿರಿಯ ಸಾಹಿತಿಗಳು, ಕವಿಗಳು ತಮ್ಮ ಜೀವನದ ಬಗ್ಗೆ ಬರೆಯುತ್ತ ತಾವು ಕಾಲೇಜಿನಲ್ಲಿ ಓದುತ್ತಿರುವಾಗಲೇ ತಮ್ಮ ಕುಟುಂಬದ ಹಿರಿಯರು ತಮಗಾಗಿ ಒಂದು ಹೆಣ್ಣನ್ನು ನೋಡಿ ಮದುವೆ ನಿಶ್ಚಯ ಮಾಡಿದರು ಎಂದೇ ಬರೆದಿದ್ದಾರೆ. ಅಂದರೆ ಅದರರ್ಥ ಆ ಕಾಲಕ್ಕೆ 'ಮದುವೆ' ಎನ್ನುವುದು ಮದುಮಕ್ಕಳ ಹಿತಾಸಕ್ತಿಯನ್ನು ಮುಂದಿಟ್ಟುಕೊಂಡೇ ಎರಡು ಕುಟುಂಬಗಳ ಮಧ್ಯೆ ನಡೆಯುವ ಒಂದು ವ್ಯವಹಾರವಾಗಿತ್ತು. ಹೆಣ್ಣುಮಕ್ಕಳು ವಿದ್ಯೆ ಮತ್ತು ಉದ್ಯೋಗವನ್ನು ಗಳಿಸಿದ ಮೇಲೆ ಮತ್ತು ಗಂಡುಗಳೂ ಉನ್ನತ ಶಿಕ್ಷಣ ಪಡೆದು ತಮ್ಮ ಸಂಗಾತಿಯ ಬಗ್ಗೆ ತಾವೇ ನಿರ್ಧರಿಸುವ ಆಶಯವನ್ನು ಹೊಂದಿದ ಮೇಲೆ, 'ಮದುವೆ' ಎನ್ನುವುದು ಎರಡು ಕುಟುಂಬಗಳ ನಡುವಿನ ವ್ಯವಹಾರವಲ್ಲ, ಎರಡು ವ್ಯಕ್ತಿಗಳ ನಡುವಿನ ಒಪ್ಪಂದ ಎನ್ನುವ ಘಟ್ಟಕ್ಕೆ ಬಂದು ನಿಂತಿತು. ಈಗಂತೂ ಈ ಎರಡು ವ್ಯಕ್ತಿಗಳ ನಡುವಿನ ಒಪ್ಪಂದದಲ್ಲಿ ಪರಸ್ಪರರ ನಿರೀಕ್ಷೆಗಳು ವಿಕಾರ ಸ್ವರೂಪವನ್ನು ಹೊಂದಿ 'ಮದುವೆ' ಎನ್ನುವ ಘಟನೆಯೇ ವಿಚಿತ್ರವಾಗಿ ಹೋಗಿದೆ. ಅದು ಒಪ್ಪಿತ ವಿವಾಹವಾಗಿರಲಿ ಅಥವಾ ಪ್ರೇಮವಿವಾಹವಾಗಿರಲಿ ಇಲ್ಲಿ 'ವಾಂಟ್ಸ್' (ಕನ್ನಡದಲ್ಲಿ ಹೀಗೇ ಇರಬೇಕು ಎಂದುಕೊಳ್ಳುವ ನಿರೀಕ್ಷೆ ಎನ್ನಬಹುದೇನೋ) ಎನ್ನುವುದು ರಾಕ್ಷಸಾಕಾರವಾಗಿ ಹೆಣ್ಣು ಗಂಡುಗಳ ನಡುವೆ ನುಸುಳುತ್ತದೆ. ಇದನ್ನೇ ಬಹಳ ಸಮರ್ಥವಾಗಿ 'ಒಂದು ಮೊಟ್ಟೆಯ ಕಥೆ' ಹೇಳುತ್ತದೆ. ಮದುವೆಗೆ ಸಿದ್ಧವಿರುವ ವರ ಜನಾರ್ಧನನಿಗೆ ತಲೆಯಲ್ಲಿ

ಕೂದಲಿಲ್ಲ, ಸಣಕಲ, ಉಬ್ಬುಹಲ್ಲು, ಮೇಲಾಗಿ ಕನ್ನಡ ಉಪನ್ಯಾಸಕ! ಇವೆಲ್ಲವೂ ಹೆಣ್ಣಿನ ದೃಷ್ಟಿಯಲ್ಲಿ ಅವನನ್ನು ಅನರ್ಹಗೊಳಿಸಬಹುದಾದ ಅಂಶಗಳು. ಇದು ಈ ಸಿನಿಮಾದ ನಾಯಕನ ಬವಣೆ. ಇನ್ನು ನಾಯಕಿ ಯಾದರೋ ದಪ್ಪ ಮತ್ತು ಅಷ್ಟೇನೂ ಸುಂದರಿಯಲ್ಲ. ಇದು ವರನಾದವನು ಅವಳನ್ನು ನಿರಾಕರಿಸುವುದಕ್ಕೆ, ಕಾರಣಗಳು.

'ಒಂದು ಮೊಟ್ಟೆಯ ಕಥೆಯ ಚಿತ್ರಕಥೆಯನ್ನು ಹೇಳುವುದು ಬಹಳ ಸುಲಭ. ಧಾರಾವಾಹಿಗಳಿಗೆ ಚಿತ್ರಕಥೆ ಮತ್ತು ಸಂಭಾಷಣೆಯನ್ನು ಬರೆಯುವವರು 'ಒನ್ ಲೈನ್ ಸ್ಟೋರಿ'ಯನ್ನು ಮೊದಲು ಬರೆದುಕೊಳ್ಳುತ್ತಾರಲ್ಲ, ಹಾಗೆ ಈ ಸಿನಿಮಾದ ಕಥೆಯೂ ಒಂದೇ ಸಾಲಿನಲ್ಲಿ ಹೇಳಿಬಿಡು ವಂಥಾದ್ದು. ಚಿತ್ರ ಪ್ರಾರಂಭವಾಗುವುದೇ ನಾಯಕ ಅದೆಷ್ಟನೆಯದೋ ಹೆಣ್ಣನ್ನು ನೋಡುವ ಸಲುವಾಗಿ ಹೆಣ್ಣಿನ ಮನೆಗೆ ತನ್ನ ಅಪ್ಪ – ಅಮ್ಮನೊಡನೆ ಬರುವ ಸಂದರ್ಭದಲ್ಲಿ. ಈ ವಧು ಅನ್ವೇಷಕನನ್ನು ನೋಡಿದ ತಕ್ಷಣ ಹುಡುಗಿಯ ಅಮ್ಮನಿಗೆ ತಮ್ಮ ಮಗಳು ಇವನನ್ನು ಒಪ್ಪುವುದಿಲ್ಲ ಎಂದು ಖಾತ್ರಿಯಾಗಿಬಿಡುತ್ತದೆ. ಅಲ್ಲಿಂದ ಇವನ 'ಅವಮಾನ'ಗಳ ಸರಣಿ ಪ್ರಾರಂಭವಾಗುತ್ತದೆ. ಈ ವಿಚಾರವನ್ನು ಎಲ್ಲೂ ಕನಿಕರಕ್ಕಾಗಲೀ ರೋಷಕ್ಕಾಗಲೀ ಈಡುಮಾಡದೆ ಹಾಸ್ಯದ ನೆಲೆಯಲ್ಲೇ ಮುಂದುವರಿಸುವುದೇ ಈ ಚಿತ್ರಕಥೆಯ ಹೆಚ್ಚುಗಾರಿಕೆ. ಈ ನಮ್ಮ ನಾಯಕ ಕಾಲೇಜೊಂದರಲ್ಲಿ ಕನ್ನಡ ಉಪನ್ಯಾಸಕ. ಮತ್ತೊಬ್ಬಳು ತರುಣಿ ಸಮಾಜಶಾಸ್ತ್ರ ಕಲಿಸುವವಳು. ಅವಳನ್ನು ಸಂಗಾತಿಯಾಗಿ ಮಾಡಿಕೊಂಡರೆ ಹೇಗೆ ಎನ್ನುವುದು ಬರೀ ಇವನ ಕನಸಷ್ಟೇ! ಅವಳೋ ಹೊಸದಾಗಿ ಬಂದ ಇಂಗ್ಲಿಷ್ ಉಪನ್ಯಾಸಕ ನೋಡಲು ಸುಂದರ ಎನ್ನುವ ಕಾರಣಕ್ಕೆ ಸಂಭ್ರಮಿಸಿ ಇವನ ಕನಸಿನ ಬಲೂನನ್ನು ಚುಚ್ಚಿಬಿಡುತ್ತಾಳೆ.

ಮತ್ತೊಬ್ಬ ಚದುರೆ 'ಹೇರ್ ಪ್ಲ್ಯಾಂಟೇಶನ್' ಕಂಪನಿಯ ಸಲುವಾಗಿ ಕೆಲಸ ಮಾಡುವವಳು ಇಂಥ ಬೋಳು ತಲೆಯ 'ನಾಯಕ'ರನ್ನು ಸಲುಗೆಯಿಂದ ಮಾತಾಡಿಸಿ, ತನ್ನ ಟೂ ವೀಲರ್ ಮೇಲೆ ಸುತ್ತಿಸಿ, ಮರುಳು ಮಾಡಿ ಇನ್ನೇನು ಈ ನಮ್ಮ ನಾಯಕನಿಗೊಂದು ಸಂಗಾತಿ ಸಿಕ್ಕೇಬಿಟ್ಟಳು ಎಂದುಕೊಳ್ಳುವ ಹೊತ್ತಿಗೇ ಇವನನ್ನು ಒಂದು ಜಾಗಕ್ಕೆ ಬರಹೇಳಿ, ಅಲ್ಲಿ ಇವನಂತೆಯೇ ಇರುವ ಹಲವಾರು ಜನರನ್ನು ಕೂಡಿಸಿಕೊಂಡು ತನ್ನ ಕಂಪನಿಯ ಜಾಹೀರಾತನ್ನು ಪ್ರಾರಂಭಿಸಿಯೇ ಬಿಡುತ್ತಾಳೆ. ನಿರಾಶನಾದ ನಾಯಕ ತನ್ನ ಬಾಲ್ಯದ ಗೆಳತಿಯೊಬ್ಬಳನ್ನು 'ಫೇಸ್‌ಬುಕ್'ನಲ್ಲಿ ಸಂಧಿಸುತ್ತಾನೆ. ಅವಳು ಡುಮ್ಮಿ ಮತ್ತು ಅಷ್ಟೇನೂ ಸುಂದರಿಯಲ್ಲ, ಇವನು ಬೋಳು ತಲೆಯವ ಮತ್ತು ಉಬ್ಬುಹಲ್ಲಿನ ಸಣಕಲ, ಆದರೆ ಇಬ್ಬರೂ ಮಹಾ ಘಾಟಿಗಳೇ!! ಫೇಸ್‌ಬುಕ್‌ನಲ್ಲಿ ತಮ್ಮತಮ್ಮ ಡಿಪಿ (ಡಿಸ್ ಪ್ಲೇ ಪಿಕ್ಚರ್)ಗೆ ಅವಳು ಐಶ್ವರ್ಯ ರಾಯ್ ಚಿತ್ರವನ್ನೂ, ಇವನು ರಾಜ್‌ಕುಮಾರ್ ಚಿತ್ರವನ್ನೂ

ಈ ತಿಂಗಳ ೧೨ ರಂದು ೨೫ - ೩೦ ಮೀಟರ್ ವ್ಯಾಸದ ಒಂದು ಪುಟ್ಟ ಕ್ಷುದ್ರಗ್ರಹ ಭೂಮಿಯ ಸನಿಹದಿಂದ ಹಾದುಹೋಗಲಿದೆ. ಸನಿಹ ಎಂದರೆ ೪೪,೦೦೦ ಕಿಮೀ (ಇನ್ಸಾಟ್‌ನಂತಹ ಭೂಸ್ಥಿರ ಉಪಗ್ರಹಗಳು ಸುಮಾರು ೩೬,೦೦೦ ಕಿಮೀ ಎತ್ತರದಲ್ಲಿರುತ್ತವೆ) - ಇದು ಚಂದ್ರನ ದೂರದ ಎಂಟನೆಯ ಒಂದು ಭಾಗ. ಪುಟ್ಟ ಬಂಗಲೆ ಗಾತ್ರದ ಈ ಕಾಯ ಏನೂ ಅಪಾಯವನ್ನು ಉಂಟುಮಾಡುವುದಿಲ್ಲ ಎಂದು ವಿಜ್ಞಾನಿಗಳ ಅಭಿಮತ.



ಹಾಕಿಕೊಂಡಿರುತ್ತಾರೆ!! ಅಂತೂ ಪಾರ್ಕಿನಲ್ಲಿ ಇಬ್ಬರೂ ಭೇಟಿಯಾದಾಗ ಇಬ್ಬರಿಗೂ ಪರಸ್ಪರರಲ್ಲಿ ಅಂಥಾ ಆಕರ್ಷಣೆಯೇನೂ ಹುಟ್ಟುವುದಿಲ್ಲ. ಆದರೂ ಇಬ್ಬರ ಮನೆಯವರ ಒತ್ತಾಯ ಬಹಳವಾಗುತ್ತದೆ. ಇಲ್ಲಿಯೂ ಒಂದಿಷ್ಟೂ ಬೋರ್ ಹೊಡೆಯದಂತೆ ನವಿರಾಗಿ ಒಂದಿಷ್ಟು ಕುತೂಹಲ, ಒಂದಿಷ್ಟು ಹಾಸ್ಯ, ಹೆಚ್ಚಾಗಿ ಮಾನವೀಯತೆ ಗಳನ್ನು ತಂದು ಕಥೆಯನ್ನು ಸಹ್ಯವಾಗಿಸುತ್ತಾರೆ ನಿರ್ದೇಶಕರು! 'ಒಂದು ಮೊಟ್ಟೆಯ ಕಥೆ' ಸಿನಿಮಾ ಆಗಿರುವುದೇ ಸಣ್ಣ ಸಣ್ಣ ಕುತೂಹಲಭರಿತ ಪ್ರಸಂಗಗಳಿಂದ! ಮುಕ್ತಾಯವೂ ಬೇರೆಲ್ಲಾ ಸಿನಿಮಾಗಳಂತೆ ಮದುವೆಯ ಅದ್ಧೂರಿಯ ಸಂಭ್ರಮದಿಂದಲ್ಲ. ಬದಲಿಗೆ ಸಣ್ಣ ಫೋನ್ ಕಾಲ್ ಪ್ರಸಂಗವನ್ನು ಮರುಕಳಿಸುವುದರಿಂದ!! ಆದರೆ ಸಿನಿಮಾ ನೋಡುತ್ತ ನೋಡುತ್ತಲೇ ನಕ್ಕುನಗುವ ಪ್ರೇಕ್ಷಕ ಸಿನಿಮಾ ಮುಗಿದಂತೆ, ಹೌದಲ್ಲವಾ? ಇಂದು ಮದುವೆಯೆನ್ನುವುದು ಎಷ್ಟೊಂದು ಸಂಕೀರ್ಣವಾಗಿ ಬಿಟ್ಟಿದೆಯಲ್ಲಾ? ಅದಕ್ಕೆ ನಾವೇ ಹೊಣೆಯಲ್ಲವೇ'? ಎನ್ನುವ ಆತ್ಮಶೋಧನೆಯೊಂದಿಗೆ ಮನೆಗೆ ಹೋಗುತ್ತಾನೆ. ನಿಜವಾದ ಸಿನಿಮಾದ ಯಶಸ್ಸಿರುವುದೇ ಇಲ್ಲಿ.

ಇಂದು ನಿಜಕ್ಕೂ ಈ ಅಂಶಗಳು ನಮ್ಮ ಸಮಾಜದಲ್ಲಿ ಜೀವಂತವಾಗಿವೆ. ಆದ್ದರಿಂದಲೇ ಹಳ್ಳಿಯಲ್ಲಿರುವ ರೈತಾಪಿ ಯುವಕರಿಗೆ, ಪೌರೋಹಿತ್ಯವನ್ನು ಮಾಡುವ, ಸಂಗೀತವನ್ನೇ ಮುಖ್ಯ ಕಸುಬಾಗಿಟ್ಟುಕೊಂಡಿರುವ, ಕಲಾ ಮಾಧ್ಯಮದಲ್ಲಿ ದುಡಿಯುತ್ತಿರುವ ಅನೇಕ ಯುವಕರಿಗೆ ಮದುವೆಯೆನ್ನುವುದೇ ಮರೀಚಿಕೆಯಾಗಿದೆ. ಹುಡುಗಿಯರ ಸ್ಥಿತಿಯೂ ಇದಕ್ಕಿಂತ ಭಿನ್ನವಿಲ್ಲ! ಕಪ್ಪಗಿದ್ದರೆ, ದಪ್ಪಗಿದ್ದರೆ, ಕುಳ್ಳಗಿದ್ದರೆ, ಸಣ್ಣಗಿದ್ದರೂ, ಸುಂದರಿಯರಲ್ಲದಿದ್ದರೆ ಮದುವೆಯ ಕನಸು ಕನಸಾಗಿಯೇ ಉಳಿಯುತ್ತದೆ. 'ಒಂದು ಮೊಟ್ಟೆಯ ಕಥೆ' ಈ ಎರಡೂ ಸತ್ಯಗಳನ್ನು ಸ್ಪಷ್ಟವಾಗಿ ತೆರೆದಿಟ್ಟಿದೆ.

ಈ ಸಿನಿಮಾ ನನಗೆ ಬಹಳ ಕೌತುಕವನ್ನು ತಂದುಕೊಟ್ಟಿದ್ದು, ಇದರ ಎಲ್ಲ ಪಾತ್ರಧಾರಿಗಳ ಮನೋಜ್ಞ ಅಭಿನಯದಿಂದಾಗಿ. ಯಾರೊಬ್ಬರೂ ಹೆಸರಾಂತ ಕಲಾವಿದರಲ್ಲ (ಉಷಾ ಭಂಡಾರಿಯವರನ್ನು ಹೊರತುಪಡಿಸಿ). ಆದರೆ ನಟನೆಯಲ್ಲಿ ಯಾರು ಯಾರಿಗೂ ಕಡಿಮೆಯಿಲ್ಲ. ತಮ್ಮ ತಮ್ಮ ಪಾತ್ರಗಳನ್ನು ಅದೆಷ್ಟು ಚೆನ್ನಾಗಿ ಅರಿತುಕೊಂಡು ಅಭಿನಯಿಸಿದ್ದಾರೆಂದರೆ, ಇವರು ಹುಟ್ಟಿರುವುದೇ ಈ ಪಾತ್ರಕ್ಕಾಗಿಯೇನೋ ಎನ್ನಿಸುವಷ್ಟರ ಮಟ್ಟಿಗೆ ಈ ಎಲ್ಲ ಪಾತ್ರಗಳು ಜೀವಂತವಾಗಿವೆ. ಕಾಲೇಜಿನ ಅಟೆಂಡರ್, ಒಂದೇ ಕ್ಷಣ ಬಂದು ಮರೆಯಾಗುವ ಆತನ ಹೆಂಡತಿ, ನಗೆಯ ಕಡಲಲ್ಲಿ ಮುಳುಗಿಸುವ ಪ್ರಿನ್ಸಿಪಾಲ್, ತಮ್ಮ ಲವಲವಿಕೆಯಿಂದಲೇ ನಗೆಯುಕ್ಕಿಸುವ ಮೂರು ಜನ ನಾಯಕಿಯರು, ಮಾತೇ ಇಲ್ಲದಿದ್ದರೂ ಗಮನ ಸೆಳೆಯುವ ನಾಯಕನ ತಮ್ಮ, ಎಲ್ಲರೂ ಒಮ್ಮೆ ನೋಡಿದರೂ ನೆನಪಿನಾಳದಲ್ಲಿ ಇಳಿಯುತ್ತಾರೆ.

ಈ ಚಿತ್ರದ ಬಹಳ ಮುಖ್ಯ ಅಂಶವೆಂದರೆ ಇದರಲ್ಲಿ ಬಳಕೆಯಾಗಿರುವ ಹಾಸ್ಯ. ಇಡೀ ಚಿತ್ರದ ಕಥೆಯನ್ನು ನವಿರಾದ ಹಾಗೂ ಅಸಭ್ಯವಲ್ಲದ ಹಾಸ್ಯದ ಮೆರುಗಿನಲ್ಲಿ ಹೆಣೆದಿರುವುದು ಇದನ್ನೊಂದು ಪ್ರತ್ಯೇಕ ಸ್ಥಾನದಲ್ಲಿ ನಿಲ್ಲಿಸುತ್ತದೆ. ಡಾ॥ ರಾಜ್‌ಕುಮಾರ್ ಅವರ ಗಂಭೀರ ಹಾಡುಗಳನ್ನೂ ಹಾಸ್ಯದ ಚೌಕಟ್ಟಿನಲ್ಲಿ ಸಿಕ್ಕಿಸಿ ಹೊಸ ಅರ್ಥವನ್ನು ಕೊಟ್ಟಿರುವುದು ನಿರ್ದೇಶಕನ ಜಾಣ್ಮೆಗೆ ಹಿಡಿದ ಕನ್ನಡಿ. ಹೆಚ್ಚು ಇಂಗ್ಲಿಷ್ ಪದಗಳ ಬಳಕೆಯಿಲ್ಲದೆ ಮಂಗಳೂರು ಕನ್ನಡದ ಕಂಪು, ಕೇಳುವ ಕಿವಿಗೆ ಇಂಪನ್ನು ನೀಡುತ್ತದೆ. ಮಾತುಗಳು ಮನದಲ್ಲಿ ಮತ್ತೆ ಮತ್ತೆ ತಿರುಗುತ್ತವೆ. ಇಂಥ ಸಮಾಜಮುಖಿಯಾದ ಹಾಗೂ ಸದಭಿರುಚಿಯ ಚಿತ್ರಗಳು ನೂರು ಸಾವಿರವಾಗಲಿ ಎನ್ನುವುದೇ ಕನ್ನಡಿಗರ ಆಸೆ ಮತ್ತು ಹಾರೈಕೆ.

**ಶಾಂತಾ ನಾಗರಾಜ್**
ಕೇರಾಫ್ : ಶ್ರೀ ಗಿರೀಶ್ ಕುಮಾರ್, ಡಿ–೮೦/೨, ರೆನೈಸ್ಸ್ಯಾನ್ಸ್ ಟೆಂಪಲ್ ಬೆಲ್ಸ್
ಇಸ್ಕಾನ್ ಎದುರು, ಯಶವಂತಪುರ ಇಂಡಸ್ಟ್ರಿಯಲ್ ಸಬರ್ಬ್
ಬೆಂಗಳೂರು – ೫೬೦ ೦೨೨

**ಹೊಸ ಓದು**



## ಮೊಲೆವಾಲು ನಂಜಾಗಿ

ಪ್ರೊ॥ ಮಲ್ಲಿಕಾರ್ಜುನ ಹಿರೇಮಠ

**ಪುಟ :** ೧೫೨

**ಬೆಲೆ :** ರೂ. ೧೦೦

**ಮಹೋಹರ ಗ್ರಂಥಮಾಲಾ,** ಧಾರವಾಡ

ಪ್ರೊ॥ ಮಲ್ಲಿಕಾರ್ಜುನ ಹಿರೇಮಠರ ಕಥೆಗಳು ಕನ್ನಡ ಸಣ್ಣಕಥೆಯ ಶಿಸ್ತಿಗೆ ಮಾದರಿ. ಕವಿತೆ, ಪ್ರಬಂಧ, ಪ್ರವಾಸ ಕಥನ, ಕಾದಂಬರಿಗಳನ್ನು ಬರೆದಿರುವ ಹಿರೇಮಠದ ಮೂಲಕ ಮಾಧ್ಯಮ ಮಾತ್ರ ಸಣ್ಣಕಥೆಯೇ ಎಂಬುದನ್ನು ಈ ಸಂಕಲನ ಮತ್ತೊಮ್ಮೆ ಸಾಬೀತುಗೊಳಿಸಿದೆ. ಸಣ್ಣಕಥೆಗಳಿಗೆ ಅನನ್ಯವಾದ ವಸ್ತು ವಿನ್ಯಾಸ ಮತ್ತು ಭಾಷಿಕ ಶರೀರ ಎರಡೂ ಇವರಿಗೆ ಒಲಿದಿವೆ ಮತ್ತು ಸಿದ್ಧಿಸಿವೆ. ಉತ್ತರ ಕರ್ನಾಟಕದ ದಟ್ಟ, ದೃಶ್ಯಾತ್ಮಕ ಪರಿಸರ, ಮನುಷ್ಯ ಸ್ವಭಾವದ ಎಲ್ಲೆಗಳನ್ನು ಸ್ಪರ್ಶಿಸಿ, ನಿಗೂಢ ಲೋಕದ ಮೂಲದ್ರವ್ಯವು ಕಾರ್ಪೊರೇಟ್ ಜಗತ್ತು ಮತ್ತು ಜಗತ್ತಿನ ವಿಸ್ತಾರದೊಂದಿಗಿನ ಅನುಸಂಧಾನದಲ್ಲಿ ಕನ್ನಡದ ಕಥಾಲೋಕವನ್ನು ವಿಸ್ತರಿಸುತ್ತಿರುವ ಹೊಸ ಮಾದರಿಯೊಂದು ಹಿರೇಮಠರ ಕಥೆಗಳಲ್ಲಿ ಬಹು ಸ್ಪಷ್ಟವಾಗಿ ಮೈದಾಳಿದ್ದು ಗಮನಾರ್ಹ. ಅವರ ಕಥೆಗಳಲ್ಲಿ ಗಹನತೆ ಇದೆ ಮತ್ತು ಜೀವನದ ಬಗೆಗೆ ಉಕ್ಕುವ ಪ್ರೀತಿಯೂ ಇದೆ. ಅವರು ಪ್ರತಿ ಕಥಾವಸ್ತುವನ್ನು ಭಿನ್ನ ಎಳೆಗಳ ಮೂಲಕ ಕೊಂಡೊಯ್ದಿದ್ದಾರೆ. ವಿನ್ಯಾಸ ಮತ್ತು ವಿಸ್ತಾರಗಳೆರಡೂ ದೃಷ್ಟಿಗಳಿಂದ ಕನ್ನಡ ಕಥಾ ಸಾಹಿತ್ಯಕ್ಕೆ ಹೊಸ ಸಾಧ್ಯತೆಗಳನ್ನು ತೋರುವ ಕಥೆಗಳು ಈ ಸಂಕಲನದಲ್ಲಿವೆ. ವರ್ತಮಾನದ ವಿಲಕ್ಷಣಗಳನ್ನು ನಿರುದ್ದಿಶ್ಯವೆಂಬಂತೆ ಜೋಡಿಸುತ್ತಲೇ ಒಂದು ತಾತ್ವಿಕ ನೆಲೆಯನ್ನು ಕಟ್ಟುವ ಪ್ರಾಮಾಣಿಕ ಪ್ರಯತ್ನ ಈ ಕಥಾಸಂಕಲನದ ಹೆಚ್ಚಿನ ಸಾಧನೆ ಎನಿಸುತ್ತದೆ.

– **ಸಿ. ಎಸ್. ಭೀಮರಾಯ,** ಯಮುನಾನಗರ, ಕಲಬುರಗಿ

## ಬೆಳಕ ಜೋಳಿಗೆ (ಸಮಾನತೆ ಬಯಸುವ ಕಾವ್ಯ)



ನಳಿನ ಡಿ.

**ಪುಟ :** ೨೦೮ **ಬೆಲೆ :** ರೂ. ೧೪೦

**ಮಿಶಾ ಪ್ರಕಾಶನ,** ಚಿಕ್ಕಮಗಳೂರು

ನಳಿನ ಡಿ. ಅವರ 'ಬೆಳಕು ಜೋಳಿಗೆ' ಸಂಗ್ರಹ ಅನೇಕ ವಿಚಾರಗಳ ದೃಷ್ಟಿಯಿಂದ ಓದುಗರ ಚಿತ್ತ ಅಪಹರಿಸುವಷ್ಟು ಆಕರ್ಷಕವಾಗಿದೆ. ನಿಜವಾದ ಕಾವ್ಯಾಭಿಮಾನಿಗಳ ಅಧ್ಯಯನಕ್ಕೆ ಹೊಸ ಬಗೆಯ ಪ್ರಯೋಗಗಳಿವೆ. ವಿನೂತನ ಮಾದರಿಗಳೂ ಇವೆ. ಇಲ್ಲಿ ನಮ್ಮ ಶಿಷ್ಟ ಭಾಷೆಯ ಕಾವ್ಯಾತ್ಮಕ ಪರಿಯನ್ನೂ, ಅಂತರ್ಯದಲ್ಲಿರಬಹುದಾದ ಕನ್ನಡದ ನುಡಿಗಟ್ಟಿನ ಸೊಗಡನ್ನೂ ಕವಯತ್ರಿ ನಳಿನ ಡಿ. ಬಹಳ ಮಾರ್ಮಿಕವಾಗಿ ಬಳಸಿದ್ದಾರೆ. ಈ ಧಾಟಿಯ ರಚನೆಗಳು ಹೊಸ ತಲೆಮಾರಿನ ಲೇಖಕರಿಗೆ ಒಂದು 'ಹೊಸ ಅಲೆ'ಯನ್ನೇ ಸೃಷ್ಟಿಸುವಷ್ಟು ಮಾದರಿಯಾಗಿವೆ. ನಳಿನ ಡಿ. ಅವರ ಕೆಲವು ಕವಿತೆಗಳಲ್ಲಿ ರೊಚ್ಚು, ಆಕ್ರೋಶವಿದೆ. ಅಲ್ಲದೆ ಅವರ ಹಲವು ಕವಿತೆಗಳಲ್ಲಿ ವಾಚಾಳಿತನ ಮುಖ ಚಾಚಿದೆ. ಕವಿತೆ ಅಂತಹ ಕಡೆ ಸ್ವಲ್ಪಮಟ್ಟಿಗೆ ಶಿಥಿಲ ಶಿಲ್ಪವಾಗುತ್ತದೆ. ಆದರೆ ಈ ದೋಷವನ್ನು ಭವಿಷ್ಯದಲ್ಲಿ ಮೀರುವುದು ಅವರಿಗೆ ಕಷ್ಟಕರವೇನಲ್ಲ. ದಮನಿತ ಪ್ರಜ್ಞೆಯ ಜೊತೆಗೆ ಅವರು ಮಹಿಳೆಯರ ಮೇಲಾಗುತ್ತಿರುವ ಅನ್ಯಾಯ, ಅತ್ಯಾಚಾರಗಳಿಗೂ ಗಟ್ಟಿ ದನಿಯನ್ನು ನೀಡಿರುವುದು ಪ್ರಮುಖವಾಗಿದೆ. ಪುರುಷನಿಂದ ಮಹಿಳೆ ಮೇಲಾಗುತ್ತಿರುವ ದೌರ್ಜನ್ಯ ಮತ್ತು ದಬ್ಬಾಳಿಕೆಗಳನ್ನು ಅವರು ತಮ್ಮ ಮೇಲಾದ ಅನ್ಯಾಯವೆಂದೇ ಭಾವಿಸಿದ್ದಾರೆ. ಪುರುಷನ ದಬ್ಬಾಳಿಕೆಯನ್ನು ಕವಯತ್ರಿ ಬಹಿರಂಗವಾಗಿಯೇ ಖಂಡಿಸಿದ್ದು ಸಮಂಜಸವಾಗಿದೆ. ನಳಿನ ಡಿ. ಅವರ ಈ ಬೆಳವಣಿಗೆಯ ಕಾರಣ ಸ್ಪಷ್ಟವಾಗಿಯೇ ಇದೆ. ಈ ಕವಯತ್ರಿ ಮೈಗೂಡಿಸಿಕೊಂಡ ವಾಸ್ತವ ಪ್ರಜ್ಞೆ, ಪ್ರತಿಭಟನೆ, ಬಂಡಾಯ ಮನೋಧರ್ಮ, ಸಾಮಾಜಿಕ ಕಾಳಜಿ, ವೈಚಾರಿಕ ಚಿಂತನೆ, ಭಾವದೀಪ್ತವಾಗಿ ಅರಳಿ ನಿಲ್ಲುವಲ್ಲಿನ ಕ್ರಿಯೆ ಸಹಜ ಪರಿಣಾಮಕಾರಿಯಾದದ್ದು. ಅವರ ಅನೇಕ ಕವಿತೆಗಳಿಗೆ ಹೆಚ್ಚಿನ ಆಳ, ವ್ಯಾಪ್ತಿ ಲಭಿಸಿದೆ.

– **ಸಿ. ಎಸ್. ಭೀಮರಾಯ,** ಯಮುನಾನಗರ, ಕಲಬುರಗಿ



## ಕನ್ನಡದಲ್ಲಿ ಪ್ರವಾಸ ಸಾಹಿತ್ಯ

ಡಾ॥ ಅಶೋಕ ನರೋಡೆ

**ಪುಟ :** ೨೫೬ **ಬೆಲೆ :** ರೂ. ೨೦೦

**ಅನುಪಮ ಪ್ರಕಾಶನ,** ಅಥಣಿ

ಪ್ರಮುಖ ಪ್ರವಾಸ ಕಥನಗಳ ವಿಮರ್ಶಾ ಸಂಕಲನ ಕನ್ನಡ ಸಾರಸ್ವತ ಲೋಕದಲ್ಲಿ ಕವಿಯಾಗಿ, ವಿಮರ್ಶಕರಾಗಿ, ಸಂಶೋಧಕರಾಗಿ, ಜಾನಪದ ವಿದ್ವಾಂಸರಾಗಿ, ಅಂಕಣಕಾರರಾಗಿ ಚಿರಪರಿಚಿತರಾಗಿರುವ ಡಾ॥ ಅಶೋಕ ನರೋಡೆಯವರು 'ಕನ್ನಡದಲ್ಲಿ ಪ್ರವಾಸ ಸಾಹಿತ್ಯ' ಕೃತಿಯಲ್ಲಿ ಕನ್ನಡದ ಪ್ರಮುಖ ಪ್ರವಾಸ ಕಥನಕಗಳನ್ನು ಪರಿಚಯಿಸಿದ್ದಾರೆ. ಪ್ರವಾಸ ಸಾಹಿತ್ಯದ ಅಧ್ಯಯನಕಾರರಿಗೆ ಆಕರ ಗ್ರಂಥವಾಗಬಲ್ಲ ಈ ಕೃತಿಯು ಐದು ಭಾಗಗಳನ್ನು ಒಳಗೊಂಡಿದ್ದು, ಡಾ॥ ಅಶೋಕ ಅವರು ಓದಿದ, ಅವರ ಮೇಲೆ ಗಾಢವಾಗಿ ಪ್ರಭಾವ ಬೀರಿದ ಪ್ರವಾಸ ಕಥನಗಳ ಕುರಿತಾಗಿ ಸಾಂದರ್ಭಿಕವಾಗಿ ಬರೆದ ಟಿಪ್ಪಣಿಗಳು, ಪ್ರಾಧ್ಯಾಪಕರ ಪರಿಷತ್ತು, ವಿಚಾರ ಸಂಕಿರಣ, ಆಕಾಶವಾಣಿ ಮತ್ತು ಪತ್ರಿಕೆಗಾಗಿ ಬರೆದ ವಿಶೇಷ ಲೇಖನಗಳು ಇದರಲ್ಲಿವೆ. ಜೊತೆಗೆ, ಸ್ವತಃ ಲೇಖಕರು ಪ್ರವಾಸ ಕೈಗೊಂಡು ಬರೆದ 'ಪ್ರವಾಸ ಕಥನ'ಗಳ ಕುರಿತಾಗಿ ಬೇರೆಯವರು ಬರೆದಿರುವ ಲೇಖನಗಳು ಸಹ ಈ ಕೃತಿಯಲ್ಲಿ ಅಡಕವಾಗಿವೆ. ಕನ್ನಡ ಪ್ರವಾಸ ಸಾಹಿತ್ಯದ ಬಹುತೇಕ ಕೃತಿಗಳ ಕುರಿತಾದ ಅವಲೋಕನಗಳು ಇದರಲ್ಲಿರುವುದು ಈ ಕೃತಿಯ ಅಗ್ಗಳಿಕೆಯಾಗಿರುವುದಷ್ಟೇ ಅಲ್ಲ... ಈ ಕೃತಿಯನ್ನು ಹೊರ ತಂದಿರುವ ಡಾ॥ ಅಶೋಕ ನರೋಡೆಯವರ ಅಗಾದ ಓದಿನ ಮೇಲೂ ಬೆಳಕು ಚೆಲ್ಲುತ್ತದೆ.

– **ಕಲ್ಲೇಶ್ ಕುಂಬಾರ್,** ಹಾರೂಗೇರಿ, ಬೆಳಗಾವಿ

## ದ್ವಿತ್ವ (ಕಾದಂಬರಿ)



ಡಾ॥ ಆರ್. ಸುನಂದಮ್ಮ

**ಪುಟ :** ೪೫೪ **ಬೆಲೆ :** ರೂ. ೩೦೦

**ಕವಿ ಪ್ರಕಾಶನ,** ಹೊನ್ನಾವರ ತಾ॥, ಉತ್ತರ ಕನ್ನಡ ಜಿ॥, ಕವಲಕ್ಕಿ – ೫೮೧ ೩೩೧

ಕನ್ನಡ ಅಧ್ಯಾಪನೆಯಲ್ಲಿ ತೊಡಗಿಕೊಂಡಿದ್ದು, ಜಾನಪದ ಮತ್ತು ಮಹಿಳಾ ಅಧ್ಯಯನದಲ್ಲಿ ವಿಪುಲವಾಗಿ ಕೃಷಿ ಮಾಡಿರುವ ಡಾ॥ ಆರ್. ಸುನಂದಮ್ಮ ಅವರು ೨೦೦೫ರಲ್ಲಿ ಪ್ರಕಟಿಸಿರುವ, ಅವರ ಚೊಚ್ಚಲ ಕಾದಂಬರಿಯ ಎರಡನೆಯ ಮುದ್ರಣ. ಇದು ಸಾಹಿತ್ಯ ಅಕಾಡೆಮಿಯ ಬಹುಮಾನ ಪಡೆದ ಕಾದಂಬರಿ. ಜಾತಿ ಮತ್ತು ಲಿಂಗರಾಜಕಾರಣದ ವಿವಿಧ ಮಜಲುಗಳ ವಿಶ್ಲೇಷಣೆಯನ್ನುಳ್ಳ ಈ ಕಾದಂಬರಿ ಗ್ರಾಮ ಸಮಾಜದ ಸಹಜೀವನ, ಸಂಘರ್ಷ, ತಲ್ಲಣ, ತಳಮಳಗಳನ್ನು ತೆರೆದಿಡುತ್ತಲೇ, ಹೆಣ್ಣಿನ ಶ್ರಮ ಸಂಸ್ಕೃತಿಯ ಮೇಲ್ಮೆಯನ್ನು ಅನಾವರಣಗೊಳಿಸುತ್ತದೆ. ಇಲ್ಲಿನ ಕಥಾ ವಿನ್ಯಾಸದಲ್ಲಿ ಇಬ್ಬರು ಹೆಂಗಸರ ಕಥೆಯನ್ನು ಹೆಣೆಯಲಾಗಿದೆ. ಕಲ್ಲಮ್ಮ ಮತ್ತು ಪುಟ್ಟ ನಂಜಿ ಎಂಬ ಸ್ತ್ರೀಪಾತ್ರಗಳಿಬ್ಬರೂ ಜಾತಿ ಪದ್ಧತಿ ಮತ್ತು ಪುರುಷ ಪ್ರಾಧಾನ್ಯತೆಯಿಂದ ನಲುಗಿ ಸಂಕಷ್ಟಕ್ಕೆ ಸಿಕ್ಕವರು. ಅವರು ತಮ್ಮ ಬದುಕಿನ ಬೇಗೆಯಿಂದ ಮೇಲೆದ್ದು ಬರಲು ಕಂಡುಕೊಳ್ಳುವ ವಿಭಿನ್ನ ಮಾರ್ಗಗಳ ಚಿತ್ರಣದಲ್ಲಿ ಇಡೀ ಕಾದಂಬರಿಯ ಕ್ಯಾನ್‌ವಾಸ್ ಹರಡಿದೆ. ವಿದ್ಯಾಭ್ಯಾಸ ಪಡೆದ ಮೊದಲ ತಲೆಮಾರಿನ ಕೆಳಜಾತಿ ವರ್ಗಗಳ ಅನುಭವ ಮತ್ತು ಅವರು ಬದುಕುತ್ತಿರುವ ಸಮಾಜದ ರಾಜಕೀಯ, ಸಾಮಾಜಿಕ ಬದಲಾವಣೆಗಳು ಒಟ್ಟಾರೆಯಾಗಿ ಇಂದಿನ ಗ್ರಾಮ ಸಮಾಜದ ಪರಿವರ್ತನೆಯ ನಾಡಿ ಮಿಡಿತವನ್ನು ಕಾದಂಬರಿ ಹಿಡಿದಿಡುತ್ತದೆ. ಹೀಗಾಗಿ ಗ್ರಾಮ ಸಂಸ್ಕೃತಿಯ ಬಹುತ್ವದ ನೆಲೆಗಳನ್ನು ಸಮರ್ಥವಾಗಿ ಈ ಕಾದಂಬರಿ ಚರ್ಚಿಸುತ್ತದೆ. ಜಾತಿ ವ್ಯವಸ್ಥೆಯ ಅತ್ಯಂತ ಸಂಕೀರ್ಣ ಸಮಸ್ಯೆಗಳನ್ನಿಟ್ಟುಕೊಂಡು ಉತ್ತರ ಕರ್ನಾಟಕದ, ಕರಾವಳಿ ಪ್ರದೇಶದ ಮತ್ತು ಮೈಸೂರು ಪ್ರಾಂತ್ಯದ ಹಲವಾರು ಪ್ರಾದೇಶಿಕ ಕಾದಂಬರಿಗಳು ರಚಿತವಾಗಿವೆಯಾದರೂ ಕೋಲಾರದ ಕನ್ನಡ ಸೊಗಡನ್ನು ಪರಿಚಯಿಸುವ ಅನನ್ಯತೆಯ ಕಾರಣದಿಂದಲೂ 'ದ್ವಿತ್ವ' ವಿಶಿಷ್ಟವಾಗಿ ನಿಲ್ಲುತ್ತದೆ.

– **ಎನ್. ಆಶಾ,** ಗವಿಪುರಂ, ಬೆಂಗಳೂರು

# ಸ್ವತಂತ್ರ ಭಾರತ - ಆರ್ಥಿಕ ಪ್ರಗತಿಯ ಹಾದಿ

**ಶಂಕರನಾರಾಯಣ**



ಪ್ರಸಿದ್ಧ ಆಂಗ್ಲ ಕವಿ ರಾಬರ್ಟ್ ಫ್ರಾಸ್ಟ್ ಒಮ್ಮೆ, "ದಟ್ಟ ಅಡವಿಯಲ್ಲಿ ಕವಲು ದಾರಿಯ ಮುಂದೆ ನಿಂತ ನಾನು, ಹೆಚ್ಚು ಪ್ರಯಾಣಿಕರು ಪಯಣಿಸದಿದ್ದ ದಾರಿಯನ್ನು ಆಯ್ಕೆ ಮಾಡಿಕೊಂಡೆ. ಅದರಿಂದ ಅನೇಕ ವ್ಯತ್ಯಾಸಗಳಾಗಿ, ವಿಭಿನ್ನ ಅನುಭವವನ್ನು ಪಡೆದೆ" ಎಂದು ಬರೆದ. ಒಂದು ರಾಷ್ಟ್ರವಾಗಿ, ನಾವು ೭೦ ವರ್ಷ ಕಳೆದಿದ್ದೇವೆ. ನಾವು ನಡೆದು ಬಂದ ಹಾದಿಯ ಕುರಿತು ಗಂಭೀರ ಚಿಂತನೆ ನಡೆಸಬೇಕಾಗಿದೆ. ನಮ್ಮ ದೇಶ ಈ ಅವಧಿಯಲ್ಲಿ ಅನೇಕ ಏರಿಳಿತಗಳನ್ನು ಕಂಡಿದೆ. ಒಟ್ಟು ರಾಷ್ಟ್ರೀಯ ಉತ್ಪನ್ನ (ಜಿ. ಡಿ. ಪಿ.) ಮತ್ತು ಕೊಳ್ಳುವ ಶಕ್ತಿಯ ಸಮಾನತೆಗಳ ಆಧಾರದ ಮೇಲೆ ಭಾರತ ವಿಶ್ವದಲ್ಲಿ ಐದನೇ ಬೃಹತ್ ಅರ್ಥವ್ಯವಸ್ಥೆಯಾಗಿ ಬೆಳೆದು ನಿಂತಿದೆ.

ಭಾರತದ ಸ್ವಾತಂತ್ರ್ಯದ ನಂತರದ ಇತಿಹಾಸವನ್ನು ಎರಡು ಮುಖ್ಯ ಮಜಲುಗಳನ್ನಾಗಿ ವಿಂಗಡಿಸಬಹುದು : ೧೯೫೦ – ೫೧ರಿಂದ ೧೯೭೯ – ೮೦ರವರೆಗಿನ ಸಮಾಜವಾದಿ ಸಿದ್ಧಾಂತದ ಭಾರತೀಯ ವ್ಯಾಖ್ಯಾನಾಧಾರಿತ ಬೆಳವಣಿಗೆಯ ಹಾದಿ ಮತ್ತು ೧೯೮೦ರ ನಂತರದ ಮುಕ್ತ ಮಾರುಕಟ್ಟೆ ಸಿದ್ಧಾಂತ ಪ್ರೇರೇಪಿತ ಬೆಳವಣಿಗೆಯ ಅಧ್ಯಾಯ. ದೇಶದ ಒಟ್ಟು ರಾಷ್ಟ್ರೀಯ ಉತ್ಪನ್ನದ ಬೆಳವಣಿಗೆ ಅಷ್ಟೇನೂ ಆಶಾದಾಯಕವಾಗಿಲ್ಲ. ೧೯೫೦ – ೫೧ರಲ್ಲಿ ೨,೯೨,೯೬ ಕೋಟಿ ರೂಗಳಷ್ಟಿದ್ದ ಒಟ್ಟು ರಾಷ್ಟ್ರೀಯ ವರಮಾನ ೨೦೧೬ – ೧೭ರ ವೇಳೆಗೆ ೧,೨೦,೩೪,೭೧೩ ಕೋಟಿ ರೂಗಳಷ್ಟು ವೃದ್ಧಿಯಾಗಿದೆ. ಒಟ್ಟು ರಾಷ್ಟ್ರೀಯ ಉತ್ಪನ್ನ ೧೯೫೦ – ೫೧ರಲ್ಲಿ ೨,೬೯,೭೨೪ ಕೋಟಿ ರೂಗಳಷ್ಟಿತ್ತು. ಈಗ ಅದು ೧,೦೬,೮೬,೭೭೬ ಕೋಟಿ ರೂಗಳಷ್ಟಾಗಿದೆ. ಒಟ್ಟು ರಾಷ್ಟ್ರೀಯ ಉತ್ಪನ್ನ ೩೯ರಷ್ಟು ಹೆಚ್ಚಳವನ್ನು ಕಂಡಿದ್ದರೆ, ತಲಾ ವ್ಯಕ್ತಿಗತ ಆದಾಯ (ಪಿ. ಸಿ. ಐ.) ಕೇವಲ ೧೧ರಷ್ಟು ಹೆಚ್ಚಳವನ್ನು ಕಂಡಿದೆ. ೧೯೫೦ – ೫೧ರಲ್ಲಿ ತಲಾ ವ್ಯಕ್ತಿಗತ ಆದಾಯ ೭೫೧೩ ರೂಗಳಷ್ಟಿತ್ತು. ಅದು ಈಗ ೮೨,೨೬೯ ರೂಗಳಷ್ಟಾಗಿದೆ. ಇದಕ್ಕೆ, ಅನೇಕ ಕಾರಣಗಳಲ್ಲಿ, ಪ್ರಮುಖ ಕಾರಣವೆಂದರೆ ಜನಸಂಖ್ಯಾ ಸ್ಫೋಟ. ೧೯೫೧ರಲ್ಲಿ ಕೇವಲ ೩೬.೧೨ ಕೋಟಿಯಷ್ಟಿದ್ದ ಜನಸಂಖ್ಯೆ ಈಗ ೧೩೦ ಕೋಟಿಯಷ್ಟಾಗಿದೆ. ಶೇಕಡ ೨೩೫.೩೪ರಷ್ಟು ಹೆಚ್ಚಳ ಉಂಟಾಗಿದೆ.

ನಮ್ಮ ದೇಶ ಅನುಸರಿಸಿದ ಆರ್ಥಿಕ ನೀತಿಗಳ ಪರಿಣಾಮವಾಗಿ ಅರ್ಥವ್ಯವಸ್ಥೆಯ ಬೆಳವಣಿಗೆ ಏರುಪೇರುಗಳನ್ನು ಕಂಡಿದೆ. ೧೯೫೧ – ೬೪ರ ಪಂಡಿತ್ ಜವಾಹರಲಾಲ್ ನೆಹರೂರವರ ಸಮಾಜವಾದಿ ಸಿದ್ಧಾಂತ ಪ್ರೇರೇಪಿತ ಅರ್ಥವ್ಯವಸ್ಥೆ ಶೇಕಡ ೪.೪ರಷ್ಟು ಬೆಳವಣಿಗೆ ಕಂಡಿತು. ೧೯೬೪ರಲ್ಲಿ ನೆಹರೂ ನಿಧನರಾದರು. ನಂತರ ಅಧಿಕಾರಕ್ಕೆ ಬಂದ ಇಂದಿರಾ ಗಾಂಧಿ, ದೇಶದ ರಕ್ಷಣಾ ವ್ಯವಸ್ಥೆಯ ಕಡೆ ಗಮನ ಕೇಂದ್ರೀಕರಿಸಿದರು. ದೇಶದ ಅರ್ಥವ್ಯವಸ್ಥೆ ಹಿನ್ನಡೆ ಅನುಭವಿಸಬೇಕಾಯಿತು. ೧೯೬೫ – ೭೯ರ ಅವಧಿಯಲ್ಲಿ ಅನೇಕ ರಾಜಕೀಯ ಬೆಳವಣಿಗೆಗಳು, ಮರು ಹೊಂದಾಣಿಕೆಗಳು ಮತ್ತು ತುಮುಲಗಳ ಪರಿಣಾಮವಾಗಿ ದೇಶದ ಅರ್ಥ ವ್ಯವಸ್ಥೆಯ ಬೆಳವಣಿಗೆ ಶೇಕಡ ೨.೯ಕ್ಕೆ ಕುಸಿಯಿತು.

ಈ ಹಂತದಲ್ಲಿ, ಅರ್ಥ ವ್ಯವಸ್ಥೆಯಲ್ಲಿ ಸರ್ಕಾರದ ನೇರ ಭಾಗವಹಿಸುವ ಪಾತ್ರವನ್ನು ಪ್ರಜ್ಞಾಪೂರ್ವಕವಾಗಿ ಹೆಚ್ಚಿಸಲಾಯಿತು. ಸಾರ್ವಜನಿಕ ಕ್ಷೇತ್ರ, ವ್ಯಾಪಕವಾಗಿ ವಿಸ್ತಾರಗೊಂಡು ದೇಶದ ಆರ್ಥಿಕ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ನಿರ್ವಹಿಸಿತು. ೧೯೭೯ರವರೆಗೂ ವಾರ್ಷಿಕ ಬಂಡವಾಳ ಹೂಡಿಕೆ ಶೇಕಡ ೬.೧ರಷ್ಟು ಬೆಳೆಯಿತು. ಸರ್ಕಾರದ ವತಿಯಿಂದಲೂ ಶೇಕಡ ೭.೨ರಷ್ಟು ಬಂಡವಾಳ ಹೂಡಿಕೆ ಉಂಟಾಯಿತು. ಸರ್ಕಾರದ ಉಪಭೋಗದ ದರ ಶೇಕಡ ೫.೮ರಷ್ಟು ಹೆಚ್ಚಾಗಿ, ಅದು ಅರ್ಥವ್ಯವಸ್ಥೆಯ ವಾರ್ಷಿಕ ಬೆಳವಣಿಗೆಯ ದರವನ್ನೂ ಮೀರಿಸಿತು. ಹಲವು ಶತಮಾನಗಳ ಕಾಲ, ಬ್ರಿಟಿಷ್ ವಸಾಹತುಶಾಹಿ ಆಡಳಿತವನ್ನು ಅನುಭವಿಸಿದ್ದ ಭಾರತ ವಿದೇಶಿ ಬಂಡವಾಳ ಹೂಡಿಕೆ ಪ್ರಸ್ತಾವನೆಗಳಿಗೆ ತೆರೆದುಕೊಳ್ಳಲಿಲ್ಲ.

ಮತ್ತೊಂದೆಡೆ, ಪರವಾನಗಿ ವ್ಯವಸ್ಥೆಯ ಹಾವಳಿ ಅರ್ಥವ್ಯವಸ್ಥೆಯ ಬೆಳವಣಿಗೆಯ ಕುಂಠಿತಕ್ಕೆ ಕಾರಣವಾಯಿತು. ೧೯೮೦ – ೯೧ರ ಅವಧಿಯಲ್ಲಿ, ಭಾರತದ ಅರ್ಥವ್ಯವಸ್ಥೆ ಹಂತ ಹಂತವಾಗಿ, ವಿದೇಶಿ ಬಂಡವಾಳ ಹೂಡಿಕೆ ಪ್ರಸ್ತಾವನೆಗಳಿಗೆ ತೆರೆದುಕೊಂಡಿತು. ಅರ್ಥವ್ಯವಸ್ಥೆ ಸರಾಸರಿ ಶೇಕಡ ೫.೫ರಷ್ಟು ಬೆಳವಣಿಗೆಯ ವೇಗವನ್ನು ಸಾಧಿಸಿತು. ಕೇಂದ್ರ ಸರ್ಕಾರ ಪರವಾನಗಿ ಕಟ್ಟುನಿಟ್ಟಿನ ನಿಯಮಗಳನ್ನು ಸಡಿಲಿಸಿ, ದೂರಸಂಪರ್ಕ ಮತ್ತು ಕಂಪ್ಯೂಟರ್ ತಂತ್ರಜ್ಞಾನ ಕ್ಷೇತ್ರಗಳ ಬೆಳವಣಿಗೆಗೆ ಉತ್ತೇಜನ ನೀಡಿತು.

೧೯೯೧ರಲ್ಲಿ, ಭಾರತ ಸ್ಥಿರ ವಿದೇಶಿ ವಿನಿಮಯ ದರ ಪದ್ಧತಿಯನ್ನು ಅನುಸರಿಸುತ್ತಿತ್ತು. ೧೯೮೫ರಿಂದ ಭಾರತ ಆಯಾತ ಮತ್ತು ನಿರ್ಯಾತ ಅಥವಾ ಆಮದು ಮತ್ತು ರಫ್ತುಗಳ ನಡುವಣ ವ್ಯತ್ಯಯಗಳಿಂದ ಪಾವತಿ ಶಿಲ್ಕು ಸಮಸ್ಯೆಗಳನ್ನು ಎದುರಿಸಬೇಕಾಯಿತು. ೧೯೯೧ರ ವೇಳೆಗೆ ಭಾರತ

ಪರವಾನಗಿ ವ್ಯವಸ್ಥೆಯ ಹಾವಳಿ ಅರ್ಥವ್ಯವಸ್ಥೆಯ ಬೆಳವಣಿಗೆಯ ಕುಂಠಿತಕ್ಕೆ ಕಾರಣವಾಯಿತು. ೧೯೮೦ – ೯೧ರ ಅವಧಿಯಲ್ಲಿ ಭಾರತದ ಅರ್ಥವ್ಯವಸ್ಥೆ ಹಂತ ಹಂತವಾಗಿ, ವಿದೇಶಿ ಬಂಡವಾಳ ಹೂಡಿಕೆ ಪ್ರಸ್ತಾವನೆಗಳಿಗೆ ತೆರೆದುಕೊಂಡಿತು. ಅರ್ಥವ್ಯವಸ್ಥೆ ಸರಾಸರಿ ಶೇಕಡ ೫.೫ರಷ್ಟು ಬೆಳವಣಿಗೆಯ ವೇಗವನ್ನು ಸಾಧಿಸಿತು. ಕೇಂದ್ರ ಸರ್ಕಾರ ಪರವಾನಗಿ ಕಟ್ಟುನಿಟ್ಟಿನ ನಿಯಮಗಳನ್ನು ಸಡಿಲಿಸಿ, ದೂರಸಂಪರ್ಕ ಮತ್ತು ಕಂಪ್ಯೂಟರ್ ತಂತ್ರಜ್ಞಾನ ಕ್ಷೇತ್ರಗಳ ಬೆಳವಣಿಗೆಗೆ ಉತ್ತೇಜನ ನೀಡಿತು.

## ಆರ್ಥಿಕ ಪ್ರಗತಿಯ ಪಥ

| | ಒಟ್ಟು ರಾಷ್ಟ್ರೀಯ ಆದಾಯ (ಕೋಟಿ ರೂಗಳಲ್ಲಿ) | | ನಿವ್ವಳ ರಾಷ್ಟ್ರೀಯ ಆದಾಯ (ಕೋಟಿ ರೂಗಳಲ್ಲಿ) | | ತಲಾ ವ್ಯಕ್ತಿಗತ ನಿವ್ವಳ ರಾಷ್ಟ್ರೀಯ ಆದಾಯ (ರೂಗಳಲ್ಲಿ) | |
|---|---|---|---|---|---|---|
| ವರ್ಷ | ಪ್ರಚಲಿತ ಬೆಲೆಗಳು | ಸ್ಥಿರ ಬೆಲೆಗಳು | ಪ್ರಚಲಿತ ಬೆಲೆಗಳು | ಸ್ಥಿರ ಬೆಲೆಗಳು | ಪ್ರಚಲಿತ ಬೆಲೆಗಳು | ಸ್ಥಿರ ಬೆಲೆಗಳು |
| ೧೯೫೦ – ೫೧ | ೧೦,೩೬೦ | ೨,೯೨,೯೯೬ | ೯,೮೨೯ | ೨,೬೯,೭೨೪ | ೨೭೪ | ೭,೫೧೩ |
| ೧೯೬೦ – ೬೧ | ೧೭,೮೭೦ | ೪,೩೪,೪೯೭ | ೧೭,೦೬೨ | ೪,೧೧,೫೧೯ | ೩೯೩ | ೯,೪೮೨ |
| ೧೯೭೦ – ೭೧ | ೪೭,೩೫೪ | ೬,೪೦,೨೭೫ | ೪೪,೫೫೦ | ೫,೯೬,೪೭೦ | ೮೨೩ | ೧೧,೦೨೫ |
| ೧೯೮೦ – ೮೧ | ೧,೪೯,೯೮೭ | ೮,೬೬,೩೩೮ | ೧,೩೮,೫೬೫ | ೭,೯೫,೧೯೩ | ೨,೦೪೧ | ೧೧,೭೧೧ |
| ೧೯೯೧ – ೯೨ | ೫,೭೮,೬೬೭ | ೧೪,೭೦,೭೬೬ | ೫,೨೬,೦೧೭ | ೧೩,೪೨,೦೩೧ | ೬,೨೭೦ | ೧೫,೯೯೬ |
| ೨೦೦೦ – ೦೧ | ೨೧,೫೪,೬೮೦ | ೨೫,೩೫,೯೧೧ | ೧೯,೪೭,೭೮೮ | ೨೨,೯೧,೭೯೫ | ೧೯,೧೧೫ | ೨೨,೪೯೧ |
| ೨೦೧೦ – ೧೧ | ೭೭,೦೨,೩೦೮ | ೫೨,೨೭,೭೩೯ | ೬೯,೪೨,೦೮೯ | ೪೬,೫೭,೪೩೮ | ೫೮,೫೩೪ | ೩೯,೨೭೦ |
| ೨೦೧೬ – ೧೭ | ೧,೪೯,೯೪,೧೦೯ | ೧,೨೦,೩೪,೭೧೩ | ೧,೩೪,೦೮,೨೧೧ | ೧,೦೬,೮೬,೭೭೬ | ೧,೦೩,೨೧೯ | ೮೨,೨೬೯ |

*ಮೂಲ : ಆರ್ಥಿಕ ಸಮೀಕ್ಷೆ*

ತೀವ್ರವಾದ ಆರ್ಥಿಕ ಬಿಕ್ಕಟ್ಟಿಗೆ ಸಿಲುಕಿತು. ರಿಸರ್ವ್ ಬ್ಯಾಂಕ್ ಸರ್ಕಾರಕ್ಕೆ ಸಾಲ ನೀಡಲು ನಿರಾಕರಿಸಿತು. ವಿದೇಶಿ ವಿನಿಮಯ ಸಂಗ್ರಹದ ಮೊತ್ತ ಕುಸಿದು, ಮೂರು ತಿಂಗಳು ಆಮದು ವೆಚ್ಚವನ್ನು ಭರಿಸಲೂ ಸಹ ಸರ್ಕಾರ ಅಸಮರ್ಥವಾಯಿತು.

ಅಂತಹ ಸಂದರ್ಭದ ಹಿನ್ನೆಲೆಯಲ್ಲಿ ಅಂದಿನ ಹಣಕಾಸು ಸಚಿವರಾಗಿದ್ದ ಡಾ॥ ಮನಮೋಹನ್ ಸಿಂಗ್‌ರವರು ತಮ್ಮ ಅಚ್ಚು ಮೆಚ್ಚಿನ ಉದಾರೀಕರಣ, ಖಾಸಗೀಕರಣ, ಜಾಗತೀಕರಣ ನೀತಿಯನ್ನು ಪ್ರಕಟಿಸಿದರು. ನಂತರದ ದಶಕದಲ್ಲಿ ಅರ್ಥವ್ಯವಸ್ಥೆ ಶೇಕಡ ೬ರಷ್ಟು ವಾರ್ಷಿಕ ಆರ್ಥಿಕ ಪ್ರಗತಿಯನ್ನು ಸಾಧಿಸಿತು. ಈ ಹಂತದಲ್ಲಿ ಸರ್ಕಾರವು ಹೇರಿದ್ದ ಅನೇಕ ಕಾನೂನು ನಿಯಂತ್ರಣಗಳನ್ನು ರದ್ದುಪಡಿಸಲಾಯಿತು.

೨೦೦೨ರಿಂದ ೨೦೧೧ರ ಅವಧಿಯಲ್ಲಿ ಭಾರತೀಯ ಅರ್ಥವ್ಯವಸ್ಥೆ ಬೆಳವಣಿಗೆಯ ಉಚ್ಛ್ರಾಯ ಸ್ಥಿತಿಯನ್ನು ತಲುಪಿತು. ೨೦೦೭ರಲ್ಲಿ ಅಮೆರಿಕಾದ ಅರ್ಥವ್ಯವಸ್ಥೆಯಲ್ಲಿ ಗಂಭೀರ ಬಿಕ್ಕಟ್ಟು ಸಂಭವಿಸಿ ಹಿಂಜರಿತ ಉಂಟಾದ ಹಿನ್ನೆಲೆಯಲ್ಲೂ ಭಾರತದ ಅರ್ಥವ್ಯವಸ್ಥೆ ಶೇಕಡ ೭.೫ರಷ್ಟು ಪ್ರಗತಿಯನ್ನು ದಾಖಲಿಸಿತು. ೨೦೦೭–೦೮ರಲ್ಲಿ, ಶೇಕಡ ೧೦.೧ರಷ್ಟು ಬೆಳವಣಿಗೆ ಕಂಡುಬಂತು. ೨೦೧೧ರ ನಂತರ ಅನೇಕ ಕಾರಣಗಳಿಂದ ಬೆಳವಣಿಗೆಯ ವೇಗ ನಿಧಾನವಾಯಿತು. ಅರ್ಥವ್ಯವಸ್ಥೆಯಲ್ಲಿ ಆರ್ಥಿಕ ಹಿಂಜರಿತ ತಲೆದೋರಿತು. ಸರ್ಕಾರ ತನ್ನ ಹೆಚ್ಚುವರಿ ಯೋಜನಾ ವೆಚ್ಚವನ್ನು ೨೦,೦೦೦ ಕೋಟಿ ರೂಗಳಿಗೆ ಏರಿಸಿತು. ಕೇಂದ್ರ ಸರ್ಕಾರ, ಸಾರ್ವಜನಿಕ ವೆಚ್ಚವನ್ನು ೩ ಲಕ್ಷ ಕೋಟಿಯವರೆಗೆ ಭರಿಸಿತು. ೨೦೧೬–೧೭ರಲ್ಲಿ ದೇಶದ ಅರ್ಥವ್ಯವಸ್ಥೆ ಶೇಕಡ ೭.೧ರಷ್ಟು ಬೆಳವಣಿಗೆಯನ್ನು ಕಂಡಿದೆ.

ವರುಷಗಳು, ದಶಕಗಳು, ಉರುಳಿದಂತೆ ಆರ್ಥಿಕ ಪ್ರಗತಿಯ ಪರಿಕಲ್ಪನೆಯೂ ಬದಲಾಯಿತು. ಮಾನವ ಸಂಪನ್ಮೂಲ ಬೆಳವಣಿಗೆ ಸೂಚಕವನ್ನು ಪರಿಚಯಿಸಲಾಯಿತು. ಇದರಡಿ ವ್ಯಕ್ತಿಯ ಸರಾಸರಿ ಜೀವಿತಾವಧಿ, ಶಿಕ್ಷಣ ಮತ್ತು ತಲಾ ವ್ಯಕ್ತಿಗತ ಆದಾಯಗಳನ್ನು ಗಣನೆಗೆ ತೆಗೆದುಕೊಳ್ಳಲಾಯಿತು. ಮಾನವ ಸಂಪನ್ಮೂಲ ಬೆಳವಣಿಗೆಯ ಸೂಚಕದ ಆಧಾರದ ಮೇಲೆ ಜಗತ್ತಿನ ರಾಷ್ಟ್ರಗಳನ್ನು ವಿಂಗಡಿಸಿ ಅನೇಕ ದರ್ಜೆಗಳಲ್ಲಿ ಶ್ರೇಣೀಕರಿಸಲಾಯಿತು. ವಿಶ್ವದ ೧೮೮ ರಾಷ್ಟ್ರಗಳಲ್ಲಿ, ಭಾರತ ಮಾನವ ಸಂಪನ್ಮೂಲ ಬೆಳವಣಿಗೆಯ ಸೂಚಕದ ರೀತ್ಯಾ ೧೩೧ನೇ ಸ್ಥಾನದಲ್ಲಿದೆ. ೧೯೫೦ರಲ್ಲಿ ವ್ಯಕ್ತಿಯ ಜೀವಿತಾವಧಿ ೩೧ ವರ್ಷಗಳಷ್ಟಿದ್ದು, ೨೦೧೫ರಲ್ಲಿ ಅದು ೬೮.೩ ವರ್ಷಗಳ ಮಟ್ಟಕ್ಕೆ ತಲುಪಿದೆ. ಸಾಕ್ಷರತಾ ಮಟ್ಟ ೧೯೫೦ರಲ್ಲಿ ಶೇಕಡ ೧೨ರಷ್ಟಿದ್ದು, ಪ್ರಸ್ತುತ ಅದು ಶೇಕಡ ೭೪ರಷ್ಟು ಪ್ರಗತಿಯನ್ನು ಸಾಧಿಸಿದೆ.

ಏಳು ದಶಕಗಳಲ್ಲಿ, ಹಲವು ಸ್ತರಗಳಲ್ಲಿ, ಕ್ಷೇತ್ರಗಳಲ್ಲಿ ಗಣನೀಯ ಪ್ರಗತಿಯಾಗಿದ್ದರೂ, ಜನಸಾಮಾನ್ಯರ ಜೀವನ ಗುಣಮಟ್ಟದಲ್ಲಿ ಪ್ರಗತಿಯನ್ನು ಸಾಧಿಸಬೇಕಾದುದು ಬಹಳಷ್ಟಿದೆ.

*(ಆಧಾರ : ದಿನಾಂಕ ೨೧.೦೮.೨೦೧೭ರಂದು ಆಂಗ್ಲ ದಿನ ಪತ್ರಿಕೆ 'ಡೆಕ್ಕನ್ ಹೆರಲ್ಡ್'ನಲ್ಲಿ ಪ್ರಕಟವಾದ ಶ್ರೀಯುತ ಫರ್ಹಾನ್ ಮೊಹರ್ಖಾನ್‌ರವರ ಲೇಖನ)*

**ಶಂಕರನಾರಾಯಣ**
# ೫೪/೧೧೪, ೧ನೇ ಅಡ್ಡರಸ್ತೆ, ಕೃಷ್ಣಾನಗರ
ಬೆಂಗಳೂರು – ೫೬೦ ೦೬೧

## ಕಂಬನಿ



ಕರ್ನಾಟಕದ ಪ್ರಗತಿಪರ ಚಿಂತಕ, ವಿಚಾರವಾದಿ, ಬರಹಗಾರ, ಸಜ್ಜನ, ಸ್ನೇಹಮಯಿ ಪ್ರೊ॥ ಬಿ. ವಿ. ವೀರಭದ್ರಪ್ಪನವರು ನಿಧನರಾಗಿದ್ದಾರೆ. 'ನವಕರ್ನಾಟಕ' ಮತ್ತು 'ಹೊಸತು' ಬಳಗದವರಾಗಿದ್ದ ಶ್ರೀಯುತರ 'ವಾಸ್ತು ಎಷ್ಟು ವಾಸ್ತವ', 'ವೇದಗಳಲ್ಲಿ ಜನಸಾಮಾನ್ಯರು', 'ಭಗವದ್ಗೀತೆ ಒಂದು ವೈಚಾರಿಕ ಒಳನೋಟ' ಮತ್ತು 'ಧರ್ಮ ಮತ್ತು ವೈಚಾರಿಕತೆ' ಪುಸ್ತಕಗಳನ್ನು ನವಕರ್ನಾಟಕ ಪ್ರಕಾಶನವು ಪ್ರಕಟಿಸಿದೆ. 'ಹೊಸತು' ಪತ್ರಿಕೆಯಲ್ಲಿ ಅವರ ಹಲವಾರು ಲೇಖನಗಳು ಪ್ರಕಟವಾಗಿವೆ. ಅವರ ಕೊಡುಗೆಯನ್ನು ಕೃತಜ್ಞತೆಯಿಂದ ನೆನೆಯುತ್ತೇವೆ ಮತ್ತು ಅವರ ಕುಟುಂಬದವರಿಗೆ ನಮ್ಮ ಸಾಂತ್ವನ ತಿಳಿಸುತ್ತೇವೆ.

# ಮೈನ್ಮಾರ್ : ರೋಹಿಂಗ್ಯಾಗಳ ಹತ್ಯಾಕಾಂಡ ನಿರಾಶ್ರಿತರ ಸಮಸ್ಯೆ

**ಸಿ. ಆರ್. ಕೃಷ್ಣರಾವ್**

ಮೈನ್ಮಾರ್‌ನ ರೋಹಿಂಗ್ಯಾ ಜನಾಂಗದ ಸಮಸ್ಯೆ ಇಂದು ವಿಶ್ವರೂಪ ತಳೆದಿದೆ. ದಬ್ಬಾಳಿಕೆ ಮತ್ತು ಕ್ರಮಬದ್ಧವಾದ ನರಹತ್ಯೆಯಿಂದ ಭೀತರಾಗಿ ಈಗಾಗಲೇ ನಾಲ್ಕು ಲಕ್ಷ ಜನ ನಿರಾಶ್ರಿತರಾಗಿ ನೆರೆಯ ಬಂಗ್ಲಾದೇಶಕ್ಕೆ ಹೋಗಿದ್ದಾರೆ. ಸಾವಿರಾರು ಮಂದಿ ಅಸುನೀಗಿದ್ದು, ದೋಣಿಯಲ್ಲಿ ಸಾಗಿ ಬಚಾವಾಗಲು ನೋಡುತ್ತಿದ್ದ ಹಲವರು ಮುಳುಗಡೆಯಾಗಿ ಮೃತಪಟ್ಟಿದ್ದಾರೆ. ನಿರಾಶ್ರಿತರಾಗಿ ಬಂದಿರುವವರ ಪೈಕಿ ಸುಮಾರು ೪೦ ಸಾವಿರ ಮಂದಿ ಭಾರತದಲ್ಲೂ ಇದ್ದಾರೆ. ಮೋದಿ ಸರಕಾರ ಈ ನಿರಾಶ್ರಿತರಿಗೆ ಆಶ್ರಯ ನೀಡುವುದಕ್ಕೆ ಪ್ರತಿಯಾಗಿ ಇಬ್ಬಂದಿಯ ನೀತಿ ಅನುಸರಿಸುತ್ತಿದೆ. ಅವರನ್ನು ಹಿಂದಕ್ಕೆ ಅಟ್ಟುವ ಅಮಾನವೀಯ ಯೋಜನೆಯೂ ಸರಕಾರಕ್ಕಿದೆ. ವಿದೇಶಾಂಗ ಸಚಿವೆ ಸುಷ್ಮಾ ಸ್ವರಾಜ್ ಭಾರತ ದ್ವಿಪಕ್ಷೀಯವಾಗಿ ಹಾಗೂ ಇತರ ದೇಶಗಳ ಜೊತೆಗೂಡಿ ರೋಹಿಂಗ್ಯಾ ನಿರಾಶ್ರಿತರನ್ನು ವಾಪಸ್ಸು ತೆಗೆದುಕೊಳ್ಳುವಂತೆ ಒತ್ತಾಯ ತರುತ್ತದೆ ಎಂದೂ ಹೇಳಿದ್ದಾರೆ ಎಂದು ವರದಿಯಾಗಿದೆ. ಈ ಬಗ್ಗೆ ಸಚಿವಾಲಯ ಮಾತ್ರ ಮೌನವಾಗಿದೆ. ಪ್ರಧಾನಿ ನರೇಂದ್ರ ಮೋದಿ ಎಂದಿನಂತೆ ಈ ವಿಷಯದಲ್ಲಿ ಮೌನ ತಾಳಿದ್ದಾರೆ.

ವಿಶ್ವಸಂಸ್ಥೆಯ ಮಾನವಹಕ್ಕುಗಳ ಆಯೋಗ ರೋಹಿಂಗ್ಯಾ ಜನಾಂಗದ ಮೇಲೆ ನಡೆಯುತ್ತಿರುವ ಹತ್ಯೆಯನ್ನು ನಿರ್ದಾಕ್ಷಿಣ್ಯವಾಗಿ ಜನಾಂಗ ದ್ವೇಷದ ನರಹತ್ಯೆ ಎಂದು ಖಂಡಿಸಿದೆ. ಈ ಸಂಸ್ಥೆಯ ನಿರಾಶ್ರಿತರ ಆಯೋಗ ರೋಹಿಂಗ್ಯಾ ನಿರಾಶ್ರಿತರಿಗೆ ನೆರವು ನೀಡುತ್ತಿದೆ. ವಿಶ್ವಸಂಸ್ಥೆಯ ವರದಿಗಳ ಪ್ರಕಾರ ಮೈನ್ಮಾರ್‌ನ ರಾಖೈನ್ ರಾಜ್ಯದಲ್ಲಿ ನೆಲೆಸಿದ್ದ ರೋಹಿಂಗ್ಯಾ ಜನಾಂಗ ಶೇ. ೪೦ರಷ್ಟು ಮಂದಿ ಬಂಗ್ಲಾದೇಶಕ್ಕೆ ವಲಸೆ ಹೋಗಿದ್ದಾರೆ. ಮುಸಲ್ಮಾನರೇ ಅಧಿಕವಾಗಿರುವ ಈ ಜನಾಂಗದ ಮೇಲೆ ದಬ್ಬಾಳಿಕೆ ಪ್ರಾರಂಭವಾದ್ದು ಕಳೆದ ಆಗಸ್ಟ್ ೧೫ರಿಂದ ಭಾರತಕ್ಕೆ ಬಂದಿರುವ ನಿರಾಶ್ರಿತರು ವಿಶ್ವಸಂಸ್ಥೆಯ ನಿರಾಶ್ರಿತರ ಆಯೋಗದ ಪ್ರಕಾರ ತಮ್ಮನ್ನು ನಿರಾಶ್ರಿತರೆಂದು ಪರಿಗಣಿಸಬೇಕೆಂದು ಸುಪ್ರೀಮ್ ಕೋರ್ಟಿನಲ್ಲಿ ಅರ್ಜಿ ಸಲ್ಲಿಸಿದ್ದಾರೆ. ಗೃಹಸಚಿವ ರಾಜನಾಥ ಸಿಂಗ್‌ರ ಪ್ರಕಾರ ರೋಹಿಂಗ್ಯಾ ಮುಸ್ಲಿಮರನ್ನು ವಾಪಸ್ಸು ಕಳಿಸುವಂತೆ ಅಫಿಡವಿಟ್ ಸಲ್ಲಿಸಿದೆ. ಈ ನಿರಾಶ್ರಿತರು ಗೃಹಸಚಿವರು ಹೇಳುವಂತೆ ದೇಶದ ಭದ್ರತೆಗೆ ವಿಪತ್ಕಾರಿ. ಅಫಿಡವಿಟ್‌ನಲ್ಲಿ ರೋಹಿಂಗ್ಯಾಗಳಿಗೂ ಭಯೋತ್ಪಾದಕರಿಗೂ ನಂಟು ಕಲ್ಪಿಸಿದೆ. ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಆಯೋಗ ಭಾರತ ಸರಕಾರದ ನೀತಿಯನ್ನು ಬಲವಾಗಿ ಟೀಕಿಸಿದೆ. ಈ ವಿಷಯದಲ್ಲಿ ಭಾರತ ಸರಕಾರದ ನೀತಿ ಖಂಡನೀಯ. ಭಾರತ ಯಾವತ್ತೂ ನಿರಾಶ್ರಿತರಿಗೆ ಆಶ್ರಯ ನೀಡಿದೆ. ಸ್ವಾತಂತ್ರ್ಯಾನಂತರ ಭಾರತ ಎದುರಿಸಬೇಕಾಗಿ ಬಂದದ್ದು ಪಾಕಿಸ್ತಾನದಿಂದ ಭಾರತಕ್ಕೆ ಬಂದ ಲಕ್ಷಾಂತರ ಮಂದಿ ನಿರಾಶ್ರಿತರ ಸಮಸ್ಯೆ. ಶ್ರೀಲಂಕಾದಿಂದಲೂ ಭಾರತಕ್ಕೆ ನಿರಾಶ್ರಿತರು ಬಂದಿದ್ದಾರೆ. ಟಿಬೆಟ್ ನಿರಾಶ್ರಿತರಿಗೆ ಆಶ್ರಯ ನೀಡಿದ್ದು ಕೂಡ ಭಾರತ ಸರಕಾರವೇ. ಹಾಗಿರುವಾಗ ರೋಹಿಂಗ್ಯಾಗಳ ಬಗ್ಗೆ ಮಾತ್ರವೇ ಈಗ ಇಬ್ಬಗೆಯ ನೀತಿ ಏಕೆ ? ಉಪಖಂಡದಲ್ಲಿ ದೊಡ್ಡರಾಷ್ಟ್ರವಾಗಿರುವ ಭಾರತ ಮಾನವೀಯ ದೃಷ್ಟಿಯಿಂದ ರೋಹಿಂಗ್ಯಾಗಳಿಗೆ ಅಗತ್ಯವಾದ ಎಲ್ಲ ನೆರವನ್ನೂ ನೀಡುವುದು ಕರ್ತವ್ಯ ಎನ್ನುವುದನ್ನು ಗಮನಿಸಬೇಕು. ಹಾಗಿಲ್ಲದೆ ಅವರನ್ನು ಹಿಂದಕ್ಕೆ ಕಳಿಸುವ ಸನ್ನಾಹ ಸರಿಯಲ್ಲ. ರಾಖೈನ್ ರಾಜ್ಯದಲ್ಲಿ ನೆಲೆಸಿರುವ ರೋಹಿಂಗ್ಯಾಗಳ ಮೇಲೆ ದೌರ್ಜನ್ಯ ಎಸಗದಂತೆ ಮೈನ್ಮಾರ್ ಸರಕಾರದ ಮೇಲೆ ಭಾರತ ಸರಕಾರ ಒತ್ತಡ ತರುವುದು ಸಮಂಜಸ. ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿ ಅಂತೋನಿಯೋ ಗುಟೆರಸ್ ಹಾಗೂ ವಿಶ್ವಸಂಸ್ಥೆಯ ಭದ್ರತಾ ಮಂಡಲ ರೋಹಿಂಗ್ಯಾಗಳ ಮೇಲಿನ ಹಿಂಸಾಚಾರವನ್ನು ಖಂಡಿಸಿ, ಕೂಡಲೇ ಹತ್ಯಾಕಾಂಡವನ್ನು ಅಂತ್ಯಗೊಳಿಸುವಂತೆ ಮೈನ್ಮಾರ್ ಸರಕಾರವನ್ನು ಒತ್ತಾಯಪಡಿಸಿವೆ. ಜನಾಂಗವೊಂದರ ನಿರ್ನಾಮದ ಸಂಚು ಎಂದು ಬಣ್ಣಿಸಿರುವ ವಿಶ್ವಸಂಸ್ಥೆಯು ಹತ್ತು ಲಕ್ಷದ ಜನಸಂಖ್ಯೆಯಲ್ಲಿ ನಾಲ್ಕು ಲಕ್ಷ ಜನ ನಿರಾಶ್ರಿತರಾಗಿ ವಲಸೆ ಹೋಗಿರುವುದರತ್ತ ಗಮನ ಸೆಳೆದಿದೆ.

ಇತ್ತೀಚೆಗೆ ಮೈನ್ಮಾರ್‌ಗೆ ಭೇಟಿ ನೀಡಿದ್ದ ಭಾರತದ ಪ್ರಧಾನಿ ನರೇಂದ್ರ ಮೋದಿಯವರು ರೋಹಿಂಗ್ಯಾ ಮುಸಲ್ಮಾನರ ಮೇಲೆ ಜರುಗುತ್ತಿದ್ದ ಅಮಾನವೀಯ ದೌರ್ಜನ್ಯವನ್ನು ಪ್ರಸ್ತಾಪಿಸಲೇ ಇಲ್ಲ. ರಾಖೈನ್ ಪ್ರಾಂತದಲ್ಲಿರುವ ರೋಹಿಂಗ್ಯಾ ಜನಾಂಗದ ಮೇಲೆ ೨೦೧೨ರಿಂದ ಸರಕಾರ ದಬ್ಬಾಳಿಕೆ ನಡೆಸುತ್ತಾ ಬಂದಿದೆ. ವಿದೇಶಾಂಗ ಸಚಿವಾಲಯ ಕಳವಳ ವ್ಯಕ್ತಪಡಿಸಿ, ಸರಕಾರ ಸಮಸ್ಯೆಯನ್ನು ಸಮಚಿತ್ತದಿಂದ ಬಗೆಹರಿಸಬೇಕೆಂದು ಹೇಳಿದೆಯೇ ಹೊರತು ಬೇರಾವ



ಒತ್ತಡವನ್ನೂ ತಂದಿಲ್ಲ. ಅದು ಒಂದು ಬಗೆಯ ಅರೆ ಮನಸ್ಸಿನ ಧೋರಣೆ ತಳೆದಿದೆ. ಚೀಣಾವನ್ನು ಹೊರತುಪಡಿಸಿ ವಿಶ್ವದಾದ್ಯಂತ ಸರಕಾರ ಹಾಗೂ ಜನತೆ ರೋಹಿಂಗ್ಯಾಗಳ ಹತ್ಯೆಯನ್ನು ಖಂಡಿಸಿವೆ.

ಏನಿದು ರೋಹಿಂಗ್ಯಾ ಸಮಸ್ಯೆ ? ಮೈನ್ಮಾರ್‌ನ ಅರಕಾನ್ ಪ್ರದೇಶದಲ್ಲಿ ೯ ಮತ್ತು ೧೦ನೇ ಶತಮಾನದ ಕಾಲದಲ್ಲಿ ನೆಲೆಸಿದ ಜನರಿಗೆ ರೋಹಂಗ್ ಅಥವಾ ರೋಹನ್ ಎಂದು ಕರೆಯುತ್ತಿದ್ದರು. ಅವರೇ ರೋಹಿಂಗ್ಯಾಗಳೆಂದು ಈಗ ಗುರುತಿಸಲ್ಪಡುತ್ತಿದ್ದಾರೆ. ಮಂಗೋಲಿಯ ಹಿನ್ನೆಲೆಯಿಂದ ಬಂದವರು ಮತ್ತು ಹಿಂದೂಗಳು ಈ ಪ್ರಾಂತದಲ್ಲಿ ಬಂದು ನೆಲೆಸಿದ್ದು ಅನಂತರ. ಇವರನ್ನು ರಾಖೈನ್ ಜನ ಎಂದೂ ಕರೆಯುತ್ತಾರೆ. ಅಧಿಕವಾಗಿ ಇಲ್ಲಿ ನೆಲೆಸಿರುವವರು ಮುಸಲ್ಮಾನ ಧರ್ಮೀಯರು. ಒಂದು ಬಗೆಯ ಬಂಗಾಳಿ ಉಪಭಾಷೆ ಮಾತನಾಡುವ ಜನ ಇವರು. ಮೈನ್ಮಾರ್‌ನ ಜನಸಂಖ್ಯೆಯಲ್ಲಿ ಶೇ. ೮೮ರಷ್ಟು ಜನ ಬೌದ್ಧಮತಸ್ಥರು, ಉಳಿದವರು ಇತರರು. ಇವರ ಪೈಕಿ ಮುಸಲ್ಮಾನರು ಶೇ. ೪.೩ರಷ್ಟು . ಇವರು ನೆಲೆಸಿರುವುದು ರಾಖೈನ್ ಪ್ರಾಂತದಲ್ಲಿ. ಎರಡನೇ ಮಹಾಯುದ್ಧದ ಕಾಲದಲ್ಲಿ ಬ್ರಿಟಿಷ್‌ರೊಂದಿಗೆ ಕೈಜೋಡಿಸಿ ಇವರು ಜಪಾನೀ ಸೇನೆಯನ್ನು ಎದುರಿಸಿದರು. ಬೌದ್ಧರು ಜಪಾನೀಯರಿಗೆ ಬೆಂಬಲ ನೀಡುತ್ತಿದ್ದರು. ಬ್ರಿಟಿಷರ ಆಡಳಿತ ಕಾಲದಲ್ಲಿ ಯಾವ ತೊಂದರೆಯೂ ಇಲ್ಲದೆ ಬಾಳು ಸಾಗಿಸುತ್ತಿದ್ದ ರೋಹಿಂಗ್ಯಾಗಳು ಸ್ವಾತಂತ್ರ್ಯಾನಂತರದ ಬರ್ಮಾ ದೇಶದಲ್ಲಿ ಮಿಲಿಟರಿ ಸರ್ವಾಧಿಕಾರ ಸ್ಥಾಪನೆಯಾಗುವವರೆಗೆ ಸಮಸ್ಯೆ ಇಲ್ಲದೆ ಇದ್ದರು. ೧೯೮೨ರಲ್ಲಿ ಮಿಲಿಟರಿ ಆಡಳಿತ ಬಂದ ನಂತರ ದೇಶದ ಹೆಸರನ್ನು ಮೈನ್ಮಾರ್ ಎಂದು ಬದಲಿಸಿದ್ದಲ್ಲದೆ, ದೇಶದಲ್ಲಿ ವಾಸಿಸುತ್ತಿದ್ದ ೧೩೫ ಜನಾಂಗಗಳ ಪಟ್ಟಿಯಿಂದ ರೋಹಿಂಗ್ಯಾಗಳನ್ನು ಹೊರಗಿಟ್ಟು, ಕಾನೂನು ಒಂದನ್ನು ರೂಪಿಸಿ ಅವರಿಗೆ ಯಾವ ನಾಗರಿಕ ಸೌಲಭ್ಯವೂ ದೊರೆಯದಂತೆ ಮಾಡಿತು. ಹೀಗೆ ಪೌರತ್ವವನ್ನು ಕಳೆದುಕೊಂಡು ರೋಹಿಂಗ್ಯಾಗಳು ರಾಖೈನ್ ಪ್ರಾಂತದಲ್ಲಿ ನೆಲೆಯೂರಿ ಮೈನ್ಮಾರ್ ಮಿಲಿಟರಿ ದಬ್ಬಾಳಿಕೆಗೆ ಈಡಾಗಿದ್ದರು. ಆಗಿನಿಂದ ಈ ಜನಾಂಗದವರು ಹಿಂಸಾಚಾರದ ನೆರಳಿನಲ್ಲಿ ಭಯಭೀತಿಯಿಂದ ಜೀವಿಸುತ್ತ ಬಂದಿದ್ದಾರೆ. ಬಡತನದಿಂದ, ತಾರತಮ್ಯ ಧೋರಣೆಗೆ ಬಲಿಯಾಗಿ ಬದುಕುತ್ತಿದ್ದಾರೆ.

ರೋಹಿಂಗ್ಯಾ ಜನಾಂಗದ ಮೇಲೆ ದೊಡ್ಡ ಪ್ರಮಾಣದಲ್ಲಿ ಹಿಂಸಾಚಾರ ಪ್ರಾರಂಭವಾದ್ದು ಇಪ್ಪತ್ತೊಂದನೇ ಶತಮಾನದ ಪ್ರಾರಂಭದಲ್ಲಿ. ೨೦೧೨ರಲ್ಲಿ ಸಿಟ್ವೆ ಎಂಬ ನಗರದಲ್ಲಿ ಪ್ರಾರಂಭವಾದ ಜನಾಂಗೀಯ ಘರ್ಷಣೆಗಳಲ್ಲಿ ಒಂದು ಲಕ್ಷ ಮಂದಿ ರೋಹಿಂಗ್ಯಾಗಳು ನಿರಾಶ್ರಿತರಾದರು. ಮನೆಮಠ ಆಸ್ತಿ – ಪಾಸ್ತಿ ಎಲ್ಲ ಕಳೆದುಕೊಂಡು ಸರಕಾರ ಸ್ಥಾಪಿಸಿದ್ದ ನಿರಾಶ್ರಿತರ ಶಿಬಿರಗಳಲ್ಲಿ ಆಶ್ರಯ ಪಡೆದರು. ಹಿಂಸಾಚಾರವನ್ನು ಸಹಿಸಲಾಗದೆ ಸಹಸ್ರಾರು ಮಂದಿ ನೆರೆಯ ದೇಶಗಳಲ್ಲಿ ನಿರಾಶ್ರಿತರಾಗಿ ಬಂದು ನೆಲೆಸಿದರು. ಭಾರತದಲ್ಲೂ ಕೂಡ ಆಗ ಹತ್ತಾರು ಸಾವಿರ ರೋಹಿಂಗ್ಯಾಗಳು ಬಂದು ನೆಲೆಸಿದರು. ೨೦೧೫ರಲ್ಲಿ ಆಂಗ್‌ಸಾನ್ ಸೂಕಿಯ ನೇತೃತ್ವದಲ್ಲಿ ನ್ಯಾಷನಲ್ ಲೀಗ್ ಆಫ್ ಡೆಮಾಕ್ರಸಿ ಪಕ್ಷ ಚುನಾವಣೆಗಳಲ್ಲಿ ಜಯ ಗಳಿಸಿ ನಾಗರಿಕ ಸರಕಾರ ಸ್ಥಾಪಿಸಿತು ಮಿಲಿಟರಿ ಆಡಳಿತದೊಂದಿಗೆ ಹೊಂದಾಣಿಕೆ






ಮಾಡಿಕೊಂಡು. ಪ್ರಮುಖ ಸಚಿವಾಲಯಗಳು, ಮುಖ್ಯವಾಗಿ ರಕ್ಷಣಾ ಇಲಾಖೆ, ವಿದೇಶಾಂಗ ಸಚಿವಾಲಯ, ಆಂತರಿಕ ಭದ್ರತೆ, ಹಣಕಾಸು ಮುಂತಾದವು ಮಿಲಿಟರಿಯವರ ವಶದಲ್ಲಿಯೇ ಇವೆ. ಹಾಗಾಗಿ ಸೂಕಿ ನೆಪಮಾತ್ರಕ್ಕೆ ಅಧಿಕಾರದ ಚುಕ್ಕಾಣಿ ಹಿಡಿದಿದ್ದಾರೆ ಅಷ್ಟೆ. ೨೦೧೬ರಲ್ಲಿ ರೋಹಿಂಗ್ಯಾ ಮುಸ್ಲಿಮರ ಮೇಲೆ ಮತ್ತೆ ಹಲ್ಲೆ ಪ್ರಾರಂಭವಾಯಿತು. ವಸ್ತುಶಃ ಆಗಿನಿಂದ ರಾಖೈನ್ ಪ್ರಾಂತದ ಜನ ಮಿಲಿಟರಿ ಆಕ್ರಮಣದಲ್ಲಿದ್ದಾರೆ ಎಂದೇ ಹೇಳಬೇಕು. ಆಗಿನಿಂದಲೂ ಹತ್ಯಾಕಾಂಡ ಜರುಗುತ್ತಾ ಬಂದಿದ್ದು ಮೂರನೇ ಒಂದು ಭಾಗ ಜನ ನಿರಾಶ್ರಿತರಾಗಿ ನೆರೆಯ ದೇಶಗಳಿಗೆ, ಮುಖ್ಯವಾಗಿ ಬಂಗ್ಲಾದೇಶಕ್ಕೆ ಹೋಗಿದ್ದಾರೆ. ಇಂಡೋನೇಷಿಯ ಮತ್ತಿತರ ದೇಶಗಳಿಗೂ ಹೋಗಿದ್ದಾರೆ.

ಆಂಗ್‌ಸಾನ್ ಸೂಕಿಯ ಸಲಹೆಯಂತೆ ಪರಿಸ್ಥಿತಿ ಅಧ್ಯಯನ ಮಾಡಿ ಪರಿಹಾರ ಕಂಡುಕೊಳ್ಳಲು ವಿಶ್ವಸಂಸ್ಥೆ ಹಾಗೂ ಮೈನ್ಮಾರ್ ಸರಕಾರದ ಪ್ರತಿನಿಧಿಗಳ ಆಯೋಗವೊಂದು ರಚನೆಯಾಗಿದ್ದರೂ ಏನೂ ಪ್ರಯೋಜನವಾಗಲಿಲ್ಲ. ಆಡಳಿತ ಯಂತ್ರದ ಮೇಲೆ ಮಿಲಿಟರಿಯ ನಿಯಂತ್ರಣ ಎಷ್ಟು ಎಂಬುದನ್ನು ಇದರಿಂದ ಅರಿಯಬಹುದು. ಮಿಲಿಟರಿ ಆಡಳಿತ ಪ್ರಾರಂಭವಾದಾಗಿನಿಂದ ಸರಕಾರ ವಿಶ್ವಸಂಸ್ಥೆಯ ಸದಸ್ಯತ್ವದಿಂದ ಕಳಚಿಕೊಂಡಿತು. ಕೆಲರಾಷ್ಟ್ರಗಳೊಟ್ಟಿಗೆ ಮಾತ್ರ ಸಂಬಂಧ ಬೆಳೆಸಿತು. ಅವುಗಳ ಪೈಕಿ ಚೀಣ ಒಂದು. ಮತ್ತೆ ಮೈನ್ಮಾರ್ ವಿಶ್ವಸಂಸ್ಥೆ ಸದಸ್ಯತ್ವ ಪಡೆದುಕೊಂಡದ್ದು ಆಂಗ್‌ಸಾನ್ ಸೂಕಿ ನೇತೃತ್ವದಲ್ಲಿ ಸರಕಾರ ಸ್ಥಾಪನೆಯಾದ ನಂತರವೆ. ಸದ್ಯದಲ್ಲೇ ಜರುಗಲಿರುವ ವಿಶ್ವಸಂಸ್ಥೆಯ ಮಹಾಸಭೆಯಲ್ಲಿ ಭಾಗವಹಿಸದಿರಲು ಆಂಗ್‌ಸಾನ್ ಸೂಕಿ ನಿರ್ಧರಿಸಿದ್ದಾರೆ. ಇದಕ್ಕೆ ಕಾರಣ ದೇಶದಲ್ಲಿ ಉಂಟಾಗಿರುವ ಪರಿಸ್ಥಿತಿ ಮತ್ತು ಜನಾಂಗೀಯ ದ್ವೇಷ ಹಾಗೂ ಲಕ್ಷಗಟ್ಟಳೆ ಜನ ನಿರಾಶ್ರಿತರಾಗಿ ವಲಸೆ ಹೋಗಿರುವುದು.

ರಾಖೈನ್ ಪ್ರಾಂತದಲ್ಲಿರುವ ರೋಹಿಂಗ್ಯಾಗಳ ಸ್ಥಿತಿ ದಾರುಣವಾಗಿದೆ. ಯಾವುದೇ ರೀತಿಯ ನೆರವು ಅವರಿಗೆ ದೊರೆಯದ ಹಾಗೆ ಮಿಲಿಟರಿ ಕಾವಲಿದೆ. ಆಹಾರ ಮತ್ತು ಔಷಧ ಸಾಮಗ್ರಿಗಳು ದೊರೆಯದೆ ಜನ ಪರದಾಡುವಂತಾಗಿದೆ. ಇಷ್ಟೆಲ್ಲಾ ಅನಾಹುತವಾಗುತ್ತಿದ್ದರೂ ಮಿಲಿಟರಿ ಅಧಿಕಾರಿಗಳು ಪಟ್ಟು ಸಡಿಲಿಸುತ್ತಿಲ್ಲ. ರೋಹಿಂಗ್ಯಾಗಳ ಮೇಲೆ ಅತ್ಯಾಚಾರ ಮತ್ತು ಹಿಂಸಾಚಾರ ಮುಂದುವರಿಯುತ್ತಿದೆ. ರೋಹಿಂಗ್ಯಾಗಳನ್ನು ಸಂಪೂರ್ಣವಾಗಿ ದೇಶದಿಂದ ಹೊರಹಾಕುವುದೇ ಮಿಲಿಟರಿಯ ಉದ್ದೇಶವಾಗಿದೆ. ಇದನ್ನು ನಾಗರಿಕ ಜಗತ್ತು ಒಕ್ಕೊರಳಿನಿಂದ ಖಂಡಿಸಿ, ರೋಹಿಂಗ್ಯಾಗಳ ಮೇಲೆ ದೌರ್ಜನ್ಯ ನಿಲ್ಲಿಸುವಂತೆ ಮೈನ್ಮಾರ್ ಸರಕಾರದ ಮೇಲೆ ಒತ್ತಡ ತರುವುದು ಜರೂರು ಅಗತ್ಯ. ಭಾರತ ಸರಕಾರ ನಿರಾಶ್ರಿತರ ಕುರಿತ ಇಬ್ಬಂದಿತನವನ್ನು ಬಿಟ್ಟು ಸಮಸ್ಯೆಯನ್ನು ಬಗೆಹರಿಸುವಂತೆ ಮೈನ್ಮಾರ್ ಸರಕಾರದ ಮೇಲೆ ಒತ್ತಡ ತರಬೇಕಿದೆ.

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೭ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ಹಗಲು ವೇಷಗಾರರ ಚಿತ್ರಕಲೆ

ಡಾ॥ ಸಂತೋಷಕುಮಾರ ಕುಲಕರ್ಣಿ

**ಮಾ**ನವನು ವಿಕಾಸ ಹೊಂದಿದಂತೆ ತನ್ನ ಸುತ್ತಮುತ್ತಲ ಪರಿಸರದಲ್ಲಿ ಕಾಣುವಂತಹ ಪ್ರಾಣಿ, ಪಕ್ಷಿ, ಆಚರಣೆಗಳು ಹಾಗೂ ನಿಸರ್ಗದಲ್ಲಿ ತನಗೆ ಗೋಚರಿಸುವಂತಹ ಬಗೆ ಬಗೆಯ ಆಕೃತಿಗಳನ್ನು ತನ್ನ ಚಿತ್ರಗಳಲ್ಲಿ ಸೆರೆಹಿಡಿಯಲು ಪ್ರಯತ್ನಿಸಿದನು. ಹೀಗಾಗಿ ಮಾನವನು ಸಂವಹನಕ್ಕೆ ಮೂಲವಾಗಿ ಚಿತ್ರಕಲೆಯನ್ನು ಅವಲಂಬಿಸಿರುವದು ಕಂಡುಬರುತ್ತದೆ. ಇಂದು ಚಿತ್ರಕಲೆಯಲ್ಲಿ ಹಲವಾರು ಬದಲಾವಣೆಗಳು ಉಂಟಾಗಿ ಆಧುನಿಕ ಸಮುದಾಯದವರಿಂದ ಹಿಡಿದು ಬುಡಕಟ್ಟು ಸಮುದಾಯಗಳವರೆಗೂ ಅವರವರ ಆಚರಣೆ ಪದ್ಧತಿಗಳಿಗನುಸಾರವಾಗಿ ಚಿತ್ರಕಲೆಯು ಬಳಕೆಯಲ್ಲಿದೆ. ಹಲವಾರು ಶತಮಾನಗಳಿಂದ ಬೆಟ್ಟ-ಗುಡ್ಡಗಳಲ್ಲಿ ವಾಸಿಸುತ್ತಾ ತಮ್ಮ ಸಮುದಾಯದಲ್ಲಿ ವಿಶಿಷ್ಟವಾದ ಆಚರಣೆಗಳನ್ನು ಆಚರಿಸಿಕೊಂಡು ಬಂದಂತಹ ಹಲವಾರು ಬುಡಕಟ್ಟು ಜನಾಂಗಗಳಿವೆ. ಆಧುನಿಕತೆಯ ಸೌಲಭ್ಯಗಳಿಂದ ವಂಚಿತರಾಗಿರುವ ಬುಡಕಟ್ಟು ಜನಾಂಗಗಳು ಕಾಡುಮೇಡುಗಳಲ್ಲಿ ಅಲೆಯುತ್ತಾ ಅಲ್ಲಿ ದೊರೆಯುವಂತಹ ವಸ್ತುಗಳನ್ನು ಮಾರಾಟ ಮಾಡುತ್ತಾ ಜೀವನ ಸಾಗಿಸುತ್ತಿರುವಂತಹ ಹಲವಾರು ಬುಡಕಟ್ಟು ಜನಾಂಗಗಳಿವೆ. ಈ ನಾಡಿನ ಹಲವು ಪ್ರದೇಶಗಳಲ್ಲಿ ವಿವಿಧ ಬಗೆಯ ಬುಡಕಟ್ಟುಗಳು ಕಂಡುಬರುತ್ತವೆ.

ದಾವಣಗೆರೆ ಜಿಲ್ಲೆಯಾದ್ಯಂತ ಹಲವು ಬಗೆಯ ಬುಡಕಟ್ಟುಗಳು, ಜನಾಂಗಗಳಿವೆ. ಹಗಲು ವೇಷಗಾರರು ಅಥವಾ ಬುಡುಗಜಂಗಮರೆಂದು ಕರೆಯಲ್ಪಡುವ ಬುಡಕಟ್ಟು ಜನಾಂಗದವರು ದಾವಣಗೆರೆ ಜಿಲ್ಲೆಯಲ್ಲಿಯ ಹರಪನಹಳ್ಳಿ, ನಿಟ್ಟುವಳ್ಳಿ, ಹರಿಹರ ಹಾಗೂ ಗುತ್ತೂರುಗಳಲ್ಲಿ ಕಂಡುಬರುತ್ತಾರೆ. ಹಗಲು ವೇಷಗಾರರು ಎಂದು ಕರೆಯಲ್ಪಡುವ ಈ ಬುಡಕಟ್ಟುಗಳ ಮೂಲಸ್ಥಾನ ಆಂಧ್ರಪ್ರದೇಶ. ಶತಮಾನಗಳಿಂದ ಹೊಟ್ಟೆಪಾಡಿಗಾಗಿ ವಿವಿಧ ಬಗೆಯ ವೇಷಗಳನ್ನು ಹಾಕಿ, ಪ್ರದರ್ಶನಗಳನ್ನು ನೀಡುತ್ತಾ ಇಲ್ಲಿ ಜೀವನ ಸಾಗಿಸುತ್ತಾ ಈ ಪ್ರದೇಶಗಳಲ್ಲಿ ನೆಲೆ ನಿಂತಿದ್ದಾರೆ.

ಹಗಲು ವೇಷಗಾರರ ಮದುವೆ ಮುಂತಾದ ಕಾರ್ಯಕ್ರಮಗಳಲ್ಲಿ ಸಂಗೀತ ವಾದ್ಯಗಳಾದ ಓಲಗ, ಮೇಳ ಮುಂತಾದವುಗಳನ್ನು ಬಳಸಲಾಗುತ್ತದೆ. ಮದುವೆಯ ಸಂದರ್ಭದಲ್ಲಿ ಕರಿ ಕಂಬಳಿಯ ಗದ್ದಿಗೆಯ ಮೇಲೆ ತಿಳಿ ಹಳದಿ ಬಣ್ಣ ಮಿಶ್ರಿತ ಅಕ್ಕಿಯ ಹಸೆಯನ್ನು ಹಾಕುತ್ತಾರೆ. ಅವುಗಳಲ್ಲಿ ಚೌಕಾಕಾರವಾಗಿ ಅಕ್ಕಿಯಿಂದ ಚಿತ್ರಿಸಿದ ಚಿತ್ರಣದ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ 'X' ಆಕಾರದ ಆಕೃತಿಯನ್ನು ರಚಿಸುತ್ತಾರೆ. ಚೌಕಾಕಾರದ ಎಲ್ಲಾ ಮೂಲೆಗಳಲ್ಲಿಯೂ ಗೋಲಾಕೃತಿಗಳಿರುತ್ತವೆ. ಚೌಕಾಕಾರ ಒಂದು ಮಗ್ಗುಲಿಗೆ ತಾಗುವಂತೆ ತ್ರಿಶೂಲ, ಇನ್ನೊಂದು ಭಾಗಕ್ಕೆ ಬಾಸಿಂಗ ಮತ್ತು ಇನ್ನೊಂದು ಭಾಗದಲ್ಲಿ 'ಓಂ'ಕಾರದ ಹಾಗೂ ಪಾದದ ಚಿತ್ರಣದಿಂದ ರಚಿತವಾಗಿರುತ್ತದೆ. ಬಾಸಿಂಗ ಹಾಗೂ ಪಾದಗಳು ಬರುವ ಎದುರು ಬದುರಿನ ಸ್ಥಳಗಳಲ್ಲಿ ಸೂರ್ಯ, ಚಂದ್ರರ ಚಿತ್ರಗಳನ್ನು ಚಿತ್ರಿಸಿರುತ್ತಾರೆ. ಇಲ್ಲಿ ಚಿತ್ರಣಗೊಂಡಿರುವಂತಹ ಸೂರ್ಯ, ಚಂದ್ರ, ಪಾದ, ಬಾಸಿಂಗ. ಓಂಕಾರ









ಹಾಗೂ ತ್ರಿಶೂಲಾಕಾರಗಳು ನೋಡಲು ಸಾಮಾನ್ಯ ಆಕಾರಗಳಂತೆ ಕಂಡರೂ ಸಹ ಅವುಗಳ ತುಂಬ ಅರ್ಥಗರ್ಭಿತ ಹಾಗೂ ಸಾಂಕೇತಿಕ ಅರ್ಥ ಕೊಡುವ ವಿಷಯಗಳನ್ನು ನಿರೂಪಿಸುವಂಥವುಗಳಾಗಿವೆ.

ಹಗಲಿನಲ್ಲಿ ಮಾತ್ರ ವೇಷಭೂಷಣವನ್ನು ಧರಿಸಿಕೊಂಡು ಪ್ರದರ್ಶಿಸಲ್ಪಡುವ ಈ ಕಲೆಯು ಬುಡ ಕಟ್ಟುಗಳ ಕಸುಬುಗಳಲ್ಲಿ ಅತ್ಯಂತ ಪ್ರಮುಖವಾದುದು. ಕೇವಲ ಗಂಡುಮಕ್ಕಳು ಮಾತ್ರ ಈ ಪ್ರದರ್ಶನ ಕಲೆಯಲ್ಲಿ ಭಾಗವಹಿಸುವಂತಿದ್ದು, ಬೇರೆ ಬೇರೆ ಪ್ರದೇಶಗಳಿಗೆ ಹೋಗಿ ಅಲ್ಲಿ ವಾಸ್ತವ್ಯ ಹೂಡಿ ತಮ್ಮ ಕಲೆಯ ಪ್ರದರ್ಶನವನ್ನು ನೀಡುತ್ತಾರೆ. ತಮ್ಮ ಪ್ರದರ್ಶನಕ್ಕೆ ಸಂಗೀತವನ್ನು ಪ್ರಧಾನವಾಗಿ ಇಟ್ಟುಕೊಂಡ ಕಲೆಗಳನ್ನು ಮಾತ್ರ ಆಯ್ಕೆ ಮಾಡಿಕೊಳ್ಳುತ್ತಾರೆ. ಹರಪನಹಳ್ಳಿಯಲ್ಲಿರುವ ಈ ಬುಡಕಟ್ಟುಗಳು ಮೊದಲು ಮೂವತ್ಮೂರು ಬಗೆಯ ಕತೆಗಳ ಪ್ರದರ್ಶನಗಳನ್ನು ನಡೆಸುತ್ತಿದ್ದರು. ಈಗ ಕೇವಲ ಐದು ಬಗೆಯ ಕತೆಗಳನ್ನು ಆಧರಿಸಿ ಪ್ರದರ್ಶನಗಳನ್ನು ನೀಡುತ್ತಿದ್ದಾರೆ. ಅವುಗಳಲ್ಲಿ ಮೋಹಿನಿ – ಭಸ್ಮಾಸುರ, ಶಿವ – ಪಾರ್ವತಿ (ಅರ್ಧನಾರೀಶ್ವರ), ಭೀಮಾಂಜನೇಯ ಯುದ್ಧ, ಶಿವ – ಜಂಗಮ – ಕಬೀರದಾಸ ಎನ್ನುವ ಕತೆಗಳನ್ನು ಆಯ್ಕೆ ಮಾಡಿ ಪ್ರದರ್ಶಿಸುತ್ತಾರೆ. ತಮ್ಮ ಈ ಪ್ರದರ್ಶನದ ಸಂದರ್ಭದಲ್ಲಿ ಹಾರ್ಮೋನಿಯಂ, ತಬಲ, ಬುಡ್ಗ ಮುಂತಾದ ಸಂಗೀತ ಉಪಕರಣ ಗಳನ್ನು ಬಳಸುತ್ತಾರೆ.

ಹಗಲು ವೇಷಗಾರರು ಕಲೆಗಳಿಗನುಸಾರವಾಗಿ ತಮ್ಮ ತಮ್ಮ ಪಾತ್ರಗಳಿಗೆ ತಾವೇ ಮುಖವರ್ಣಿಕೆ ಯನ್ನು ಮಾಡಿಕೊಳ್ಳುತ್ತಾರೆ. ಹಾಗೆಯೇ ಕತೆಗಳಿಗನು ಸಾರವಾಗಿ ಬೇಕಾಗುವಂತಹ ವೇಷಭೂಷಣವನ್ನು ತಾವೇ ತಯಾರಿಸಿಕೊಳ್ಳುತ್ತಾರೆ. ತಮ್ಮ ಪಾತ್ರಗಳಿಗೆ ಬೇಕಾಗುವ ಕೆಂಪು, ನೀಲಿ, ಹಳದಿ, ಹಸಿರುಗಳಂತಹ ಬಣ್ಣಗಳನ್ನು ಆಯ್ಕೆಮಾಡಿಕೊಂಡು ಕೊಬ್ಬರಿ ಎಣ್ಣೆಯೊಂದಿಗೆ ಮಿಶ್ರಣ ಮಾಡಿ ಮುಖಕ್ಕೆ ಲೇಪಿಸಿಕೊಳ್ಳುತ್ತಾರೆ. ಕಪ್ಪು ವರ್ಣಕ್ಕೆ ದೀಪದಿಂದ ದೊರೆಯುವಂತಹ ಕಪ್ಪನ್ನು ಬಳಸುತ್ತಾರೆ. ಋಷಿ, ರಾಜ–ಮಹಾರಾಜರ ಪಾತ್ರಕ್ಕೆ ಬೇಕಾಗುವ ಗಡ್ಡ, ತಲೆಕೂದಲುಗಳನ್ನು ಕುದುರೆ ಬಾಲದಿಂದ ತಯಾರಿಸಿಕೊಳ್ಳುತ್ತಾರೆ. ಆಭರಣಗಳಿಗೆ ರಟ್ಟಿನಲ್ಲಿ ಕತ್ತರಿಸಿ ವಿವಿಧ ಬಗೆಯ ಕಿರೀಟ, ತೋಳುಬಂದಿ, ಹಾರಗಳನ್ನು ತಯಾರಿಸಿಕೊಳ್ಳುತ್ತಾರೆ. ಅವುಗಳಿಗೆ ಮಿಂಚಿನ ಕಾಗದವನ್ನು ಅಂಟಿಸಿ, ಜಾತ್ರೆಗಳಲ್ಲಿ ದೊರೆಯುವಂತಹ ಮಣಿಗಳನ್ನು ಬಳಕೆ ಮಾಡಿಕೊಳ್ಳುತ್ತಾರೆ. ಪೌರಾಣಿಕ ಕತೆಗಳಿಗೆ ಬೇಕಾಗುವ ಗದೆ, ಕತ್ತಿಗಳಂತಹ ಬಗೆಬಗೆಯ ಆಯುಧಗಳಿಗೆ ಸ್ಟೀಲಿನಿಂದ ಮಾಡಿದ ಬಟ್ಟಲುಗಳನ್ನು ಉಪಯೋಗಿಸುತ್ತಾರೆ. ಇದರಿಂದ ಅವುಗಳು ಹಗುರವಾಗಿ ಸಾಗಾಣಿಕೆಗೆ ಅನುಕೂಲವಾಗುತ್ತದೆ. ಅಲೆಮಾರಿಗಳಾದ ಇವರು ಹಗುರವಾಗಿರುವಂತಹ ವಸ್ತುಗಳನ್ನು ಆಯ್ಕೆಮಾಡಿಕೊಳ್ಳುತ್ತಾರೆ. ಹಗಲು ವೇಷಗಾರ ನಡೆಸುವ ಪ್ರದರ್ಶನ ಕಲೆ ಗಳಲ್ಲಿ ವಿಶೇಷತೆಯನ್ನು ಹೊಂದಿದ ಶಿವ–ಪಾರ್ವತಿಯ (ಅರ್ಧನಾರೀಶ್ವರ) ವೇಷಭೂಷಣಗಳು ವಿಶೇಷತೆಯಿಂದ ಕೂಡಿರುತ್ತದೆ. ಈ ಅಭಿನಯಕ್ಕೆ ತಕ್ಕಂತೆ ಒಬ್ಬನೇ ವೇಷಗಾರನು ಶಿವ ಹಾಗೂ ಪಾರ್ವತಿಯ ವೇಷಗಳನ್ನು ಧರಿಸುತ್ತಿದ್ದದ್ದು ವಿಶೇಷವಾಗಿರುತ್ತದೆ. ಪಾತ್ರಧಾರಿಯು ತನ್ನ ಬಲಭಾಗಕ್ಕೆ ಶಿವನ ವೇಷವನ್ನು ಹಾಗೂ ಎಡಭಾಗಕ್ಕೆ ಪಾರ್ವತಿಯ ವೇಷಗಳನ್ನು ಧರಿಸಿರುತ್ತಾನೆ. ಶಿವನ ಕಲ್ಪನೆ ಬರುವ ದೃಷ್ಟಿಯಿಂದ ಕುದುರೆಯ ಕೂದಲಿನಿಂದ ಮಾಡಿದ ತುರುಬನ್ನು ಕಟ್ಟಿ ಅದರ ಮೇಲೆ ಅರ್ಧಚಂದ್ರಾಕೃತಿಯನ್ನು ಕಟ್ಟಿಕೊಂಡಿರುತ್ತಾನೆ. ಎಡಭಾಗದ ಪಾರ್ವತಿ ವೇಷಕ್ಕೆ ಹೂವುಗಳನ್ನು ಕಟ್ಟಿಕೊಂಡಿರುತ್ತಾನೆ. ಆತನ ಬಲಭಾಗಕ್ಕೆ ಶಿವನ ವರ್ಣವಾದ ನೀಲಿ, ಹಸಿರು ಹಾಗೂ ಬಿಳಿ ವರ್ಣಗಳ ಮಿಶ್ರಣವನ್ನು ಮಾಡಿ ಮುಖವರ್ಣಿಕೆಯನ್ನು ಮಾಡಿಕೊಂಡಿರುತ್ತಾರೆ. ಹಾಗೆಯೇ ಪಾರ್ವತಿಯ ವೇಷವನ್ನು ಧರಿಸುವ ಎಡಭಾಗಕ್ಕೆ ಮಾನವರೂಪದ ನೈಜ ವರ್ಣವನ್ನು ಬಳಕೆ ಮಾಡಿ ಹಣೆಯ ಮಧ್ಯದಲ್ಲಿ ಕುಂಕುಮದ ಬೊಟ್ಟನ್ನಿಟ್ಟಿರುತ್ತಾರೆ. ವೇಷಧಾರಿಯು ತನ್ನ ಬಲಭಾಗಕ್ಕೆ ಅರ್ಧ ಮೀಸೆಯನ್ನು ಹಚ್ಚಿಕೊಂಡಿರುತ್ತಿದ್ದು, ಆತನ ಕುತ್ತಿಗೆಗೆ ಅರ್ಧ ನಾಗರಹಾವು ಹಾಗೂ ಇನ್ನರ್ಧ ಹಾರವನ್ನು ಹೆಣೆದು ಹಾಕಿಕೊಂಡಿರುತ್ತಾನೆ. ಸೊಂಟದ ಬಲಭಾಗಕ್ಕೆ ಅರ್ಧ ಹುಲಿಯ ಚರ್ಮದ ಬಟ್ಟೆಯನ್ನುಟ್ಟಿದ್ದು, ಇನ್ನರ್ಧ ಸೀರೆಯನ್ನು ಕಟ್ಟಿಕೊಂಡಿರುತ್ತಾನೆ. ಹಗಲು ವೇಷಗಾರರು ಹಾಕುವ ಪಾತ್ರಗಳಲ್ಲಿ ಇದೊಂದು ವಿಶಿಷ್ಟವಾದ ಉಡುಗೆತೊಡುಗೆಯೆಂದು ಪರಿಗಣಿಸ ಬಹುದಾಗಿದೆ. ಒಂದೇ ಮಾನವಾಕೃತಿಯಲ್ಲಿ ಎರಡು ಬಗೆಯ ವಿನ್ಯಾಸಗಳ ಬಳಕೆ ಮಾಡುವದು ವಿಶಿಷ್ಟವೂ ಹಾಗೂ ಗಮನಾರ್ಹವೂ ಆಗಿದೆ ಎಂದು ಪರಿಗಣಿಸಬಹುದು.

ಒಟ್ಟಾರೆಯಾಗಿ, ಹಗಲು ವೇಷಗಾರ ಜನಾಂಗ ಗಳಲ್ಲಿ ತಮ್ಮ ಜೀವನಕ್ರಮ ಸಾಗಿಸಲು ರಚನೆಗೊಂಡ ಈ ಚಿತ್ರಕಲೆ ಹಲವಾರು ಕಥಾನಕಗಳು ಆಚರಣೆಗಳು ಹಾಗೂ ನಂಬಿಕೆಯಂತಹ ಅಂಶಗಳ ಹಿನ್ನೆಲೆಯಲ್ಲಿ ರಚನೆಗೊಂಡಿರುವಂಥವು. ನಾಡಿನಲ್ಲಿರುವ ಪ್ರಭಾವಕ್ಕೆ ಒಳಗಾಗದೆ, ಅಲ್ಲಿರುವ ಯಾವುದೇ ವಿಷಯಕ್ಕೆ ತಲೆಕೆಡಿಸಿಕೊಳ್ಳದೆ ಬೇರೆ ಬೇರೆ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸಿದರೂ ಸಹ ತಮ್ಮ ಸಂಸ್ಕೃತಿಯ ಛಾಯೆಯನ್ನು ಯಥಾಪ್ರಕಾರವಾಗಿ ಕಾಪಾಡಿಕೊಂಡು ಹಲವಾರು ಅಧ್ಯಯನಕಾರರ ಗಮನವನ್ನು ಸೆಳೆಯುತ್ತ ತಮ್ಮ ಕಲೆಯನ್ನು ವಂಶಪಾರಂಪರಿಕವಾಗಿ ಉಳಿಸಿಕೊಂಡು ಬಂದಿದ್ದಾರೆ.

**ಡಾ॥ ಸಂತೋಷಕುಮಾರ ಕುಲಕರ್ಣಿ**
ಬೋಧನಾ ಸಹಾಯಕರು, ಪೇಂಟಿಂಗ್ ವಿಭಾಗ
ವಿಶ್ವವಿದ್ಯಾನಿಲಯ ದೃಶ್ಯಕಲಾ ಮಹಾವಿದ್ಯಾಲಯ
ದಾವಣಗೆರೆ

## ಹಬ್ಬ

ಝುಂಡಾ ಊಂಚಾ
ರಹೇ ಹಮಾರಾ...
ಬಿಸಿಲ ಧಗೆಯಲ್ಲಿ
ಮಕ್ಕಳ ಎತ್ತಿದ ಸ್ವರ.
ಪೆಂಡಾಲಿನಡಿಯಲ್ಲಿ
ಗಣ್ಯರಿಗೆ ಹಾರ–
ಉಪಾಹಾರ !

**ವ. ಉಮೇಶ ಕಾರಂತ**
ಮಂಗಳೂರು







# ಕಣ್ಮನ ತಣಿಸುವ ಕಡೂರ ಕಲಾವಿದ ಲಿಂಗರಾಜ್



ತಣ್ಣನೆಯ ವರ್ಣಗಳು ಮನಸ್ಸನ್ನು ತಿಳಿಯಾಗಿಸುತ್ತವೆ, ನುರಿತ ಕಲಾವಿದರು ವಿವಿಧ ವರ್ಣಗಳನ್ನು ಆಗಸದಂತಹ ಕ್ಯಾನ್‌ವಾಸ್‌ಗಳಲ್ಲಿ ಮೋಡದಂತೆ ಮೂಡಿಸಿ ನೋಡುಗರಲ್ಲಿ ಅಚ್ಚರಿ ಮೂಡಿಸುತ್ತಾರೆ. ಇಂತಹದ್ದೊಂದು ಅನುಭವ ಹಾಗೂ ಅಚ್ಚರಿಯನ್ನು ಚಿಕ್ಕಮಗಳೂರು ಜಿಲ್ಲೆ ಕಡೂರಿನ ಸೃಜನಶೀಲ ಚಿತ್ರಕಲಾವಿದ ಎಂ.ಎಸ್.ಲಿಂಗರಾಜ್ ಅವರ ಕಲಾಕೃತಿಗಳಲ್ಲಿ ಕಾಣುತ್ತೇವೆ.

ಲಿಂಗರಾಜ್ ಅವರ ಕಲಾಕೃತಿಗಳನ್ನು ನೋಡಿದಾಕ್ಷಣ ನಮ್ಮೊಳಗೊಂದು ಅನೂಹ್ಯ ಕಲ್ಪನೆ, ಖುಷಿ ಅನುರಣಿಸಿ ಆಪ್ಯಾಯಮಾನವಾಗುತ್ತವೆ. ನೋಡುಗರನ್ನು ತಕ್ಷಣಕ್ಕೆ ತನ್ನತ್ತ ಸೆಳೆದುಕೊಂಡು ಮಂತ್ರಮುಗ್ಧರನ್ನಾಗಿಸುವ ಶಕ್ತಿ ಇವರ ಎಲ್ಲ ಕಲಾಕೃತಿಗಳಲ್ಲಿವೆ. ಚಿತ್ರಕಲೆಯಲ್ಲಿ ಸ್ನಾತಕೋತ್ತರ ಪದವಿ ಪಡೆದು ಕಲಾಲೋಕಕ್ಕೆ ಅನನ್ಯ ಕೃತಿಗಳನ್ನು ಕಟ್ಟಿಕೊಡುತ್ತಿದ್ದಾರೆ.

ಮೈಸೂರು ದಸರಾ ನಿಮಿತ್ತ ನಡೆಯುವ ರಾಜ್ಯ ಮಟ್ಟದ ಕಲಾಪ್ರದರ್ಶನದಲ್ಲಿ ನಾಲ್ಕು ಬಾರಿ ಪ್ರಶಸ್ತಿ, ಟಿ. ಪಿ. ಅಕ್ಕಿ ಪ್ರಶಸ್ತಿ, ನವದೆಹಲಿಯ ಅಖಿಲ ಭಾರತ ಕಲಾಸ್ಪರ್ಧೆಯ ಪ್ರಶಸ್ತಿ (2015) ಹೀಗೆ ಹಲವು ಪ್ರಶಸ್ತಿ ಪುರಸ್ಕಾರಗಳನ್ನು ಮುಡಿಗೇರಿಸಿಕೊಂಡಿದ್ದಾರೆ. ಬೆಂಗಳೂರು, ಮೈಸೂರು, ದೆಹಲಿ, ಗೋವಾ, ಮುಂಬೈ ಮುಂತಾದೆಡೆ ತಮ್ಮ ಕಲಾಕೃತಿಗಳನ್ನು ಪ್ರದರ್ಶಿಸಿ ಕಲಾಸಕ್ತರ ಕಣ್ಮನ ತಣಿಸಿದ್ದಾರೆ.

ಹಂಪಿ, ಕೆಮ್ಮಣ್ಣುಗುಂಡಿ, ನಾಗ್ಪುರ, ಚುಂಚನಗಿರಿ, ಶ್ರವಣಬೆಳಗೊಳ, ಮೂಡಬಿದರೆಗಳಲ್ಲಿ ನಡೆದ ಪ್ರಮುಖ ಚಿತ್ರಕಲಾ ಶಿಬಿರಗಳಲ್ಲಿ ಪಾಲ್ಗೊಂಡ ಅನುಭವ ಲಿಂಗರಾಜರಿಗಿದೆ. ಭೂದೃಶ್ಯ ಮತ್ತು ಅಮೂರ್ತ ಶೈಲಿಯಲ್ಲಿಯೇ ಹೆಚ್ಚು ಹಿಡಿತ ಸಾಧಿಸಿರುವ ಇವರು ಬಣ್ಣ, ಕುಂಚ, ಕ್ಯಾನ್‌ವಾಸ್‌ಗಳೊಡನೆ ಆಡುವ-ಹಾಡುವ ಪರಿ ನಿಜಕ್ಕೂ ನಮ್ಮೊಳಗೊಂದು ಭರವಸೆಯ ಬೆಳಕನ್ನು ಬಿರಿಯುತ್ತದೆ.

– ಕೆ. ಬಿ. ವೀರಲಿಂಗನಗೌಡ್ರ, ಚಿತ್ರಕಲಾ ಶಿಕ್ಷಕ, ಎಸ್.ಆರ್.ಜಿ.ಹೆಚ್.ಎಂ. ಪ್ರೌಢಶಾಲೆ, ಸಿದ್ದಾಪುರ-581355







Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

